ಶ್ರೀ ಲಕ್ಷ್ಮೀನರಸಿಂಹ ಪ್ರಸೀದ.

ಶ್ರೀ ಗುರುರಾಜೋ ವಿಜಯತೇ

# ಶ್ರೀ ಸುಮಧ್ವ ವಿಜಯ

———:O:———

## ॥ ಹದಿನಾಲ್ಕನೆಯ ಸರ್ಗಸಾರ ಪ್ರಾರಂಭ ॥

---

ಲೋಕ ಹಿತಾರ್ಥ ಶ್ರೀಮದಾಚಾರ್ಯರ ನಿತ್ಯಾನ್ಹಿಕಾದಿ ಆಚರಣೆ

ಶ್ರೀ ಸರ್ವಜ್ಞರೆಂಬ ಸೂರ್ಯನು ಸಜ್ಜನರನ್ನು ಆನಂದಗೊಳಿಸುತ್ತ ವಿಷ್ಣುಮಂಗಳ ಇರುವಿಕೆ. ಜಯಸಿಂಹರಾಜನು ಪದ್ಮತೀರ್ಥನು ಕದ್ದ ಗ್ರಂಥಗಳನ್ನು ತರಿಸಿ ಮಹಾಸಭೆಯಲ್ಲಿ ಕ್ಷ ಬೇಡುತ್ತ ಶ್ರೀ ಮಧ್ವರಿಗೆ ಅರ್ಪಿಸುವಿಕೆ, ಶ್ರೀ ಸರ್ವಜ್ಞರ ಆಜ್ಞೆಯಂತೆ ಮಧ್ವಶಿಷ್ಯರಾದ ಶಂಕ ಚಾರ್ಯರು ಗ್ರಂಥಗಳನ್ನು ಸ್ವೀಕರಿಸುವಿಕೆ. ಇಂಥ ಸುಸಮಯದಲ್ಲಿ ಸಂತೋಷವನುಸ್ಕ್ರ ತ್ರಿವಿಕ್ರಮಪಂಡಿತಾಚಾರ್ಯರು ಜಯಸಿಂಹ ನೃಪನಿಗೆ ಆಶೀರ್ವಾದ ಮಾಡುವಿಕೆ. ಅಪರಿಚಿತರ ತ್ರಿವಿಕ್ರಮರು, ಮಧ್ವರ ಗುಣಾತಿಶಯಕ್ಕೆ ಲುಬ್ಧರಾಗುವಿಕೆ. ಶ್ರೀಮದಲವಬೋಧರು ಶ್ರೀ ವಿ ಮಂಗಳದಲ್ಲಿಯೇ ಕೆಲವು ದಿನ ವಾಸ ಮಾಡುತ್ತ ಲೋಕ ಶಿಕ್ಷಾರ್ಥವಾಗಿ, ನಿತ್ಯಾನ್ಹಿಕ ಪದ್ಧತಿಯ ತಾವು ಸ್ವಂತ ಆಚರಿಸಿ ತೋರಿದ್ದು. ಇತ್ಯಾದಿ.

ಅಥ ಸರ್ಗಾನುಕ್ರಮಣಿಕೆ

೧. ಕಾರ್ತಿಕ ಮಾಸದಲ್ಲಿ ಸೂರ್ಯನು ನಿರ್ಮಲನಾಗಿ ಉದಯಿಸಿ ಸಜ್ಜನರಿಗಾನಂದ ಪಡಿ ಪಂತೆಯೆ ನಿರ್ದುಷ್ಟರಾದ ಶ್ರೀ ಸರ್ವಜ್ಞಾಚಾರ್ಯರೆಂಬ ಸೂರ್ಯನು, ಸಜ್ಜನರ ಮನಾನಂದ ಗೊ ಸಿದ್ದು. [ಶ್ಲೋಕ ೧]

೨. ಜಯಸಿಂಹರಾಜನು ಶ್ರೀ ವಿಷ್ಣುಮಂಗಳ ದೇವಸ್ಥಾನದಲ್ಲಿ ಮಹಾಸಭೆಯ ಜನರೆದು ಪದ್ಮತೀರ್ಥಾದಿಗಳು ಕದ್ದ ಗ್ರಂಥಗಳನ್ನು ತರಿಸಿ, ಕ್ಷಮೆ ಬೇಡುತ್ತ ಶ್ರೀ ಸರ್ವಜ್ಞರಿಗೆ ಅರ್ಪಿಸ ಅವರಾಜ್ಞೆಯಂತೆ ಅವರ ಶಿಷ್ಯರಾದ ಶಂಕರಾಚಾರ್ಯರೆಂಬ ದ್ವಿಜರು ಆ ಗ್ರಂಥಗಳನ್ನು ಪು ಸ್ವೀಕರಿಸುವಿಕೆ. (ಶ್ಲೋಕ ೨)

೩. ಆ ಕಾಲದಲ್ಲಿ ತ್ರಿವಿಕ್ರಮಪಂಡಿತಾಚಾರ್ಯರು ತಮ್ಮ ತಮ್ಮಂದಿರಾದ ಶಂಕರಾಚಾರ್ಯ ಗ್ರಂಥಗಳು ದೊರೆತ ಜಯಕ್ಕೆ ಆನಂದಯುಕ್ತರಾಗಿ ವಿನೀತನಾದ ಜಯಸಿಂಹ ಭೂಪಾಲ ಶ್ರೀಮದಾಚಾರ್ಯರ ಪಾದಧೂಳಿ ನಿನ್ನನ್ನು ರಕ್ಷಿಸಲೆಂದು ಆಶೀರ್ವಾದ ಮಾಡಿ ಸಂತೊ ಬಡಿಸಿದು. (ಶ್ಲೋಕ ೩-೪)

೪. ಕವಿಕುಲಶ್ರೇಷ್ಠರಾದ ತ್ರಿವಿಕ್ರಮಪಂಡಿತಾಚಾರ್ಯರು ಪೂರ್ವದಲ್ಲಿ ತಾವು ಶ್ರೀಮಧ್ವ ಅಪರಿಚಿತರಾದರೂ ಭ್ರಮರವು ಕಾನನದಲ್ಲಿಪ್ಪ ಹೂವನ್ನು ತಾನು ಕಾಣದೇ ಇದ್ದರೂ, ಸುವಾ ಯಿಂದ ಹೂವನ್ನು ಹುಡಿಕಿ ಪೊಂದಿದಂತೆ ಶ್ರೀ ಮಧ್ವರ ಗುಣಾತಿಶಯಕ್ಕೆ ಲುಬ್ಧರಾದದ್ದು.

(ಶ್ಲೋಕ ೫)

೫. ಶ್ರೀ ಸರ್ವಜ್ಞರು ವಿಷ್ಣುಮಂಗಳ ದೇವಾಲಯದಲ್ಲಿ ಕೆಲವು ದಿನಗಳಿದ್ದು, ಲೋಕ ಕಲ್ಯಾಣಾರ್ಥವಾಗಿ ಸತ್ಕರ್ಮಾನುಷ್ಠಾನ ನಿತ್ಯಾನ್ಹೀಕಗಳನ್ನು ಆಚರಿಸುತ್ತ ತ್ರಿವಿಧ ಜೀವರಿಗೆ ತ್ರಿವಿಧ ಫಲಪ್ರಾಪ್ತಿಯುಂಟುಮಾಡಿದ್ದು. ( ಶ್ಲೋಕ ೬ )

೬. ಶ್ರೀ ಸರ್ವಜ್ಞರು ಅರುಣೋದಯಾತ್ಪೂರ್ವದಲ್ಲಿಯೇ ಶಾಸ್ತ್ರವಿಹಿತವಾದ ಸ್ನಾನಸಂಧ್ಯಾದಿ ಕರ್ಮಾಚರಿಸುತ್ತ ಕಾವೇರೀಶಾಲೆಯ ಪರದೆಯಲ್ಲಿ ಯೋಗಾಸನಾರೂಢರಾಗಿ ಮಾನಸಿಕ ಧ್ಯಾನಯೋಗ ನಿರತರಾಗಿದ್ದು. ( ಶ್ಲೋಕ ೭ )

೭. ಶ್ರೀ ಸರ್ವಜ್ಞರ ಶಿಷ್ಯರಾದ ಅನೇಕ ಯತಿಗಳು ತಕ್ಕ ದಂತಕಾಷ್ಟಗಳಿಂದ ಹಲ್ಲುಜ್ಜಿ ಶುದ್ಧರಾಗಿ ತಮ್ಮ ಪೂರ್ವ ಸಂಪ್ರದಾಯಕ್ಕೆ ಕಿಂಚಿತು ನ್ಯೂನಾಧಿಕ್ಯವಿಲ್ಲದೇ ಆಚಾರಭೇದವನ್ನು ತಿಳಿಸುತ್ತ ವಿಷ್ಣುಮಂಗಳ ಸಮೀಪದಲ್ಲಿರುವ ಸರೋವರದಲ್ಲಿ ಎಲ್ಲರೂ ಒಮ್ಮೆಲೇ ಸ್ನಾನಮಾಡುವಿಕೆ.
( ಶ್ಲೋಕ ೮ )

೮. ಸದ್ಗತಿ ಬೇಕೆನ್ನುವ ಶಿಷ್ಯರು, ಗುರುಸೇವೆಯಲ್ಲಿ ತತ್ಪರರಾಗಿ ಗುರುಗಳು ಮಲಗಿದ ನಂತರ ಮಲಗುತ್ತಾ, ಗುರುಗಳು ಏಳುವದಕಿಂತಲೂ ಪೂರ್ವದಲ್ಲೆ ಎದ್ದು ಮಹಜಾಗ್ರತೆಯಿಂದ ಗುರುಗಳನ್ನು ಸೇವಿಸಿದ್ದು. ( ಶ್ಲೋಕ ೯ )

೯. ಒಬ್ಬ ಶಿಷ್ಯನು ರಾತ್ರಿ ಬಹುಕಾಲದವರೆಗೆ ಹೇಳಿದ ಪಾಠವನ್ನು ಪಠಿಸುತ್ತ, ಚಿಂತನೆಮಾಡಿ ಬಹಳ ರಾತ್ರಿಯಾದಮೇಲೆ ಮಲಗಿ ಉಷಃಕಾಲದಲ್ಲಿ ವಿವಶದಿಂದ ಮಲಗಿದ ಶಿಷ್ಯನ ಮೇಲೆ ಕರುಣ ದಿಂದ ಗುರುಗಳು ತಮ್ಮ ಅಂಗವಸ್ತ್ರಾದಿಗಳನ್ನು ತಾವೆ ಕೊಂಡು ಸ್ನಾನಕ್ಕೆ ಹೋದದ್ದು - ನಂತರ ಶಿಷ್ಯನು ಜಾಗ್ರತನಾಗಿದ್ದು ಗುರುಗಳ ಅಂಜಿಕೆಯಿಂದ ತ್ವರಿತ ಸ್ನಾನ ತಟಾಕಕ್ಕೆ ಹೋಗಿ ಗುರುಗಳು ಜಲದಲ್ಲಿರಲು ಶಿಷ್ಯನು ಗುರುಗಳ ಸನ್ಮಾನಾರ್ಥವಾಗಿ ಸುಮ್ಮಗೆ ನಿಂತು ಸ್ನಾನಮಾಡಿ ಬರುವ ಗುರುಗಳಿಗೆ ಮಾರ್ಗ ಬಿಟ್ಟದ್ದು. ( ಶ್ಲೋಕ ೧೦--೧೧ )

೧೦. ಜಿತೇಂದ್ರಿಯರಾದ ಒಬ್ಬ ಸನ್ಯಾಸಿಗಳು ದೀಪದ ದೀಪ್ತಿಯಲ್ಲಿ ( ಇನ್ನೂ ಕತ್ತಲೆ ಇರ ವಕ್ಕಿ) ತಾವು ಅಬ್ಜನಬೋಧರ ಸನ್ನಿಧಿಯಲ್ಲಿ ಸಾಲಗ್ರಾಮಗಳಲ್ಲಿಯ ನಿರ್ಮಾಲ್ಯ ಪುಷ್ಪಾದಿಗಳನ್ನು ತೆಗೆದು ಪ್ರಕ್ಷಾಳನಾದ್ಯಾದಿ ಆಚಮನ ಕೊಟ್ಟು ನಂತರದಿಂದ ಅಭಿಷೇಕ ಮಾಡಿದ್ದು. ದೇವತೆಗಳ ಒಡೆಯ ನಿಂದ ಅರ್ಚಿತವಾದ ಆ ನಿರ್ಮಾಲ್ಯ ಹೂವಿನಲ್ಲಿ, ಶಿಷ್ಯರು ಹತ್ತುಪ್ಪದಂತಿರುವ ಅಮೃತವನ್ನು ಹುಡು ಬೆರಗಾದದ್ದು. ( ಶ್ಲೋಕ ೧೨ - ೧೩ )

೧೧. ಚಕ್ರವರ್ತಿಯಾದ ಸೂರ್ಯೋದಯವರ್ಣನೆ. ( ಸೂರ್ಯೋದಯವಾದದ್ದು )
( ಶ್ಲೋಕ ೧೪--೧೭ )

೧೨. ಇನಿತು ಸೂರ್ಯೋದಯಾತ್ಪೂರ್ವದಲ್ಲಿಯೆ ಸಕಲ ಶಿಷ್ಯರು ತಮ್ಮ ಆಹ್ನೀಕ ಮುಗಿಸಿ, ಸೂರ್ಯೋದಯಾನಂತರದಲ್ಲಿ ಎಲ್ಲರೂ ಮಿಳಿತರಾಗಿ ಪಾಠಗೋಸುಗ ಕುಳಿತ ವರ್ಣನೆ. ( ಶ್ಲೋಕ ೧೮ )

೧೩. ವ್ಯಾಸಪೀಠ ( ಪುಸ್ತಕಗಳಿಡತಕ್ಕ ಮಣೆ ) ದಲ್ಲಿ ಕ್ರಮದಿಂದ ಇಟ್ಟ ಪುಸ್ತಕಗಳು, ಪುಸ್ತಕಗಳಲ್ಲಿ ಅಂದವಾಗಿ ಬರೆದ ಅಕ್ಷರಗಳಿಂದ ಶೋಭಿಸುವ ಪುಸ್ತಕಗಳ ವರ್ಣನೆ.
( ಶ್ಲೋಕ ೧೯--೨೧ )

೧೪. ಚತುರಶಿಷ್ಯರು ಬಹುತ್ವರೆಯಿಂದ ತಿಳಿದವರಾದಾಗ್ಯೂ ಮಂದಬುದ್ಧಿಯ ಶಿಷ್ಯರು ಹಾಪ್ರಯತ್ನದಿಂದ ಪಾಠ ಒಲಿಸಿ ಚತುರ ಶಿಷ್ಯರ ಸಾಮ್ಯ ಹೊಂದಿದ ವರ್ಣನೆ ( ಶ್ಲೋಕ ೨೧ )

೧೫. ಶ್ರೀ ಸರ್ವಜ್ಞರೆಂಬ ಸೂರ್ಯನು, ಪಾಠಪ್ರವಚನ ಸಭೆ ಎಂಬ ಆಕಾಶದಲ್ಲಿ ಉದಿತವಾದ ವರ್ಣನೆ. ಶ್ರೀ ಸರ್ವಜ್ಞರು ಸೂರ್ಯನಂತೆ ಪ್ರಕಾಶಿಸುತ್ತ ಪಾಠಸಭೆಗೆ ಬಂದುದು.
( ಶ್ಲೋಕ ೨೨ )

೧೬. ಶ್ರೀ ಸರ್ವಜ್ಞರು ಪಾಠ ಪ್ರಾರಂಭಿಸಲು ಓಂಕಾರ ಉಚ್ಚಾರಕ್ರಮಪೂರ್ವಕ ಶಾಂತಿ ಹೇಳಿದ ವರ್ಣನೆ (ಶ್ಲೋಕ ೨೩ )

೧೭. ತದನಂತರ ಶಿಷ್ಯರು (ವೇದ) ಉಪನಿಷದ್ಭಾಷ್ಯ ಪಠಿಸಿದ ಕ್ರಮ, ಶ್ರೀ ಸರ್ವಜ್ಞರು ವ್ಯಾಖ್ಯಾನರೂಪವಾಗಿ ಸವಿಸ್ತರ ಉಪನ್ಯಾಸಗೈದು, ಪಾಠ ಹೇಳಿ ಶಿಷ್ಯರಿಗೆ ಬೋಧಿಸುತ್ತಾ ಆನಂದಗೊಳಿಸುತ್ತ ಪ್ರಶ್ನೆ ಮಾಡಿದವರಿಗೆ ಸರಿಯಾಗಿ ಉತ್ತರವಿತ್ತದ್ದು. (೨೪—೨೫)

೧೮. ಮಧ್ಯಾಹ್ನಕಾಲವರೆಗೆ ಪಾಠ ಹೇಳುತ್ತ ಸೂರ್ಯನು ಪಶ್ಚಿಮದಿಶೆಗೆ ತಿರುಗಲು, ಶ್ರೀ ಸರ್ವಜ್ಞರು ಸ್ನಾನಗೋಸುಗ ಶಿಷ್ಯಸಮೇತರಾಗಿ ತಟಾಕಕ್ಕೆ ಹೋದದ್ದು. ಸಕಲ ತೀರ್ಥಾಭಿಮಾನಿದೇವತೆಗಳು ಮಧ್ವರ ಅಂಗಸಂಗ ಇಚ್ಛಿಸಿ ಪ್ರತ್ಯಕ್ಷರಾಗಿ ಬಂದು ಶ್ರೀ ಮಧ್ವರೊಡನೆ ಸ್ನಾನಗೈದರೆಂಬ ಮಹಿಮೆ.
( ೨೬—೨೭ )

೧೯. ಸ್ನಾನಾನಂತರ ಶ್ರೀ ಸರ್ವಜ್ಞರು ಶಂಖವನ್ನು ಕರದಲ್ಲಿ ಹಿಡಿದು ಸಾಲಗ್ರಾಮಗಳಿಗೆ ಅಭಿಷೇಕ ಮಾಡುವಾಗ ಥಳಥಳ ಹೊಳೆಯುವ ಶಾಲಗ್ರಾಮ ಶಿಲೆಗಳಲ್ಲಿ ಶ್ರೀಮದಾಚಾರ್ಯರ ಪ್ರತಿಛಾಯೆಯು ಬೀಳಲು, ಅವುಗಳಲ್ಲಿ ನಿತ್ಯ ಸನ್ನಿಹಿತನಾದ ಶ್ರೀ ಹರಿಯೆ ಪ್ರತ್ಯಕ್ಷ ಕಾಣಸಿಕೊಂಡನೆಂಬ ಸ್ತೋತ್ರ. ಮತ್ತು ನಿರ್ಮಾಲ್ಯತೀರ್ಥ ಮಹಿಮಾ, ಶ್ರೀ ಸರ್ವಜ್ಞರು ನಿರ್ಮಾಲ್ಯತೀರ್ಥ ಪ್ರಾಶನ ಮಾಡಿದ್ದು. [ ಶ್ಲೋಕ ೨೮-೨೯ ]

೨೦. ಶ್ರೀ ಸರ್ವಜ್ಞರು ಗೋಪೀಚಂದನದಿಂದ ದ್ವಾದಶನಾಮ ಮತ್ತು ಶಂಖ ಚಕ್ರಾದಿಗಳನ್ನು ಧರಿಸಿದ ಕ್ರಮ. ದ್ವಾದಶ ಸೂರ್ಯರಂತೆ ಪ್ರಕಾಶಿಸಿದರೆಂಬ ವರ್ಣನೆ. [ ಶ್ಲೋಕ. ೩೦ ]

೨೧. ಊರ್ಧ್ವ ಪುಂಡ್ರ ತಿಲಕಧಾರಣಾನಂತರ ಶ್ರೀ ಸರ್ವಜ್ಞರು ಮಠಕ್ಕೆ ಹೋಗುವಾಗ ಶಿಷ್ಯರು ದಾರಿ ಬಿಡಿರೆಂಬ ಮುಂತಾದ ಪರಾಕು ಹೇಳುವ ವರ್ಣನೆ. ಜನರು ಮಾರ್ಗ ಬಿಡುತ್ತ ಭಕುತಿಯಿಂ ನಮಿಸಿದ್ದು. [ ಶ್ಲೋಕ ೩೧ ]

೨೨ ಶ್ರೀ ಸರ್ವಜ್ಞರು ಮಠಕ್ಕೆ ಬರುತ್ತಲೇ ಓರ್ವ ಶಿಷ್ಯನು ಶ್ರೀ ಸರ್ವಜ್ಞರಿಗೆ ಪಾದಪ್ರಕ್ಷಾಲನೆ ಮಾಡಿದ್ದು. ಒಂದು ಬಿಂದು ಪಾದೋದಕವಾದರೂ ಭೂಮಿಯಲ್ಲಿ ಬಿಡದೆ, ಸಕಲ ಜನರು ತಮ್ಮ ಶಿರದಲ್ಲಿ ಪ್ರೋಕ್ಷಿಸಿಕೊಂಡ ಮಹಿಮಾ. ಜನರ ಇಂಥ ಕೃತಿಗೆ ಭೂದೇವತೆಯು, ಎನಗೆ ಶ್ರೀಗಳವರ ಪಾದೋದಕವು ಸ್ವಲ್ಪವಾದರೂ ಉಳಿಸಲಿಲ್ಲವೆಂದು, ಮನಸ್ಸಿನಲ್ಲಿ ಮರುಗಿದರೂ ತನ್ನ ಗುಣಾನುಸಾರವಾಗಿ ಕ್ಷಮಿಸಿ ಸಹಿಸಿಕೊಂಡಳೆಂಬ ವರ್ಣನೆ. ( ಶ್ಲೋಕ ೩೨ )

೨೩ ಓರ್ವ ಶಿಷ್ಯನು ಶ್ರೀ ಹರಿಯ ಅಭಿಷೇಕಾರ್ಥವಾಗಿ, ಸೂರ್ಯೋದಯಾತ್ಪೂರ್ವದಲ್ಲೇ ತೆಗೆದಿಟ್ಟ ಅಗ್ರೋದಕವನ್ನು ತನ್ನ ಶ್ವಾಸವಾಯು ತಾಕದಂತೆ ಪಾರ್ಶ್ವದಲ್ಲಿ ಹಿಡಿದು ತಂದ ವರ್ಣನೆ. (೩೩)

೨೪. ಶ್ರೀ ಸರ್ವಜ್ಞರು ಇಂಥ ನಿರ್ಮಲವಾದ ಅಗ್ರೋದಕ ಜಲವನ್ನು ಮಂತ್ರೋಕ್ತದಿಂ ಕಲಶಾರ್ಚನೆ ಶಂಖ ಪೂಜೆ ಮಾಡಿ ಶಂಖದಲ್ಲಿ ಪೂರಿತವಾದ ಜಲದಿಂದ ಶ್ರೀ ಶಾಲಗ್ರಾಮಗಳಿಗೆ ಅಭಿಷೇಕ ಮಾಡಿ ತೀರ್ಥ ಮಾಡಿದ ವರ್ಣನೆ. ( ೩೪ )

೨೫. ಅಭಿಷೇಕ ಗೈದ ನಂತರ ಶಾಲಗ್ರಾಮಗಳನ್ನು ಚನ್ನಾಗಿ ಶೋಧಿಸಿ (ವರಿಸಿ) ಗಂಧ ತುಲಸಿ ಕುಸುಮಾದಿಗಳನ್ನು ಅರ್ಪಿಸಿದ ವರ್ಣನೆ. [ ಶ್ಲೋಕ ೩೫ ]

೨೬. ಶ್ರೀ ಮದಲವಬೋಧರು ಷೋಡಶೋಪಚಾರ ಪೂಜಾ ಕ್ರಮದಿಂದ ಶ್ರೀ ಹರಿಯನ್ನು ತೋಷಪಡಿಸಿದ್ದು ಮತ್ತು ಮೂವತ್ತೆರಡು ಅಪರಾಧಯುಕ್ತವಾದ ಕರ್ಮಗಳನ್ನು ತ್ಯಜಿಸುತ್ತ ಆರು ಅನುಪಚಾರಗಳನ್ನು ಅರ್ಪಿಸಿ ಶ್ರೀ ಹರಿಯನ್ನು ಪ್ರಾರ್ಥಿಸಿದ್ದು. [ ೩೬ ]

೨೭. ಶ್ರೀ ಮದಲವಬೋಧರು ಈ ಪ್ರಕಾರ ನಿತ್ಯ ಶ್ರೀ ಹರಿಯನ್ನು ಪೂಜಿಸುವರಲ್ಲದೆ ಹೃತ್ಸರೋಜ ಪೀಠಸ್ಥ ಹರಿಯನ್ನು ಚಿತ್ತವೆಂಬ ಜಲದಿಂದ ಅಭಿಷೇಕ ಮಾಡಿಸಿ ಭಾವಾಷ್ಟ ಪುಷ್ಪಗಳಿಂದ ಮಾನಸ ಪೂಜೆಗೈವ ಕ್ರಮ. [ ಶ್ಲೋಕ ೩೭ ]

೨೮. ಪೂಜೆಯು ಮುಗಿದ ನಂತರ ಶ್ರೀ ಹರಿಗರ್ಪಿಸಿದ ಪರಿಮಳಯುಕ್ತವಾದ ಘನಸಾರ ಭೂಷಿತ ಗಂಧವನ್ನು ಶ್ರೀ ಮಧ್ವರು ತಮ್ಮ ದೇಹಕ್ಕೆ ಹಚ್ಚಿಕೊಂಡದ್ದು ಮತ್ತು ರೇಶ್ಮೆಯ ವಸ್ತ್ರವನ್ನುಟ್ಟು ಜನರ ಮನಾನಂದಗೊಳಿಸಿದ ಬಣ್ಣನೆ. [ ಶ್ಲೋಕ ೩೮ ]

೨೯. ಅಪ್ರಯುಕ್ತನೆಂದ ಓರ್ವ ಭಕ್ತನಿಂದ ಶ್ರೀ ಹರಿ ಅರ್ಪಣೆಗೆ ಒದಗಿದ ಪರಮಾನ್ನವನ್ನು ಶ್ರೀ ಮದಾನಂದರು ಶ್ರೀ ಹರಿಗರ್ಪಿಸಿ ತಾವು ಉದರ ಪೂರ್ತಿಗಲ್ಲದೇ ಶ್ರೀ ಹರಿಯ ಪ್ರೀತ್ಯರ್ಥವಾಗಿ ಭುಂಜಿಸಿದ್ದು. [ ಶ್ಲೋಕ ೩೯ ]

೩೦. ಶ್ರೀ ಸರ್ವಜ್ಞರು ಪೂಜೆ ಮತ್ತು ಭೋಜನಾನಂತರ ಜನಸಮಾಜದಿಂದ ತುಂಬಿದ ಮಂಟಪವನ್ನು ಪ್ರವೇಶಿಸಿ ಮೃದುವಾದ ರತ್ನಗಂಬಳಿಯಾಸನದಲ್ಲಿ ಕುಳಿತು ನಾನಾ ವಿಧವಾದ ಶಾಸ್ತ್ರ ವಿಚಾರ ವಿನೋದದಿಂದ ಜನರ ಮನಾನಂದಗೊಳಿಸಿದ್ದು. [ ಶ್ಲೋಕ ೪೦ ]

೩೧. ಆ ಸಭೆಯ ಮಂಟಪದಲ್ಲಿರುವಾಗಲೇ ಶ್ರೀಮದಾಚಾರ್ಯರ ಹುಬ್ಬಿನ ಚಲನ ಸಂಕೇತವನ್ನರಿತು, ಓರ್ವ ಶಿಷ್ಯನು ಆಚಾರ್ಯರ ಸಮೀಪಕ್ಕೆ ಬಂದು ತನ್ನ ಬಾಯಿಯ ಗಾಳಿ ಆಚಾರ್ಯರಿಗೆ ತಗಲುವದೆಂದು ತನ್ನ ಕೈಯಿಂದ ಮರೆಮಾಡಿ ತ್ವರದಿಂದ ಬಂದು ಕಾರ್ಯವನ್ನು ಮೆಲ್ಲಗೆ ವಿಚಾರಿಸಿದ್ದು. [ ಶ್ಲೋಕ ೪೧ ]

೩೨. ಶ್ರೀಸರ್ವಜ್ಞರು ಕುಳಿತ ಮಂಟಪದಲ್ಲಿ ಮಹಾಜನ ಗಲಭೆ, ಸಂದಣಿಯಲ್ಲಿ ಸೇವೆ ಅರ್ಪಿಸಲು ನಾ ಮುಂದೆ ನಾ ಮುಂದೆ ಎಂದು ಬರುತ್ತ ಜನಗಳು ಸಮೀಪಿಸಿ ನಮನ ಮಾಡುವಿಕೆ. [ ೪೨ ]

೩೩. ಶ್ರೀ ಸರ್ವಜ್ಞರು ಸಕಲ ಜನರನ್ನು ಸನ್ಮಾನ ಮಾಡಿ ಕುಳ್ಳಿರಿಸಿದ್ದು. [ ೪೩ ]

೩೪. ಚಿಂತನೆ ಮಾಡತಕ್ಕ ಶಿಷ್ಯನನ್ನು, ಇತರ ಶಿಷ್ಯರು ಪಾಠಕ್ಕೆ ಕರೆದದ್ದು. ಶ್ರೀ ಸರ್ವಜ್ಞರು ಶಿಷ್ಯರಿಗೆ ಪಾಠ ಹೇಳುವಿಕೆ, ಇವರ ಪಾಠ ಪ್ರವಚನ ಕೇಳಿ ಸರ್ವರೂ ಆನಂದ ಪೊಂದುವಿಕೆ. ಮತ್ತು ಬಹು ವೇಳೆಯವರಿಗೆ ಪಾಠವಾದರೂ ಶ್ರೀ ಸರ್ವಜ್ಞರ ಮಹಿಮೆಯಿಂದ ಬೇಸರಗೊಳ್ಳದೆ ಗತಿಸಿದ ಕಾಲ ತಿಳಿಯದಾಯಿತೆಂಬ ವರ್ಣನೆ. ( ಶ್ಲೋಕ ೪೪-೪೫ )

೩೫. ಸೂರ್ಯಾಸ್ತ ಸಮಯ ಒದಗಲು, ಸರ್ವಜ್ಞರು ಪಾಠ ಮುಗಿಸಿದ್ದು. ಸೂರ್ಯಾಸ್ತ ಅಲಂಕಾರ ವರ್ಣನೆ. [ ಶ್ಲೋಕ ೪೬–೪೭ ]

೩೬. ಸುಖತೀರ್ಥರು ಆ ಸಮಯ ಮನೋನಿಜಧ್ಯಾನಾರೂಪ ಸಮಾಧಿಯಲ್ಲಿ ಅಖಿಳ ಬ್ರಹ್ಮಾಂಡಾಂತರ್ಗತ ಬಹಿಯಲ್ಲಿಪ್ಪ ಶ್ರೀ ಹರಿಯ ರೂಪಗಳನ್ನು ಬಿಂಬನಲ್ಲಿ ಸಮನ್ವಯ ಮಾಡುತ್ತಾ ಧೇನಿಸಿದ್ದು. ( ಶ್ಲೋಕ ೪೮ )

೩೭. ಸೂರ್ಯಾಸ್ತ ಸಮಯಕ್ಕೆ ಇತರ ಅನೇಕ ಜನ ಬ್ರಾಹ್ಮಣರು ಧರ್ಮಶಾಸ್ತ್ರದಂತೆ ವಿಧಿವತು ಸಂಧ್ಯಾ ಗಾಯತ್ರಿ ಜಪ ಮಾಡಿದ ಕ್ರಮ ವರ್ಣನೆ. ( ಶ್ಲೋಕ ೪೯ )

೪೮. ಆಹಿತಾದಿ ಅಗ್ನಿಹೋತ್ರ ಕರ್ಮದಲ್ಲಿ ರತರಾದ ದ್ವಿಜರು ಸಾಯಂಕಾಲ ಹೋಮವನ್ನು ವಿಧಿವತು ಅಗ್ನಿಯಲ್ಲಿ ಹೋಮಿಸಿದ ಕ್ರಮವರ್ಣನೆ. [ ಶ್ಲೋಕ ೫೦ ]

೪೯. ಆ ಸಮಯದಲ್ಲಿ ಚಂದ್ರನುದಿಸಿದದು. ಆ ಚಂದ್ರೋದಯ ವರ್ಣನೆ.

[ ಶ್ಲೋಕ ೫೧-೫೩ ]

೫೦. ಚಂದ್ರನಿಗೂ ಶ್ರೀ ಸರ್ವಜ್ಞರಿಗೂ ಉಪಮಾ ಅಲಂಕಾರ ವರ್ಣನೆ. ಮತ್ತು ರಾತ್ರಿ ಕಾಲದಲ್ಲಿ ಶ್ರೀಮದಾನಂದತೀರ್ಥರು ಶ್ರೀಕೃಷ್ಣ ಚರಿತ್ರೆಯನ್ನು ಹೇಳುತ್ತ ಆನಂದಗೊಳಿಸಿದ್ದು.

[ ಶ್ಲೋಕ ೫೪--೫೫ ]

ಶ್ರೀಗುರುಮಧ್ವೇಶಾರ್ಪಿತವು.



ಶ್ರೀಲಕ್ಷ್ಮೀನರಸಿಂಹ ಪ್ರಸೀದ:

ಶ್ರೀ ಗುರುರಾಜೋ ವಿಜಯತೇ

# ಶ್ರೀ ಸುಮಧ್ವವಿಜಯ

——:O:——

## ॥ ಅಥ ಚತುರ್ದಶಃ ಸರ್ಗಃ ॥

ಶ್ಲೋಕ ॥ ಪರಿವೃಢಘನಸಂಘೇ ರಾಜಸಿಂಹೋರ್ಜಶಕ್ತ್ಯಾ ।
ತ್ಯಜತಿ ಮಲಿನಭಾವಂ ನೀರಸತ್ವಾನ್ನಿಕಾಮಮ್ ॥
ಸ್ಫುಟಮುದಯತಿ ತೇಜಸ್ವ್ಯುಜ್ವಲೇ ಮಧ್ವಭಾನೌ ।
ಸುಜನಜಲಜಕಾಂತ್ಯಾ ವಿಶ್ವಮಾಸೀನ್ಮನೋಜ್ಞಮ್ ॥ ೧ ॥

( ಮಾಲಿನೀವೃತ್ತ ಶ್ಲೋಕ ೧ ರಿಂದ ೫೨ ವರೆಗೆ )

ವಾರ್ಧಿಕ ॥ ಸ್ತಂಭ ವಿಷಯುಭಯಗಳ ಅಧಿಪತಿಗಳೆಂಬ ಘನ ॥ ವಂಬುದ
ಸಮೂಹವರಸರೊಳು ವರ ಜಯಸಿಂಹ । ನೆಂಬೂರ್ಜಃ ಬಲದಿ
ನೀರಸವಾಗೆ ಪದ್ಮಾದಿಯಲಿ ಪ್ರೀತಿ ಮಧ್ವರಲ್ಲಿ ॥ ಇಂಬುಗೊಂಡಿಹ
ದೋಷ ಮನೊಮಲಿನಲಂದಬಿಡೆ । ತುಂಬಿ ರತಿ ಸುಪ್ರಕಾಶ್ಯ
ತೇಜಸಿಗಳೆಲ್ಲಧಿಕ । ಎಂಬರವಿ ಮಧ್ವ ಸುಜನಾಬ್ಜ ವಿಕಸಿಸ
ಲುದಿಸೆ ಸಕಲಕಾರ್ಯಂ ಮನೋಹರ ॥ ೧ ॥ ೭೫೫ ॥

ಭಾವಾರ್ಥ:- ಶರತ್ಕಾಲ **ಕಾರ್ತೀಕ** ಮಾಸದಲ್ಲಿ, **ಯಾವ** ಪ್ರಕಾರವಾಗಿ, ಆಕಾಶದಲ್ಲಿ **ಸಂಚರಿಸುವ** ಮೋಡಗಳು ನೀರಿಲ್ಲದೆ ಬರಿದಾಗಿ, ತಮ್ಮ ನಿಜವಾದ **ಕಪ್ಪು** ಬಣ್ಣವನ್ನು ಬಿಟ್ಟು ಬಿಳಿಯ ವರ್ಣವಾಗುತ್ತವೋ, ಮತ್ತು ಆ **ಕಾರ್ತೀಕ ಮಾಸದಲ್ಲಿ ಸೂರ್ಯನು** ಮೇಘಾವರಣ ರಹಿತನಾಗಿ, ಕಮಲಗಳನ್ನು ಅರಳಿಸುತ್ತ ಚನ್ನಾಗಿ ಉದಯಿಸುತ **ಬರುವಾಗ ಸರ್ವದಿಶವಾದ** ಸಕಲ **ಜಗತ್ತೇ** ಅಂದ ವಾಗಿ **ತೋರುವಂತೆ;** ಸ್ತಂಬ (ಪಾಡಿ) ವಿಷಯ **(ಕುಡಿಲ್)** ಎಂಬ ಎರಡೂ ಗ್ರಾಮಾಧಿಕಾರಿಗಳೆನ್ನಿ, ಘನ **(ಮಹ)** ಅಂಬುದ= **ಮೇಘ ಸಮೂಹದ** ರಾಶಿಯು- ರಾಜಶ್ರೇಷ್ಠನಾದ **ಜಯಸಿಂಹ**ರಾಜನೆಂಬ **ಊರ್ಜ:) ಕಾರ್ತೀಕ** ಮಾಸದ ಶಕ್ತಿಯಿಂದ (ನೀರಸ) ನೀರಿಲ್ಲದೇ, ನಿರ್ಬಲವಾಗಿ, ಪದ್ಮ **ತೀರ್ಥರಲ್ಲಿ ಮಾಡುವ ಪಕ್ಷಪಾತವನ್ನು** ಶ್ರೀಮದಾಚಾರ್ಯರಲ್ಲಿ [ ಇಂಬುಗೊಂಡಿಹ ] ನೆಲಸಿದ **ಕಪ್ಪು ಎಂಬುವ**

ಮನೋದೋಷವನ್ನು, (ಅಂದ) ಮನಸಿನಲ್ಲಿರುವ ಕಲ್ಮಷವನ್ನು ಕಿಂಚಿತ್ತಾದರೂ ಇಲ್ಲದ ಚನ್ನಾಗಿ ಬಿಡಲು, ಸುಪ್ರಕಾಶಪೂರ್ಣರಲ್ಲಿ ಅಧಿಕ ತೇಜಸ್ವಿಗಳಾದ, ಶ್ರೀ ಮಧ್ವಾಚಾರ್ಯರೆಂಬ ಸೂರ್ಯನು ಸಜ್ಜನರೆಂಬ ಕಮಲಗಳನ್ನು ಸ್ಪಷ್ಟವಾಗಿ ಅರಳಿಸುತ್ತ ಉದಯವಾಗಲು; ಅಂದರೆ ಜಯ ಸಿಂಹಾದಿ ಸರ್ವರಾಜರು ಶ್ರೀ ಸರ್ವಜ್ಞರನ್ನು ಪೂಜಿಸಿ ಮಾನಮಾಡುತ್ತ ಈ ಪೂಜಾರೂಪವಾದ ಅಭ್ಯು ದಯವು ಪ್ರಾಪ್ತವಾಗಲು ಸಕಲ ಕಾರ್ಯವೂ ಮನೋಹರ= ಚಂದವಾಗಿ ಆಯಿತು.

ರಾಜರಲ್ಲಿ ಶ್ರೇಷ್ಠನಾದ ಜಯಸಿಂಹರಾಜನೇವೆ ಶ್ರೀ ಸರ್ವಜ್ಞರ ವಶವರ್ತಿಯಾಗಿರುವುದನ್ನು ನೋಡಿ, ಆ ರಾಜನ ಭಯದಿಂದ ಉಭಯ ಗ್ರಾಮಾಧಿಪತಿಗಳು ಇತರ ಸರ್ವ ಜನರು ಶ್ರೀಮಧ್ವರಿ ಪ್ರತಿಕೂಲ ಮಾಡುವದನ್ನು ಬಿಟ್ಟು, ಶ್ರೀಮದಾಚಾರ್ಯರಿಗೆ ಅನುಕೂಲರಾಗಿ ಪೂಜಿಸುತ್ತಿರಲು ಶ್ರೀ ಸರ್ವಜ್ಞರು ಸಜ್ಜನರನ್ನು ಆನಂದಗೊಳಿಸುತ್ತ, ಸುಪ್ರಸನ್ನಮುಖರಾಗಿರಲು ಸಕಲ ಕಾರ್ಯವು ಮನೋಹರವಾಗಿ ತೋರಿತು.

ಜೀವರಿಗೂ ದೇಶ, ಕಾಲ, ಕರ್ಮರೂಪ ಫಲಧರ್ಮಕ್ಕೂ ನಿತ್ಯ ಸಮ್ಬಂಧವಿರುವಂತೆ ಕಾಲ ಕ್ಕನುಕೂಲರಾಗಿ, ದೇಶಾಧಿಪತಿಗಳು ಧರ್ಮಾಧಿಪತಿಗಳೆ ಆಶ್ರಯಮಾಡುತ್ತ ಧರ್ಮ ಪ್ರವೃತ್ತಿಗೆ ಅನು ಕೂಲರಾಗಿ ಕಾರಣರಾಗಿರುವಂತೆ [ಧರ್ಮ] ಮತ ಪ್ರವೃತ್ತಿಯ ಏಳಿಗೆಗೆ ರಾಜಸಹಾಯ ಬೇಕೆಂಬ ನೀತಿಯನ್ನು ತೋರಿದರಲ್ಲದೆ ಶ್ರೀಮದಾಚಾರ್ಯರು ಸ್ವಯಂ ಅಸಮರ್ಥರಲ್ಲ.

ಶ್ಲೋಕ ॥ ಕೃತಮುಪಕೃತಮಾರ್ಯೈಃ ಕ್ಷಮ್ಯತಾಂ ಕ್ಷಾಂತಿಭೂಷೈ।
ರಿತಿ ಮೃದುವದತಾಂ ಸಂಪ್ರಾರ್ಥನಾಭಿಃ ಪ್ರಭೂಣಾಮ್
ಅಪಹೃತಮುಪರೇಷಾಂ ಮಂತ್ರತೋ ಗ್ರಂಥಜಾತಂ।
ದಶಹೃದಯನಿಯೋಗಾದಗ್ರಹೀಚ್ಛಂಕರಾರ್ಯಃ ॥ ೨

ವಾರ್ಧಿಕ ॥ ಬುಧ ಶಂಕರಾರ್ಯ ಪೂರ್ವದಲಿ ತಮ್ಮಲ್ಲಿದ್ದ । ಪದುಮ
ಪರಂ ಮಾಯಿ ಮಂತ್ರದಿಂ ಅಪಹೃತಂ । ಸದ್ಗ್ರಂಥಜಾ
ಸೀಂ ಸ್ವೀಕರಿಸು ಸಜ್ಜನಕೆ ತಾಳ್ಮೆಯೇ ಶೋಭೆ ಶಠರಿಂ
ಒದಗಿದಪರಾಧ ತಾಳೆಂದು ಮೃದು ವಚನಿ ನೃಪ । ನಿದೆ ಜೀ
ಸುಪ್ರಸನ್ನ ಮುಖದ ದಶಮತಿಗಳಂ । ಹೃದಯದಂತವರಾಜ್ಞ
ಯುಭಯೂರು ರಾಜಬಿನ್ನಹಕೆ ಗ್ರಂಥಗಳ ಕೊಂಡ ॥ ೨ ॥ ೭೫೬

ಭಾವಾರ್ಥ:— ಬುಧ=ಪಂಡಿತ ಶ್ರೇಷ್ಠರಾದ ಶಂಕರಾಚಾರ್ಯರೇ ತಮ್ಮಲ್ಲಿದ್ದ ದ್ವೈತ ಗ್ರಂ ಗಳನ್ನು, ಈ ಮೊದಲಿಗೆ ಚೋಲಜನಾದ ಪದುಮತೀರ್ಥನು [ಅಪರಂ] ಇತರ ಮಾಯಾವಾದಿಗಳ ಕುಮಂತ್ರ=ದುರಾಲೋಚನೆಯಿಂದ ಅಪಹರಿಸಿ ತುಡುಗು ಮಾಡಿದ, ಸದ್ಗ್ರಂಥ ಸಮೂಹಗಳನ್ನು ನೀವು ಸ್ವೀಕರಿಸಿರಿ. ತಮ್ಮಂಥ ಸಜ್ಜನರಾದ ಹಿರಿಯರಿಗೆ ತಾಳ್ಮೆ=ಶಾಂತಿಗುಣವೇ ಭೂಷಣವು, ತಾವು ಸವ ರಿಂದ ಮಾನಮಾಡಿ= ಪೂಜೆಗೊಳ್ಳುವ ಆರ್ಯರು. ಶಠ=ಮೂರ್ಖರಿಂದ ಗ್ರಂಥಾಪಹಾರ ರೂಪವಾ

ಒದಗಿದ )=ಆದ ತಪ್ಪನ್ನು ಕ್ಷಮಿಸಿರಿ. ಎಂದು ಮೃದುವಚನಿ=ಕಿಟ್ಟೂಧಾನ ಮಾತುಗಳಿಂದ ಹೇಳುವ, ರಾಜಶ್ರೇಷ್ಠ ಜಯಸಿಂಹನು, ಮತ್ತು ಇತರ ಗ್ರಾಮಾಧಿಪತಿಗಳು, ಪುನಃ ಪುನಃವಾಗಿ ತಾವು ಗ್ರಂಥಗಳನ್ನು ಸ್ವೀಕರಿಸಿರೆಂದು ಬೇಡಿಕೊಳ್ಳಲು ಸುವಿವೇಕ=ಆ ವಿಚಾರಶೀಲರ ಸಭೆಯಲ್ಲಿ ಮುಖ್ಯತ್ವೇನ ವಿರಾಜಮಾನರಾದ, ದಶಮತಿಗಳ=ಪೂರ್ಣ ಪ್ರಜ್ಞರ ಸುಪ್ರಸನ್ನತೆ ಎಂಬ ಮಂದಹಾಸಯುಕ್ತ ಮುಖಕಾಂತಿಯಿಂ ಹೊರಸೂಸುವ ಅವರ ಮನೋಭಾವ, ತಿಳಿದು ಅವರ ಆಜ್ಞೆಯಂತೆ ಜಯಸಿಂಹರಾಜನ ದ್ವಾರಾ, ಆ ಗ್ರಂಥಗಳನ್ನು ಶಂಕರಾಚಾರ್ಯರು=( ಶ್ರೀಮದಾಚಾರ್ಯರ ಶಿಷ್ಯರು ತ್ರಿವಿಕ್ರಮ ಪಂಡಿತಾಚಾರ್ಯರು ) ಸ್ವೀಕರಿಸಿದರು.

**ಶ್ಲೋಕ ॥ ಪರಿವೃತಮವನಮ್ರೈರ್ಗ್ರಾಮಣೀ ಗ್ರಾಮ್ಯಪೂರ್ವೈ ।**
**ರವನತಮುರುಚೇತಃ ಪಾದಪಾರ್ಶ್ವೇ ನೃಸಿಂಹಮ್ ॥**
**ಸಹಜವಿಜಯತೋsಯುಗ್ವಿಕ್ರಮಾರ್ಯಃ ಪ್ರಸನ್ನಃ ।**
**ಕವಿಕುಲತಿಲಕೋsಸಾವಾಶಿಷಾ ತೋಷಯತ್ತಮ್ ॥ ೩ ॥**

ವಾರ್ಧಿಕ ॥ ಕವಿ ವಂಶ ತಿಲಕ ಯುಗ್ ವಿಕ್ರಮಾರ್ಯರು ಆಗ । ಸುವಿ
ವೇಕ ಸಭೆಲಿ ಕುಳಿತಿರೆ ಅಪಹೃತಂ ಗ್ರಂಥ । ಜವದಿ ತಮ್ಮನುಜ
ಶಂಕರಗೆ ಸುಮ್ಮಾನ ಲಭಿಸಿದ ಜಯಕೆ ಸುಪ್ರಸನ್ನ ॥ ಅವನಮ್ರ
ಗ್ರಾಮಾಧಿಪತಿಗಳಂ ಗ್ರಾಮಸ್ಥ । ರಿವರೆ ಮೊದಲಾದ ನಾನಾ
ಜನರ ಕೂಡಿದಂ । ಪ್ರವರ ಪೂರ್ಣಪ್ರಜ್ಞ ಪದನಮಿತ ನೃಪ
ನಿಗಾಶೀರ್ವಚನದಿಂ ಮುದವಿಯೆ ॥ ೩ ॥ ೭೫೭ ॥

**ಭಾವಾರ್ಥ:**— ಪಂಡಿತರುಗಳ ಕುಲಕ್ಕೆ ಶ್ರೇಷ್ಠರಾದ ಅಯುಗ್ ವಿಕ್ರಮಾರ್ಯರು,=ಎರಡಲ್ಲದ್ದು, ಮೂರು=ತ್ರಿವಿಕ್ರಮ ಪಂಡಿತಾಚಾರ್ಯರು, ಸುವಿವೇಕ=ವಿಚಾರೋತ್ತಮವಾದ ಸಭೆಯಲ್ಲಿ ಬಂದು ಶ್ರೀಮದಾಚಾರ್ಯರಿಗೆ ನಮನ ಮಾಡಿ, ಕುಳಿತಿರಲು, ಕಳ್ಳತನದಿಂದ ಹೋದ ಗ್ರಂಥಗಳು, ತಮ್ಮ ತಮ್ಮಂದಿರಾದ ಶಂಕರಾಚಾರ್ಯರಿಗೆ ಬಹುಮಾನಪೂರ್ವಕವಾಗಿ ಲಭಿಸಿದ ಜಯಕ್ಕೆ; ಬಹು ಸಂತೋಷಭರಿತರಾಗಿ ವಿನೀತರಾದಂಥಾ ಗ್ರಾಮಾಧಿಪತಿಗಳೂ, ಗ್ರಾಮದಲ್ಲಿರುವ ಬ್ರಾಹ್ಮಣಾದಿ ನಾನಾ ಸಜ್ಜನರ ಮಧ್ಯದಲ್ಲಿ, ವಿರಾಜಮಾನರಾದ ಶ್ರೇಷ್ಠರಾದ, ಉರುಚೇತಸ= ಪೂರ್ಣಪ್ರಜ್ಞರ ಪಾದಸನ್ನಿಧಿಯಲ್ಲಿ ನಮ್ರೀಭೂತನಾಗಿ ತಲೆಬಾಗಿ ಕೈಜೋಡಿಸಿ ನಿಂತ ಪುರುಷಶ್ರೇಷ್ಠನಾದ ಜಯಸಿಂಹ ಮಹರಾಜನಿಗೆ, ಆಶೀರ್ವಾದವನ್ನು ಮಾಡುತ್ತ, ಆ ಆಶೀರ್ವಚನದಿಂದ ಸಂತೋಷಪಡಿಸಿದರು.

**ಶ್ಲೋಕ ॥ ಉಪಚರತಿ ನಿತಾಂತಂ ಹಂತ ಪೌರಂದರೀ ಧೂ ।**
**ರ್ದ್ಯುಸದಸಿ ಭಜತೋಯಂ ದುರ್ಲಭಾದಭ್ರಭಾಗ್ಯೈಃ ॥**
**ದಿಶತು ಸಪರಮಾಗ್ರ್ಯಾನಂದ (ಪರಮಾನಂದಾಗ್ರ್ಯ)**
**ತೀರ್ಥಾಂಘ್ರಿರೇಣು ।**
**ರ್ಧರಿಣಿಧರ ಸುಖಂ ತೇ ಸಂತತಂ ಸ್ವಾಂತರೇತಿ ॥ ೪ ॥**

ವಾರ್ಧಿಕ ‖ ಹೇ ಸ್ವಾಂತರನೆ ಧರಣಿಧರನೆ ಪರಮಾನಂದ | ಆ ಸುಶಾಸ್ತ್ರ
ರಚಿತ ವರ ಮಧ್ವರ ಪಾದ | ಪಾಂಸು ನಿನ್ನಗೆ ಸದಾ ಸುಖ
ವನ್ನು ಕೊಡಲಿ ಈ ರಜವಲ್ಪಭಾಗ್ಯರಿಂಗೆ ‖ ಆತು ದುರ್ಲಭ
ಇವರಂಘ್ರಿ ರೇಣಾವದರಿ | ಲೇಸು ಸೇವಿಸಲಿಂದ್ರಪದ
ಪ್ರಾಪ್ತಿಯೇ ನಿಜವು | ಹೇ ಸುಖಿ ನೀನಿಂದ್ರಪದ ಯೋಗ್ಯನ
ಎಂಬ ಆಶಿಷನೆ (ದಿ) ಸೂಚಿತವಾಯ್ತು ‖ ೪ ‖ ೭೫೮ ‖

**ಭಾವಾರ್ಥಃ—** ತ್ರಿವಿಕ್ರಮ ಪಂಡಿತಾಚಾರ್ಯರು ಜಯಸಿಂಹರಾಜನಿಗೆ ಮಾಡಿದ ಆಶೀರ್ವಚನಗಳನ್ನು ಉದಾಹರಿಸುತ್ತಾರೆ.

ಹೇ ಸ್ವಾಂತರನೆ-ನಿರ್ದೋಷವು ಅಂತಃಕರಣ ಸ್ವಚ್ಛವಾದ ಮನಸ್ಸುಳ್ಳ, ಧರಣೀಧರನೆ ಭೂಮಿಯ ಧಾರಕನಾದ ಪಾಲಕನಾದ ಅರಸನೇ, ಹೆಚ್ಚಿನ ಆನಂದವನ್ನು ಕೊಡತಕ್ಕ ಶ್ರೇಷ್ಠವಾದ ಶಾಸ್ತ್ರವನ್ನು ರಚಿಸಿದವರು-ಶ್ರೇಷ್ಠ ಸರ್ವಜೀವೋತ್ತಮರಾದ ಮಧ್ವರ ಪಾದದ, ಪಾಂಸು=ಧೂಳಿಯು ಸರ್ವದಾ ನಿನ್ನಗೆ ಸುಖವನ್ನು ಕೊಡಲಿ ಇವರ ಪಾದಧೂಳಿಯು, ಸ್ವಲ್ಪ ಪುಣ್ಯವಂತರಾದ ಅಲ್ಪ ಮಾನವರು (ಅತಿ) ತ್ವರಾ ಹೊಂದಲಾರರು, ಅಶಕ್ಯವು. ಈ ಮಧ್ವಾಚಾರ್ಯರ ಅಂಘ್ರಿ ಪಾದದ, ರೇಣು-ಧೂಳಿಯನ್ನು ಯಾರು ಮಹಾ ಭಕ್ತಿಯಿಂದ ಸೇವಿಸುವರೋ, ಅವರಿಗೆ ಸ್ವರ್ಗಾಧಿಪತ್ಯವಾದ ಇಂದ್ರಪದವಿ ಪದವಿಯು ನಿಜವಾಗಿ ಪ್ರಾಪ್ತವಾಗುವುದು. ಎಲೈ ಸುಮತಿ ಶಾಸ್ತ್ರದಿಂದ ಕೂಡಿದ ಗುಣಗಳುಳ್ಳ ಜಯಸಿಂಹ ಭೂಪಾಲನೇ, ನೀನು ಅತ್ಯಂತ ಭಕ್ತಿಯಿಂದ ಶ್ರೀಮದಾಚಾರ್ಯರ ಪಾದಧೂಳಿಯನ್ನು ಸೇವಿಸುತ್ತಿರುವುದರಿಂದ ನೀನು ಇಂದ್ರಪದಕ್ಕೆ ಯೋಗ್ಯನೇ ಹೊರತಾಗಿ ಅಲ್ಪಾಧಿಕಾರಿಯಲ್ಲವೆಂದು ಈ ಗ್ರಂಥಕರ್ತರು ಸೂಚಿಸುತ್ತಾರೆ. ಅಹೋ, ಭಾವಿ ಬ್ರಹ್ಮರಾದ ವಾಯ್ವಂಶ ಮಧ್ವರನ್ನು ಸೇವಿಸಲು ಅನೇಕ ದೇವತೆಗಳು ಸಹ, ಭೂಮಿಯಲ್ಲಿ ಅವತರಿಸಿ, ಅವರ ಅಂಗಭೂತರಾದ ಸೇವೆಮಾಡಿ, ಸಾಧನವನ್ನು ಕೊಳ್ಳುವರು, ಇದು ಭಗವಂತನ ನಿಯಮ.

ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ರಚಿಸಿದ ಆಶೀರ್ವಾದ ಶ್ಲೋಕವನ್ನು ಭಾವಪ್ರಕಾಶಿಕೆಯು ಉದಹರಿಸಿರುವರು. "ಸ್ವ ಸುಂದರೀ ಭುಜಲತಾ ಪರಿರಂಭಿಣೀ ಧೂಃ ಪೌರಂದರೀ ಭವತಿ ಯ ಭಜತಾಂ ಭುಜಿಷ್ಯಾ | ಆನಂದತೀರ್ಥ ಭಗವತ್ಪದರೇಣುಃ ಸ್ವಾನಂದದೋ ಭವತು ತೇ ಜಯಸಿಂಹ ಭೂಪ ‖ ಇದರ ಸಾರಾಂಶವೇನಂದರೆ, ಹೇ ಜಯಸಿಂಹ ರಾಜನೆ, ಯಾವ ಪಾದಧೂಳಿಯನ್ನು ನಿತ್ಯ ಧರಿಸಿ ಸೇವಿಸುವರಿಗೆ, ಸ್ವರ್ಗಲೋಕದ, ಅತಿ ಸುಂದರಾಂಗಿಯರ, "ಭುಜಲತಾ-ಬಳ್ಳಿಗಳಂತೆ ಬಳುಕುವ ತೋಳುಗಳಿಂದಪ್ಪಿಕೊಳ್ಳುವ, ಸ್ವರ್ಗಾಧಿಪತಿಯಾದ ದೇವೇಂದ್ರನ ಪದಸ್ಥಾನವೇ ವಶವಾಗುತ್ತದೆ-ಸಿಗುತ್ತದೋ ಅಂಥ ಶ್ರೀಮದಾನಂದತೀರ್ಥರ ಪಾದಕಮಲಗಳ ಧೂಳಿಯು ನಿನಗೆ ಅತ್ಯುತ್ತಮವಾದ ಸುಖಾನಂದವನ್ನು ಕೊಡಲಿ.

**ಶ್ಲೋಕ ‖ ಅನತಿಪರಿಚಿತಸ್ಯಾಪ್ಯಸ್ಯ ಸೋಽಯಂ ಕವೀಂದ್ರೋ |**
**ಗುಣರಸಮತಿಗೂಢಂ ಜ್ಞಾತವಾನಿತ್ಯಚಿತ್ರಮ್ ‖**
**ಮಧುಮಧುಕರರಾಜೋ ನಿಷ್ಪತನ್ ಪೌಷ್ಪಮಾಪ್ತುಂ |**
**ನನು ಪರಿಚಯಹೀನಃ ಕಾನನೇಽಪಿ ಪ್ರಭುಃ ಸ್ಯಾತ್ ‖ ೫**

ವಾರ್ಧಿಕ || ಜಾಣ ಪಂಡಿತವರಂ ತ್ರಿವಿಕ್ರಮಾಚಾರ್ಯ ತಾಂ । ತಾನು
ಪೂರ್ವದಲಿ ಅತ್ಯಂತ ಪರಿಚಯ ವಿರದೆ | ಪ್ರಾಣ ಮಧ್ವಾರ್ಯರತಿ
ಗೂಢ ಗಂಭೀರ ಶುಭಗುಣಸಾರ ವರಿದಚ್ಚರೇಂ ॥ ಕಾನನದಿ
ಸಂಚರಿಪ ಶ್ರೇಷ್ಠ ಮಧುಕರ ರಾಜ | ನಾನ ಪುಷ್ಪಗಳ ತಾಂ
ಅರಿಯದಾ ಸ್ಥಳದಿಯುರೆ | ಸೂನಕದ ಸೌಗಂಧದಿಂದ ಅರಿವಂತಿ
ವರು ಮಧ್ವಪಾದಾಬ್ಜ ಭ್ರಮರ ||| ೫ || ೭೫೯ |||

**ಭಾವಾರ್ಥ :—** ಜಾಣ = ಸುಜ್ಞಾನಿಗಳಲ್ಲಿ ಶ್ರೇಷ್ಠರಾದ ತ್ರಿವಿಕ್ರಮಪಂಡಿತಾಚಾರ್ಯರು, ಜನುಮದಲ್ಲಿ ಮಾನವರೀತ್ಯಾ ಮೊದಲಿನಿಂದ, ಶ್ರೀಮಧ್ವಾಚಾರ್ಯರಿಗೆ, ಪರಿಚಯ ವಿರದೇ ದ್ದರೂ, ಮುಖ್ಯಪ್ರಾಣಾಂಶ ಸಂಭೂತರಾದ ಶ್ರೀಮದಾಚಾರ್ಯರಲ್ಲಿ ಅತಿಗೌಪ್ಯವಾದ = ಗೂಢ ಾದ ಗಾಂಭೀರ್ಯಾದಿ ಅನೇಕ ಸದ್ಗುಣಗಳ ಸಾರವನ್ನು ತಿಳಿದದ್ದು ಆಶ್ಚರ್ಯವಲ್ಲ. ಏಕೆಂದರೆ ಡವಿಯಲ್ಲಿ ಸಂಚಾರಮಾಡುವ, ಶ್ರೇಷ್ಠ ಮಧುಕರರಾಜ = ಅಜ್ಞಾನಿಯಾಗಿ ಕೀಟಜನ್ಮವು ತಾಳಿದ ಂಗೆಯು ಹುಳವು, ಆ ಕಾನನದಲ್ಲಿದ್ದ ಎಲ್ಲ ಹೂವುಗಳನ್ನು ತಾನು ನೋಡದೇ ಇದ್ದರೂ, ಮಂದ ಾರುತವಾದ ತಂಗಾಳಿಯಿಂದ, ದೂರ ದೂರದಲ್ಲಿರುವ ಹೂಗಳ ಸುವಾಸನೆಯನ್ನು ತಿಳಿದು, ಪರಿಮಳ ಮಾರ್ಗವಾಗಿಯೇ ಹುಡುಕುತ್ತ ಹೋಗಿ, ಆ ಹೂಗಳನ್ನು ನೋಡಿ, ಆ ಕುಸುಮ ಳಲ್ಲಿರುವ ಮಕರಂದವನ್ನು ನಿತ್ಯ ಸೇವಿಸುವಂತೆಯೇ ತ್ರಿವಿಕ್ರಮಪಂಡಿತಾಚಾರ್ಯರು ಪೂರ್ವ ಲ್ಲಿ ಶ್ರೀ ಸರ್ವಜ್ಞರಿಗೆ ತಾವು ಗುರ್ತು ಇಲ್ಲದವರಾದರೂ, ಶ್ರೀಮದವಲಬೋಧರ ಗೌಪ್ಯವಾಗಿ ುವ ಮಹಾಗುಣಗಳನ್ನು ತಿಳಿದುದು ಆಶ್ಚರ್ಯವಲ್ಲ ರುದ್ರಾದಿ ದೇವತೆಗಳು ಸಂತತವಾಗಿ ೀ ಮಧ್ವಪಾದಕಮಲಗಳಿಗೆ ಭ್ರಮರರಾಗಿರುವುದು ನಿಜ.

**ಶ್ಲೋಕ || ಅಖಿಲಖಲಕುಲಾನಾಂ ವರ್ಧಯನ್ ದ್ವೇಷದೋಷಂ ।**
**ವಿದಧದಪಿ ನರಾಣಾಂ ಕೌತುಕಂ ಮಧ್ಯಮಾನಾಮ್ ॥**
**ಸ್ವಗತಿ ಸಮುಚಿತಾನಾಂ ಭೂತಿದಾಯೀ ಶುಭಾನಾಂ ।**
**ಬಹುಲಹೃದಿಹ ನಿನ್ಯೇ ಶರ್ವರೀಃ ಕಾಶ್ಚಿದೇವಮ್ || ೬ ||**

ವಾರ್ಧಿಕ ॥ ಸುಖತೀರ್ಥ ಬಹುಲಹೃದಯರು ಇನಿತು ಮಹಿಮೆಯಿಂ | ಸಕೃತ
ಈ ಏಷ್ಣು ಮಂಗಳದಿ ಕೆಲ ರಾತ್ರಿಯಲಿ | ಸುಖಕೊಡಲು ವಾಸ
ವನು ಮಾಡಿದರು ಏನಂಬೆ ಇವರ ಆಚರಣೆ ಜಗದಾ ॥ ಅಖಿಳ
ಖಳಗಣಕೆ ತಮ್ಮಲಿ ದ್ವೇಷವೆನೆ ದೋಷ । ಪ್ರಕಟಿಸೆಭಿವರ್ಧಿ
ಸಿತು ಮಧ್ಯಮ ನರರಿಗೆ ಕೌ | ತುಕವೆ ತೋರಿತು ಸುಜನ
ಮುಕುತಿ ಯೋಗ್ಯರಿಗೆ ಭಕುತಿಯು ಜ್ಞಾನ ಭೂತಿದಾಯಿ || ೬ ||
|| ೭೬೦ ||

ಭಾವಾರ್ಥ :— ಸುಖತೀರ್ಥ=ಆನಂದಪ್ರದ ಶಾಸ್ತ್ರವನ್ನು ರಚಿಸುವ (ಬಹುಲಹೃದಯ) ಪೂರ್ಣಪ್ರಜ್ಞಾಚಾರ್ಯರು ಸಕೃತ — ಸದ್ಯ ,ಶ್ರೀ ವಿಷ್ಣು ಮಂಗಳ ದೇವಸ್ಥಾನದಲ್ಲಿ ಪೂರ್ವೋಕ್ತ ಪ್ರಕಾರ ಮಹಾಮಹಿಮೆಗಳನ್ನು ತೋರುತ್ತ, ಕೆಲವು ರಾತ್ರಿಗಳಲಿ ಅಂದರೆ ಕೆಲವು ದಿನಗಳ ವರೆಗೆ, ಲೋಕ ಜನರಿಗೆ ಸುಖವನ್ನು ಕೊಡಲು ಸತ್ಕರ್ಮಾಚರಣೆ ಮಾಡುತ್ತ ವಾಸ ಮಾಡಿದರು. ಈ ಮಹನೀಯರ ಸತ್ಕರ್ಮಾನುಷ್ಠಾನ ಆಚರಣೆಯು ಜಗತ್ತಿನಲ್ಲಿಯ ಸಕಲ ದುಷ್ಟ ಜನಸಮುದಾಯಕೆ, ಶ್ರೀ ಮದಾಚಾರ್ಯರಲ್ಲಿ, ದ್ವೇಷವೆಂಬ ದೋಷರೂಪವಾದ ಪಾಪವು, ಹೆಚ್ಚಾಗಿ ಪ್ರಕಟಿಸಿತು. ನಿತ್ಯ ಸಂಸಾರಿಗಳಾದ ಮಧ್ಯಮ ಜನರಿಗೆ, ಬಹು ಆಶ್ಚರ್ಯಕರವಾಗಿ ತೋರಿತು. ಮುಕ್ತಿ ಯೋಗ್ಯರಾದ ಸಜ್ಜನರಿಗೆ (ಭೂತಿದಾಯಿ) ಭಕ್ತ್ಯುದ್ರೇಕಾದಿ, ಐಶ್ವರ್ಯಪ್ರದವಾಯಿತು. ಅಂದರೆ, ಶ್ರೀ ಮದಾಚಾರ್ಯರ ಅಮಾನುಷ ಮಹಿಮೆಗಳನ್ನು ನೋಡಿ ಅದನ್ನು ಸಹಿಸಲಾರದ ಅಧಮ ಜನರಿಗೆ ಶ್ರೀ ಮಧ್ವರಲ್ಲಿ ದ್ವೇಷವು ಪುಟ್ಟಿತು. ಮಧ್ಯಮರಿಗೆ ಆಶ್ಚರ್ಯವಾದಿತು. ಉತ್ತಮಾಧಿಕಾರಿಗಳಾದ ಸಾತ್ವಿಕರಿಗೆ, ಶ್ರೀ ಸರ್ವಜ್ಞರಲ್ಲಿ ಭಕ್ತ್ಯುದ್ರೇಕವಾದಿತು.

**ಶ್ಲೋಕ ॥ ಉದಯತಿ ವಿನತಾಯಾ ನಂದನೇ ಶ್ಲಾಘ್ಯಕಾಲೇ ।**
**ಸಕೃತ ಸಕಲ ಕೃತ್ಯಃ ಕೃತ್ಯವೇದಿಪ್ರವೇಕಃ ॥**
**ಅರುಣಯುವನಿಕಾಂತಬ್ರಹ್ಮನಾರಾಯಣಾಖ್ಯಂ ।**
**ಗುರುಗುಣಮಭಿದಧ್ಯೌ ಯೋಗ್ಯ ಯೋಗಾಸನಸ್ಥಃ ॥ ೭ ॥**

ವಾರ್ಧಿಕ ॥ ವಿಹಿತ ಕರ್ಮಾನುಜ್ಞರಲ್ಲಿ ವರಮಧ್ವಾರ್ಯ | ಮಹಿತ ಸುಶ್ಲಾಘ್ಯ
ವರುಣೋದಯಕೆ ರವಿಮೂಡೆ | ಪ್ರಹರವಿರೆ ಪ್ರಾತಃಕಾಲದ
ಸ್ನಾನ ವಖಿಲ ಕರ್ಮಾಚರಣೆ ಆಚರಿಸುತ || ಮಿಹಿರ ಉದಯಕೆ
ಎರಡು ಘಟಿಕವಿರೆ ಅರುಣಮಯ || ವಿಹುದು ಯವನಿಕ ಖಳನಿ
ವಾರಣ ಸಮಾಧಿಶುಚಿ । ಬಹುದದರ ಮಧ್ಯ ಯೋಗಾಸನದಿ
ಗುರುಗುಣಂ ಬ್ರಹ್ಮ ನರೇಯಣ ಧ್ಯಾನಿಸಲ್ || ೭ || ೭೬೧ ||

ಭಾವಾರ್ಥ:— ದೇವೋತ್ತಮರಾದ ವಾಯುದೇವರು ತಾವು ನಿತ್ಯದಲ್ಲಿ ವಿಧಿಬದ್ಧರಲ್ಲವಾದರೂ ಮನುಜಾಕಾರ ತಾಳಿದ ಶ್ರೀ ಸರ್ವಜ್ಞರಾಯರು, ಲೋಕ ಶಿಕ್ಷಾರ್ಥವಾಗಿ ಮಾಡಿ ತೋರಿದ, ನಿತ್ಯಾಹ್ನಿಕ ಕರ್ಮಗಳನ್ನು, ವಿಶದವಾಗಿ ವರ್ಣಿಸುತ್ತಾರೆ. (ಕೊನೆಯ ಸರ್ಗವರಿಗೆ) ವಿಹಿತ ಕರ್ಮಾನುಜ್ಞ=ಸತ್ಕರ್ಮಾನುಷ್ಠಾನ ಪ್ರವರ್ತಕರೂ ಸದಾಚಾರ ಸಂಪ್ರದಾಯ ಬಲ್ಲವರಲ್ಲಿ ಶ್ರೇಷ್ಠರಾದ ಶ್ರೀ ಮದಾಚಾರ್ಯರು, ಮಹಿತ= ಪೂಜ್ಯರಾದ ಕಶ್ಯಪ ಪತ್ನಿಯಾದ ವಿನತಾದೇವಿಯಲ್ಲಿ ಪುಟ್ಟಿದ ಮಗ ಅರುಣ=ದೇವರು ಸೂರ್ಯಸಾರಥಿ, ಅರುಣೋದಯವಾಗಲು, (ಸುಶ್ಲಾಘ್ಯ) ಒಳ್ಳೆ ಯೋಗ್ಯಕಾಲವೆಂದರೆ, ಸೂರ್ಯೋದಯಕ್ಕೆ ೭|| ಘಳಿಗಿಕಿಂತಲೂ ಪೂರ್ವದಲ್ಲಿಯೇ ರವಿಮೂಡೆ= ಸೂರ್ಯ ಹೊರಡಲು ಪ್ರಹರವಿರೆ ೭|| ಗಳಿಗೆ ಇರಲು, ಎದ್ದು ನಿತ್ಯ ಶೌಚಾಚಾರ ವಿಧಿಯನ್ನು ತೀರಿಸಿ ೧|| ಗಳಿಗೆ ಆದ ಮೇಲೆ ಮುಂದೆ ೬ ಘಳಿಗೆ ಇರಲು ಸ್ನಾನವನ್ನು ಮಾಡಿ, ಪ್ರಾತಃಕಾಲದಲ್ಲಿ ಆಚರಿಸತಕ್ಕ ಸಂಧ್ಯಾ ಪ್ರಣವಾದಿ ಮಂತ್ರ ಜಪ ಎಲ್ಲ ಸತ್ಕರ್ಮಾಚರಣೆಯನ್ನು ಆಚರಿಸಿದವರಾಗಿ ಮಿಹಿರ ಉದಯಕೆ=ಸೂರ್ಯೋದಯಕೆ ಎರಡು ಗಳಿಗೆ ಇರಲು, ಅರುಣಮಯ ಕಿಂಚಿತು ಕೆಂಪಾದ ಬಣ್ಣವುಳ್ಳ ದುರ್ಜನರ ದೃಷ್ಟಿ ನಿವಾರಣಾರ್ಥವಾಗಿ, ಸ್ವಜನಕ್ಕೆ

ಮಧ್ಯ ಭಾಗದಲ್ಲಿ, ಎರಡನೇದವರಿಗೆ ತಾವು ಕಾಣಿಸದಂತೆ, ನಡುವೆ ಗೋಡೆಯಂತೆ ಆವರಣರೂಪವಾಗಿಯೂ, ಮತ್ತು ಚಿತ್ತೈಕಾಗ್ರತಾ ಎಂಬುವ, ಸಮಾಧಿ-ಯೋಗ ಸಿದ್ಧ್ಯರ್ಥವಾಗಿ, ಯವನಿಕಾ= ಕಾವಿಶಾಟಿಯ ಪರದೆಯಲ್ಲಿ, ಬಹು ಉಚ್ಚ ನೀಚವಾಗಿರದೇ, ಸಮಾನವಾಗಿರುವ, ''ಚೈಲಾಜಿನ ಕುಶೋತ್ತರಂ'' ಎಂಬಂತೆ ಇಂಥ ಯೋಗ್ಯವಾದ ಯೋಗಾಸನದಲ್ಲಿ ಕುಳಿತು; ಗುರುಗುಣಂ= ಜ್ಞಾನಾನಂದಾದಿ ಗುಣ ಪರಿಪೂರ್ಣನಾದ ಶ್ರೀಮನ್ನಾರಾಯಣಾಖ್ಯ ಪರಬ್ರಹ್ಮನನ್ನು ಧೇನಿಸಿಸಿದರು. ಸದಾ ಅಂತಃ ಬಹಿಯಲ್ಲಿ ಸ್ವಮ್ಮ ಬಿಂಬನಾದ ಶ್ರೀ ಹರಿಯನ್ನು ನೋಡಿ ಧ್ಯಾನಿಸುತ್ತಿದ್ದರೂ, - ಸಜ್ಜನರಿಗೆ ಸನ್ಮಾರ್ಗ ತೋರಿಸಲು, ಧ್ಯಾನೋಪಾಸನೆಗೈದರು. ಪ್ರತಿಯೊಬ್ಬ ಮುಕ್ತಿ ಯೋಗ್ಯರು ಅನ್ಯ ಕುಕರ್ಮಗಳನ್ನು ಸರ್ವದಾ ತ್ಯಾಗ ಮಾಡಿ, ವಿಹಿತ ಕರ್ಮಾಚರಣೆ ಆಚರಿಸುತ್ತ ಸದಾಚಾರ ವಿಚಾರ ಮಾಡುತ್ತ ಹೃದ್ಗತನಾದ (ಶ್ರೀಹರಿ) ಬಿಂಬ ಮೂರ್ತಿಯನ್ನು ಧೇನಿಸುವದು ಅತ್ಯವಶ್ಯಕವೆಂದು ತೋರಲು, ಸಜ್ಜನರ ಹಿತಕ್ಕೆ ಏಕಾಂತಚಿತ್ತದಿಂದ ಧೇನಿಸಿದರೇ ಹೊರತಾಗಿ ಸದಾ ಶ್ರೀಹರಿಯ ಧ್ಯಾನದಲ್ಲಿರುವ ಶ್ರೀ ಹರಿಯ ಏಕಾಂತ ಭಕ್ತರು.

ದಾಸಾರ್ಯರು ಈ ಪದ್ಯದಲ್ಲಿ - ಮೂಲ - ಶ್ಲೋಕದಲ್ಲಿ ಇರದೇ ಇದ್ದ ಪದಗಳು, ''ಪ್ರಹರದಲಿ'' ''ವಿಹರ ಉದಯಕೆ'' – ಎರಡು ಘಳಿಗೆಯಲಿ'' ಈ ಎರಡು ಪದಗಳು ಟೀಕಾರೂಪವಾಗಿ, ಯತಿಗಳ ಸ್ನಾನ ಕಾಲ, ಧ್ಯಾನ ಮಾಡಲು ಯೋಗ್ಯ ಕಾಲ ಸೂಚಿಸಿರುವರು.

''ಬ್ರಾಹ್ಮೇ ಮುಹೂರ್ತೇ ಚೋತ್ಥಾಯ'' ಎಂಬುವ ಪದಕ್ಕೆ ರಾತ್ರೇಸ್ತು ಪಶ್ಚಿಮೋ ಯಾಮೋ ಮುಹೂರ್ತೋ ಬ್ರಾಹ್ಮ ಉಚ್ಯತೇ= ಮತ್ತು ''ಸೂರ್ಯೋದಯಾತ್ ಪ್ರಾಕ್ ಪ್ರಹರಾರ್ಧೇ, ದ್ವೌ ಮುಹೂರ್ತೌ, ಅಸ್ಯೈ ಬ್ರಾಹ್ಮ ದ್ವಿತೀಯೋ ರೌದ್ರ ಇತ್ಯುಕ್ತಂ ಮಾಧವೀಯೇ-ಮತ್ತು ''ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ॥ ಯತೀನಾಂ ಸ್ನಾನ ಕಾಲೋಯಂ, ಗಂಗಾಂಭಃ ಸದೃಶಃ ಸ್ಮೃತ ಇತಿ ಮುಕ್ತಾವಳಿ ವಚನವು. ಕೆಲವರು ಬ್ರಾಹ್ಮೀ ಮುಹೂರ್ತಕ್ಕೆ ರವಿ ಉದಯವಾಗಲು ೬ ಗಳಿಗೆ ಕೊಡಲೆಂದು ಹೇಳಿರುವರು. ಅಂತು ಶ್ರೀ ಮಧ್ವಾಚಾರ್ಯರ ಉಕ್ತಿಗೆ ಅನುಕೂಲವಾಗಿ ಯತಿಗಳಿಗೆ ರಾತ್ರಿ ೬ ಗಳಿಗೆ ಇರಲು ಸ್ನಾನ ಗೃಹಸ್ಥಾಶ್ರಮಿಗಳು ಎರಡು ಗಳಿಗೆ ಇರುವಾಗಲೇ ಸ್ನಾನ ಮಾಡುವದೆಂದು, ಶ್ರೀ ಪುರಂದರದಾಸಾದಿ ಪ್ರಭೃತಿಗಳ ವಚನವು,

**ಶ್ಲೋಕ ॥ ಅತಿಧವಲಿತದಂತಾ ದಂತಕಾಷ್ಠೈಃ ಪ್ರಶಸ್ತೈ ।**
**ರಪಿಯುಗಪದನೇಕೇ ಸಸ್ನುರತ್ರ ವ್ರತೀಂದ್ರಾಃ ॥**
**ಗುರುಭಿರಭಿಹಿತೇಷ್ವಾ ಚಾರ ಭೇದೇಷು ನಿಷ್ಠಾಂ ।**
**ಸ್ಫುಟಮವಗಮಯಂತಃ ಸೌಷ್ಠವಾತ್ ಕರ್ಮಣಾಂ ಚ ॥೮॥**

ಸಾರ್ಥಿಕ ॥ ಸ್ವಸ್ಥ ಚಿತ್ತದಿ ಧ್ಯಾನಗೈದ ಸಜ್ಜನ ಹಿತಕೆ । ಇತ್ತ ಬಹು ವ್ರತಿ
ವವರು ಆಚಾರ್ಯರಾ ಶಿಷ್ಯ । ಹಸ್ತ ಕಿರಿಯಂಗುಲಿ ಸ್ಥೂಲ ದ್ವಿ
ದಶ ಬೆರಳು ಪ್ರಶಸ್ಥ ಕಾಷ್ಟದಿ ದಂತವ॥ ವತ್ಯುಜ್ಜ್ವ ಧವಳ ಸೌಷ್ಟವ
ಕರ್ಮರತ ಸ್ವಗುರು । ಉಕ್ತ ಆಚಾರ ಭೇದದಿ ನಿಷ್ಠರತ್ಯಂತ। ಉತ್ತ
ಮೆಂತಿಳುಹೆ ಲೋಕರಿಗಲ್ಲಿರೊ ತಟಾಕದೇಕದಾ
ಸ್ನಾನಗೈದರ್ ॥ ೮ ॥ ೭೬೩ ॥

ಭಾವಾರ್ಥ:—ಶ್ರೀ ಸರ್ವಜ್ಞರು ಈ ಪ್ರಕಾರವಾಗಿ ಸಜ್ಜನ ಹಿತಕ್ಕಾಗಿ ಯೋಗಾಸನದಲ್ಲಿ ಶ್ರೀ ಹರಿಯನ್ನು ಧ್ಯಾನಿಸುತ್ತಿರಲು, ಶ್ರೀ ಸರ್ವಜ್ಞರ ಶಿಷ್ಯರಾಚರಣೆಯನ್ನು ವರ್ಣಿಸುತ್ತಾರೆ. ಇತ್ತ ಕಡೆಗೆ ಶ್ರೀ ಸರ್ವಜ್ಞರಾಯರ ಶಿಷ್ಯರಾದ ಅನೇಕ ಯತಿ ಶ್ರೇಷ್ಠರು ಶೌಚಾಚಾರಗಳನ್ನು ತೀರಿಸಿ ಪ್ರಶಸ್ತವಾಗಿ, ಕ ಕಿರಿಬಟ್ಟು ದಪ್ಪವಾದದ್ದು ಮತ್ತು ಹನ್ನೆರಡು ಬಟ್ಟು ಉದ್ದವಿರುವ ಕಟ್ಟಿಗೆ ಕಡ್ಡಿಗಳನ್ನು ತಿಕ್ಕಲಿ ಯೋಗ್ಯವಾದದಂತಕಾಷ್ಠದಿಂದ,ವತ್ತು ೃಜ್ಜ = ಚನ್ನಾಗಿ-ಹಲ್ಲುಗಳನ್ನು ಶೋಧಿಸಿ ತಿಕ್ಕಲು, ಹಲ್ಲುಗಳಲ್ಲಿಯ ಎಲ್ಲ ಹೊಲಸು ಹೋಗಿ ಅತಿ ಬಿಳುಪಾಗಿರಲು ಸೌಷ್ಠವ ಕರ್ಮರತ= ಶಾಸ್ತ್ರವಿಹಿತವಾಗಿ, ಗಂಡೂ ಬಾಯಿ ಮುಕ್ಕಳಿಸಿಕೊಂಡು ಶೌಚಾಮನ ಪ್ರಾಣಾಯಾಮಾದಿ ನ್ಯೂನಾಧಿಕರಹಿತವಾಗಿ, ಆಶ್ರಮೋಚಿ ವಾದ ಕರ್ಮಗಳನ್ನಾಚರಿಸುತ್ತ ತಮ್ಮ ಗುರುಗಳು ತಮತಮಗೆ ಉಪದೇಶಿಸಿದ ಆಚಾರ ಭೇದದಲ್ಲಿ(ನಿಷ್ಠೆ ಅದರವನ್ನು ತೋರುತ್ತ ಚನ್ನಾಗಿ ಲೋಕರಿಗೆ ತಿಳಿಸುವರಾಗಿ, ಆ ವಿಷ್ಣುಮಂಗಳ ದೇವಾಲಯ ಸಮೀಪದಲ್ಲಿರುವ (ತಟಾಕ) ಸರೋವರದಲ್ಲಿ ಎಲ್ಲರೂ ಒನ್ಮೇಲೇ ಸ್ನಾನಮಾಡಿದರು.

ಆಹೋ, ಶಿಷ್ಯರಲ್ಲಿರುವ ಗುರು ಉಪದಿಷ್ಟ ಆಚಾರ ಭೇದ ನಿಷ್ಠತೆಯು, ಐಕ್ಯಮತ್ಯದಿಂ ಎಲ್ಲರೂ ಒಮ್ಮೆಲೇ ಸ್ನಾನ ಮಾಡುವಿಕೆ, ಮಹತ್ವವಾದದ್ದು. ಇದೇ ಶಿಷ್ಯ ಸಂಪತ್ತಿನ ಲಕ್ಷಣ.

ಶ್ಲೋಕ ॥ ಚರಮಸಮಯಸುಪ್ತಾಃ ಪೂರ್ವಮುತ್ಥಾಯ ಶಿಷ್ಯಾ ।
ಗುರುಜನ ಪರಿಚರ್ಯಾಂ ಚಕ್ರಿರೇ ದುಷ್ಕರಾಂ ಚ ॥
ಸ ಬಹುಮತಿತದಾದ್ಯಪ್ಯರ್ಧರಾತ್ರಾತ್ ಪ್ರಸನ್ನಾಃ ।
ಸುಗತಿರಪರಥೈಷಾಂ ಸ್ಯಾತ್ ಕಥಂ ಕಾರಮಿಷ್ಟಾ ॥ ೯

ವಾರ್ಧಿಕ ॥ ಬೇಕೆನುವ ಸದ್ಗತಿಯ ಶಿಷ್ಯರುಂ ತಮ್ಮ ಗುರು ।
ಜೋಕೆಯಿಂ ಮಲಗಲಾ ನಂತರದಿ ಮಲಗುತಲಿ ।
ಕಾಕುಲತೆಯುಲಿ ಗುರುಗಳೇಳವಾ ಮುಂಚೆದ್ದು ಅಲ್ಲಿಂದ
ಅರ್ಧರಾತ್ರಿ
ನೂಕುವೋತನಕ, ಸುಪ್ರಸನ್ನದಿಂದಲ್ಪರಿಂ ।
ಸಾಕಷ್ಟು ಮಾಡಲು ಅಸಾಧ್ಯತಮ ಗುರುಸೇವೆ ।
ನೀಕರಿಸದಾದರದಿ ಮಾಡಿದರು ಇಲ್ಲದೊಡೆ ಇಷ್ಟ ಸದ್ಗತಿಯು
ಹೇಗೆ? ॥ ೯ ॥ ೭೬೩

ಭಾವಾರ್ಥ:.... ಹಗಲಿರುಳು ಶ್ರೀ ಮುದಾಚಾರ್ಯರ ಸೇವಾವೃತ್ತಿಯಲ್ಲಿ ನಿರತರಾಗೀ ಕೆಲವು ಶಿಷ್ಯರ ನೈಜಸ್ಥಿತಿಯನ್ನು ವರ್ಣಿಸುತ್ತಾರೆ.

"ಹರಿಸ್ಮೃತಿ ಸರ್ವವಿಪದ್ವಿಮೋಕ್ಷಣೀ, ಗುರುಸ್ಮೃತಿ ಸರ್ವಸಮೃದ್ಧಿದಾಯಿನೀ" ಎಂಬು ವಚನಾನುಸಾರವಾಗಿ ಸರ್ವಸಮೃದ್ಧಿಯಾದ ಸದ್ಗತಿಯಾಗಲಿಕ್ಕೆ, ಗುರುಸ್ಮರಣ ಗುರುಸೇವೆ ಮುಖ ವಾದಕಾರಣ, ಮೋಕ್ಷಾಖ್ಯ ಸದ್ಗತಿಯನ್ನು ಹೊಂದಲಪೇಕ್ಷಿಸುವರಾದ, ಕೆಲವು ಸಚ್ಛಿಷ್ಯರುಗಳು ತಮ ಗುರುಗಳಾದ ಶ್ರೀ ಮುದಾಚಾರ್ಯರು, ಅನಿದ್ರರಾದರೂ ಲೋಕರಿಗೆ ತೋರಿಸೆ, ("ಸರ್ವಜೀವ ನಿದ್ರೆ ಹರಿಯ ನಿದ್ರೆ") ಎಂಬ ಶ್ರೀ ವಿಜಯರಾಯರ ವಚನದಂತೆ, ಜೋಕೆಯಿಂ=ಜಾಗ್ರತರಾಗಿಯ

ೀ ಹರಿಯ ಧ್ಯಾನಮಾಡುತ್ತ ಕಣ್ಣುಮುಚ್ಚಿಕೊಂಡು ಮಲಗಿದವರಂತೆ ತೋರಲು, ಗುರುಗಳು ಲಗಿದರೆಂದು ಭಾವಿಸಿ, ಗುರುಸೇವೆ ಮುಗಿಸಿ ಶಿಷ್ಯರು ತಾವು ಮಲಗಿ ನಿದ್ರೆಮಾಡಿದವರಾಗಿ, ಕುಲತೆಯಲಿ=ಬಹು ಪ್ರೀತಿಭಕ್ತಿಯಿಂದಾ ತಮ್ಮ ಗುರುಗಳು ಏಳುವ ಮೊದಲಿಗೇವೆ ಎದ್ದು, ಚ್ಚತ್ತ ಕಾಲ ಮೊದಲ್ಗೊಂಡು ಮುಂದೆ ಬರುವ ಅರ್ಧರಾತ್ರಿ ನೂಕೂವೊತನಕಾ = ಹಿಂದಾಗುವ ನಕಾ ಸಂತೋಷಚಿತ್ತದಿಂದ. ಅಲ್ಪ ಭಾಗ್ಯರಿಂದ ಇಂಥ ಮಹ ಕಷ್ಟಸಾಧ್ಯವಾದ ಗುರುಸೇವೆಯನ್ನು ೀಕರಿಸದೇ– ಒಂದೂ ಬಿಡದೇ ಬಹು ಆದರದಿಂದ ಮಾಡಿದರು. ಈ ಪ್ರಕಾರ ಕಾಯಾ ವಾಚಾ ಮನಸ್ಸಿ ಂದ ಗುರುಸೇವೆ ಮಾಡುವದು ಅತ್ಯಾವಶ್ಯಕವಾದುದು. ಇಂಥ ಕಠಿಣತರವಾದ ಗುರುಶುಶ್ರೂಷೆ= ೀವೆಯನ್ನು ಮಾಡದಿದ್ದರೆ ಆ ಶಿಷ್ಯರುಗಳಿಗೆ ಅಭೀಷ್ಟವಾದಂಥಾ, ಸದ್ಗತಿಯು ಹೇಗೆ ಆದೀತು? ೋಕ್ಷಾನಂದ ಸುಖಕ್ಕೆ ಗುರುಸೇವೆಯು ಮುಖ್ಯವಾದದ್ದು.

ಶ್ಲೋಕ ॥ ಶ್ರವಣಮನನಹೇತೋಃ ಪ್ರಾಕ್ ಚಿರಾಯಾಸ್ತನಿದ್ರಃ ।
ಸಪದಿ ವಿವಶಯಂತ್ಯಾ ನಿದ್ರಯಾ ಗ್ರಸ್ತಚೇತಾಃ ॥
ಸ್ವಯಮಪಿ ನಯತಿ ದ್ರಾಗಂಗ ವಸ್ತ್ರಾದಿ ಪೂಜ್ಯೇ ।
ಝುಟಿತಿ ವಿಗತನಿದ್ರಾಃ ಕೋಽಪಿ ಶಿಷ್ಯೋಽನ್ವಶೇತ್ ॥ ೧೦ ॥

ಾರ್ಧಿಕ ॥ ನಿರುತ ಶ್ರವಣವ ಮಾಡ್ದ ಗ್ರಂಥವಂ ಚಿಂತನಿಗೆ ।
ಬರುವ ಕಾರಣ ಪೂರ್ವನಿಶಿಯಲ್ಲಿ ಬಹುಕಾಲ ।
ವರೆಗೆ ನಿದ್ರೆಯ ತಡೆದ ಶಿಷ್ಯೋರ್ವ ವಿವಶಮನದಲಿ ಉಷಃ ಕಾಲ
ವರೆಗೆ ॥
ಒರಗಿರಲು ದಯೆಯಿಂದ ಗುರುಗಳು ಸ್ವಯಮೇವ ।
ತ್ವರಿತದಿಂ ಅಂಗವಸನಾದಿಗಳನಂ ಕೊಂಡು ।
ಚರಿಸುತಿರೆ ಸ್ನಾನಕ್ಕೆ ಭರದಿ ಎಚ್ಚತ್ತು ತಾಂ ಮರುಗಿದನು
ಗುರುಭಕುತಿಯಿಂ ॥ ೧೦ ॥ ೭೬೪ ॥

ಭಾವಾರ್ಥ:— ಸಂತತವಾಗಿ ನಿತ್ಯ ಗುರುಗಳಿಂದ ಪಾಠ ಕೇಳುವುದು, ಕೇಳಿದ ಗ್ರಂಥವನ್ನು ನ್ನಾಗಿ ಪಠಿಸಿ, ಮನನಗೈಯಲು ಚಿಂತನೆ ಮಾಡಿ ಒಲಿಸುವದು, ಹೀಗೆ ಚಿಂತನೆ ಮಾಡುತ್ತ ಪೂರ್ವ ತ್ರಿಯಲ್ಲಿ ಬಹು ಕಾಲದ ವರೆಗೆ, ಪಾಠ ಗಟ್ಟಿ ಮಾಡುತ್ತ ಬಹು ಹೊತ್ತಿನ ವರೆಗೆ ನಿದ್ರೆಗಟ್ಟಿರುವದ ಂದ ಉಷಃ ಕಾಲವರಿಗೆ ವಿವಶ=ಎಚ್ಚರವಿಲ್ಲದೇ ಪರಾಧೀನಗೊಳಿಸುವ ನಿದ್ರೆಯಿಂದ ಬಾಧಿತ ಮನ ಳ್ಳ, ಒಬ್ಬ ಶಿಷ್ಯನು, ಒರಗಿರಲು = ಮಲಗಿರಲು, ಗುರುಗಳು ಆ ಶಿಷ್ಯನ ಮೇಲಿನ ದಯೆಯಿಂದ, ಯ್ಯೋ, ಇವನು ಪಾಠ ಚಿಂತನೆ ಮಾಡುತ್ತ ಬಹು ಕಾಲ ವರೆಗೆ ಎಚ್ಚತ್ತಿದ್ದನೆಂಬ ಅಂತಃಕರಣದಿಂದ ುಗಳು ತಾವೇ ತಮ್ಮ ಸ್ನಾನಕ್ಕೆ ಉಪಯೋಗವಾಗತಕ್ಕ, ಅಂಗವಸನ = ಮೈಮೇಲಿನ ಸ್ನಾನಕ್ಕೆ ಪಯೋಗವಾಗವ ಚಿಕ್ಕ ಪಂಜೆಗಳು, ಮತ್ತು ದಂಡ ಕಮಂಡಲಾದಿಗಳನ್ನು ತೆಗೆದುಕೊಂಡು ಸ್ನಾನಕ್ಕೆ ೀಗುತ್ತಿರಲು; ಆ ವಿವಶಮನನಾಗಿ ಮಲಗಿರ್ದ ಶಿಷ್ಯನು ಕೂಡಲೇ ನಿದ್ರೆಯಿಂದ ಎಚ್ಚತ್ತು ಅಹೋ ುಗಳು, ತಮ್ಮ ಸ್ನಾನಾಂಗವಸ್ತ್ರಾದಿಗಳನ್ನು ತಾವೇ ತೆಗೆದುಕೊಂಡು ಹೋಗಿರುವರೆಂದು ಗುರುಭಕ್ತಿ ಂದ, ಮರುಗಿದನು=ಪಶ್ಚಾತ್ತಾಪ ಬಟ್ಟನು.

**ಶ್ಲೋಕ || ವಿಹಿತಮವಿಹಿತಂ ಪ್ರಾಗೇವ ಕಸ್ಮಾದ್ವಿನಿದ್ರೈ |**
**ರಿತಿಗುರುಪರಿವಾದಾಶಂಕಯಾ ನಮ್ರಗಾತ್ರಾಃ ||**
**ಚಿರಮನವತರಂತಃ ಶ್ರಾವಕಾ ಮುಕ್ತಮಾರ್ಗಾ |**
**ಗುರುಜಲಸಕಾಶಸ್ತೇಷು ತೂಷ್ಣೀಮತಿಷ್ಠನ್ || ೧೧ ||**

ವಾರ್ಧಿಕ || ಅಗೆ ಮೊದಲಿ ನಿದ್ರಿಯಿಂದೆದ್ದು ನೀವ್ ನಿಮ ವಿಹಿತ |
ಸುಗಮ ಕಾರ್ಯವ ಮಾಡಲಿಲ್ಲೆಂದು ಬೈಯ್ಯುವರೊ |
ಭುಗಿಲು ಗುರು ಭರ್ತ್ಸನಶಂಕೆಯಲಿ ತಾಂ ನಮ್ರ ಗಾತ್ರದೇ
ಶಿಷ್ಯರುಗಳು |
ಸುಗುಣರಂ ವ್ಯಾಖ್ಯಾನ ಶ್ರವಣ ಗೈದವರಾಗ |
ಮಿಗೆ ಗುರುವು ಜಲದಲಿರೆ ಚಿರವಿಲಂಬಿಸಿ ತಾವು |
ಸುಗಮದಿಂ ಮಿಂದು ಬರುತಿಹ ಗುರುಗಳಿಗೆ ಮಾರ್ಗ ಬಿಡುತ
ಸುಮ್ಮಗೆ ನಿಂತರು || ೧೧ || ೭೬೫ |

ಭಾವಾರ್ಥ:— ಅಗೆ= ಆರೆ, ನೀವು ಮೊದಲಿಗೆಯೇ ನಿದ್ರೆಗೈಯ್ಯುವದರಿಂದ ಎಚ್ಚತ್ತು ನೀವು ಮಾಡತಕ್ಕ, ವಿಹಿತ ಯೋಗ್ಯವಾದ, ಸುಗಮ= ಸುಲಭವಾದ ಕೆಲಸಗಳನ್ನು ಏಕೆ ಮಾಡಲಿಲ್ಲ ವೆಂದು ಗುರುಗಳು ಬಯ್ಯುವರೋ ಅಥವಾ ಶಿಕ್ಷಿಪರೋ ಎಂಬುವ ಭುಗಿಲು,= ಮನಸ್ಸಿನ ಭಯದಿಂ ವಿನಯಪೂರ್ವಕ ಬಾಗಿದವರಾಗಿ, ಸುಗುಣರಂ= ಸದ್ಗುಣ ಸಂಪನ್ನರೂ ನಿತ್ಯದಲ್ಲಿಯೂ, ವೇದಾಂ ಶಾಸ್ತ್ರ ಪಾಠ ಕೇಳುವವರಿಂದ ವಿಚಾರ ಶಕ್ತಿಯುಳ್ಳ ಶಿಷ್ಯರು ಬಹುಕಾಲ ವರೆಗೆ, ತಾವು ತಟಾಕ ನೀರಿನಲ್ಲಿ ಇಳಿಯದೇ ಒಂದು ಮಗ್ಗುಲಿಗೆ ನಿಂತು, ಗುರುಗಳು ತಾವು ಬಚ್ಚರಿದ್ದರೂ, ಜಲದಲ್ಲಿ ಅನ ಯಾಸವಾಗಿ ಮಿಂದು= ಸ್ನಾನ ಮಾಡಿ ಬರುವ, ಗುರುಗಳಿಗೆ ಮಾರ್ಗ = ದಾರಿಯನ್ನು ಬಿಟ್ಟು ಸುಮ್ಮನೆ ನಿಂತರು ಕವಾಚಿದಪರಾಧ ಗೈದ ಸದ್ಗುಣ ಶಿಷ್ಯರ ಲಕ್ಷಣ.

**ಶ್ಲೋಕ || ವಿಪುಲಹೃದಯಪಾರ್ಶ್ವೇ ದೀಪದೀಪ್ತಿಪ್ರದೀಪ್ತೇ |**
**ದರವರಪರಿಪೂರ್ಣೈ ರ್ವಾರ್ಭಿರರ್ಘ್ಯಾದಿದತ್ವಾ ||**
**ಯತಿರತಿಯುತಚೇತಾಶ್ಚಕ್ರಿಣೋಽರ್ಚಾನಿಕಾಯಾತ್ |**
**ಕುಸುಮಸಮಿತಿಮುಗ್ರ್ಯಾಮಾದರಾದುಜ್ಜಹಾರ ||೧೨**

ವಾರ್ಧಿಕ || ಸಾನುರಾಗದಲೊಬ್ಬ ಯತಿವರವಿರಕ್ತಮತಿ |
ತಾನು ದೀಪದ ದೀಪ್ತಿಯಲಿ ವಿಪುಲ ಹೃತ್ಸನ್ನಿ |
ಧಾನದಲಿ ಶ್ರೇಷ್ಠ ಶಂಖೋದಕದಿ ಅರ್ಘ್ಯಪಾದ್ಯಾಚಮನ
ವಾದಿಗಳನು

ಮನವಾದಿಗಳನ್ನು ||
ದಾನವಾರಿಯು ಚಕ್ರಪಾಣಿಂಗೆ ನೀಡುತಲಿ |
ಭಾನು ಉದಯಾತ್ಪೂರ್ವ ಶಾಲಗ್ರಾಮಾದಿಯಿಂ |
ಸೂನಕ ಸಮೂಹವರ ನಿರ್ಮಾಲ್ಯ ಅಂಗುಷ್ಟ ತರ್ಜನಿಲಿ
ತೆಗೆದನಾಗೆ || ೧೨ || ೭೬೬ ||

**ಭಾವಾರ್ಥ:–** ಶ್ರೀ ಮಧ್ವರಲ್ಲಿ - ಅನುರಾಗ ಸಹಿತವಾದದ್ದು, ಸಾನುರಾಗ, **ಮಹಾ** ಭಕ್ತಿಯುತರೂ, ವೈರಾಗ್ಯಶಾಲಿಗಳೂ ಆದ, ಶ್ರೀ ಸರ್ವಜ್ಞಾಚಾರ್ಯರ ಶಿಷ್ಯರಾದ ಒಬ್ಬ ಯತಿಗಳು, ನ್ನಾಗಿ-ಇಂದ್ರಿಯ ವಶಮಾಡಿದವರು; ಅರುಣೋದಯ ಕಾಲದಲ್ಲಿಯೇ ಅಂದರೆ ಸೂರ್ಯೋದಯದ ಮೊದಲಿಗೆ ನಾಲ್ಕು ಗಳಿಗೆ ಇರುವಾಗ ದೀಪದ ಬೆಳಕಿನಲ್ಲಿ, ವಿಪುಲ ಹೃದಯ=ಪೂರ್ಣ ಹೃದಯ ಚಿತ್ತದ **ಪೂರ್ಣ** ಪ್ರಜ್ಞಾಚಾರ್ಯರ ಪಾರ್ಶ್ವ=ಸನ್ನಿಧಾನ, ಹತ್ತಿರ ಒಂದೆಡೆ ಮಗ್ಗಲಿಗೆ ಕುಳಿತು **ಉತ್ತಮ** ಶಂಖದಲ್ಲಿ ನೀರು ತುಂಬಿ ದಾನವರಿಗೆ ಶತ್ರುವಾದ ಚಕ್ರಪಾಣಿಂಗೆ=ಕರದಲ್ಲಿ ಸುದರ್ಶನ ಚಕ್ರವನ್ನು ರಿಸಿದ ಶ್ರೀ ವಿಷ್ಣುವಿಗೆ ಅರ್ಘ್ಯಪಾದ್ಯ ಆಚಮನಗಳನ್ನು ಕೊಡುತ್ತಾ ಶಾಲಗ್ರಾಮಶಿಲಾಪ್ರತಿಮೆಳಿಂದ ಪೂರ್ವ ದಿನದಲ್ಲಿ ಏರಿಸಿದ ನಿರ್ಮಾಲ್ಯ ತುಳಸೀ ಮತ್ತು ಹೂಗಳ ಸಮೂಹವನ್ನು, ಶಾಸ್ತ್ರವಿಹಿತವಾಗಿ ತನ್ನ ಬಲಗೈ, ಅಂಗುಷ್ಟ ಮತ್ತು ಆ ಅಂಗುಟದ ಹತ್ತಿರಿರುವ ತರ್ಜನೀ ಬೆರಳಿನಿಂದ ಬಹು ಆದರ ಪೂರ್ವಕವಾಗಿ ತೆಗೆದರು ನಿರ್ಮಾಲ್ಯ ತುಲಸೀ ಹೂವುಗಳನ್ನು ತೆಗೆಯುವ ಕ್ರಮವು ಹೇಳಿದಂತಾಯಿತು.

**ಶ್ಲೋಕ ॥ ಅಮೃತ ಮಪಿ ನಿರೀಕ್ಷ್ಯಾ(ಕ್ಷ್ಯ) ಸ್ಯಾವಿನಿರ್ಮಾಲ್ಯಸೂನೇ |**
**ಘೃತ ಮಿದಮಿತಿಸದ್ಯೋಭ್ರಾಂತಿಮಂತೋಪಿ ಶಿಷ್ಯಾಃ ||**
**ಶ್ರದಧುರಧಿಕವಾಕ್ಯೈರ್ವಿಭ್ರಮಾಸ್ತುಚ್ಚ ಪಶ್ಚಾ |**
**ದನುದಿನಮಮೃತಾನ್ನೈಸ್ತಸ್ಯಸೇವ್ಯಸ್ಯ ಶಕ್ತ್ಯಾ || ೧೩ ||**

ವಾರ್ಧಿಕ || ಅನುದಿನದಿ ಅಮೃತಾನ್ನವನೆ ವುಂಬ ಸುರರಿಂದ |
ಘನಸೇವೆಯಂ ಗೊಳುವ ಮಧ್ವಾರ್ಯ ಮಹಮಹಿಮೆ |
ಯನುಸರಿಸಿ ನಿರ್ಮಾಲ್ಯ ಪುಷ್ಪದಲಿ ಸ್ರವಿಸುವದು ಅಮೃತ ಸುಧೆ
ನೋಡಿ ಸದ್ಯ ||
ಅನುನಯದಿ ಘೃತವೆಂದು ಭ್ರಮಿಸಿದರು ಶಿಷ್ಯರುಂ ||
ಪುನಹ ಸ್ವೋತ್ತಮರ ವಾಕ್ಯದಲಿ ನಂಬಿಕೆ ಯಿಟ್ಟು |
ಅನಿತು ಭ್ರಮೆಯಂ ಕಳೆದು ಭಕುತಿಯಿಂ ನಿಜವಾಗಿ ಅಮೃತ
ವೆಂದೆಯೆ ತಿಳಿದರು || ೧೩ || ೭೬೭ ||

**ಭಾವಾರ್ಥ:—** ಪ್ರತಿನಿತ್ಯದಲ್ಲಿಯೂ ಅಮೃತವೇ ಅನ್ನವಾಗಿರುವ, ಅಮೃತಪಾನ ಮಾಡುವ ದೇವತೆಗಳಿಂದ ಘನ = ಮಹಾ ಜೀವೋತ್ತಮತ್ವೇನ, ಸೇವಾ ಮಾಡಿಸಿಕೊಳ್ಳುವ ಶ್ರೀ ಸರ್ವಜ್ಞಾಚಾರ್ಯರ ಅತ್ಯುತ್ತಮವಾದ ಮಹಾ ಮಹಿಮೆಯಿಂದ, ಅವರು ಪೂಜಾ ಮಾಡಿ ಏರಿಸಿದ, ನಿರ್ಮಾಲ್ಯ ಹೂವು

ಗಳಲ್ಲಿ ಹನಿ ಹನಿ ಯಾಗಿ ಸ್ರವಿಸುವದು = ಸೋರುವ ತಟಗುಟ್ಟುವ ಅಮೃತವನ್ನು ನೋಡಿ, ಆ ಕ್ಷಣವೇ ಅನುನಯದಿ= ಉಪಚಾರದಿಂದ ಇದು ತುಪ್ಪವೆಂದು ಶ್ರೀ ಮಧ್ವಶಿಷ್ಯರುಗಳು ಭ್ರಮಿಸಿದರು= ಅಜ್ಞಾನದಿಂದ ಭ್ರಾಂತಿಯನ್ನು ಹೊಂದಿದರು. ಶ್ರೀ ಸರ್ವಜ್ಞರ ಮಹಿಮೆಯನ್ನು ನಿಜವಾಗಿ ತಿಳಿಯದೇ ಈ ಪ್ರಕಾರ ಭ್ರಾಂತಿಗೊಳಗಾದ ಶಿಷ್ಯರು ತಮ್ಮ ಕಿಂತಲೂ ಉತ್ತಮರಾದ ಹಿರಿಯರ ಹೇಳಿಕೆಯಲ್ಲಿ ನಂಬಿಕೆ = ವಿಶ್ವಾಸವಿಟ್ಟು, ತುಪ್ಪವೆಂದು ತಿಳಿದ ಅಜ್ಞಾನವನ್ನು ದೂರಗೈಸಿ ನಿಶ್ಚಯವಾಗಿ ಇದು ಅಮೃತವೆಂದೆಯೇ ತಿಳಿದು ಶ್ರೀ ಸರ್ವಜ್ಞಾಚಾರ್ಯರ ಮಹಿಮೆಯನ್ನು ಕೊಂಡಾಡಿದರು. ದೇವ ಲೋಕದ ಪುಷ್ಪದಲ್ಲಿಯ ಮಕರಂದವು ಸುಧೆಯ ರೂಪವಾಗಿ ಸ್ರವಿಸುವದು. ದೇವಗುರುಗಳಾದ ಶ್ರೀ ಸರ್ವಜ್ಞರ ಪೂಜೆಗೆ ದೇವತೆಗಳೇವೇ ಪ್ರತಿನಿತ್ಯದಲ್ಲಿ ದೇವಲೋಕದ ಹೂವುಗಳನ್ನು ಗೌಪ್ಯವಾಗಿ ತಂದು ಕೊಡುತ್ತಿದ್ದರೆಂಬ ಐತಿಹ್ಯವಾದ ಆರ್ಯರ ವಚನವು ನಿಜ. ಪ್ರತ್ಯಕ್ಷ ಸಿದ್ಧ.

ಶ್ಲೋಕ ॥ ಅಗಮುದುಚಿತಮಂತ್ರ್ಯೈಸ್ತೂದಯಾನಾಂ ತ್ರಯಾಣಾಂ ।
ಕೃತಿಭಿರನುಮತಾತ್ಮಾ ತತ್ರ್ಯಃಪಂಚಾಂಗವಿದ್ಭಿಃ ॥
ಉದಯಮಹಿಮರೋಚಿಶ್ಚಕ್ರವರ್ತೀ ತ್ರಿಶಕ್ತಿ- ।
ರ್ದಧದತಿ ಬೃಹದಂತಃ ಷಡ್ಗುಣಂ ಸ್ವಾತ್ಮತೇಜಃ ॥ ೧೪ ।

ವಾರ್ಧಿಕ ॥ ಅನಿತರೊಳು ಅಹಿಮರೋಚಿಯು ಚಕ್ರವರ್ತಿ ತಾಂ ॥
ಇನನುದಿಸಿದಂ ನುಚಿತ ಮಂತ್ರ ಪಂಚಾಂಗನ್ಯಾ ।
ಸೆನುವವೋ ರಾಜಾಂಗಗಳು ಐದೊ ಕರ್ಮ ಕುಶಲರು ತಿಳಿದ ತ್ರ್ಯೈವುದಯವೋ ॥
ಇನಿತು ಶಕುತಿತ್ರಯವೊ ತನ್ನೊಳಗೆ ಪರಿಪೂರ್ಣ ।
ಘನ ಷಡ್ಗುಣೈಶ್ವರ್ಯಸ್ವಾತ್ಮ ತೇಜಾತ್ಮ ಹರಿ ।
ಯನು ತನ್ನ ಅಂತರ್ಯ ಧಾರಕನು ಭಾನುವಭಿವರ್ಧಿಸಿದ ರಾಜನೋಲು ॥ ೧೪ ॥ ೬೬೮ ॥

ಭಾವಾರ್ಥ:—ಅಷ್ಟರಲ್ಲಿಯೇ ಸೂರ್ಯೋದಯವಾಯಿತು. ಈ ಸೂರ್ಯೋದಯ ವರ್ಣನೆಯನ್ನು (೪) ಶ್ಲೋಕಗಳಿಂದ ವರ್ಣಿಸುತ್ತಾರೆ.

ಅನಿತರೊಳ್ — ಆ ಕಾಲದಲ್ಲಿ ಅಷ್ಟರಲ್ಲಿಯೇ ಅಹಿಮರೋಚಿ ಚಕ್ರವರ್ತಿ — ಹಿಮ ಶೀತಲವಿಲ್ಲದೇ ಇದ್ದುದು ಉಷ್ಣ ರೋಚಿ =ಪ್ರಕಾಶೋ ಯಸ್ಯ ಸಃ, ಅಹಿಮರೋಚಿ ಉಷ್ಣವೂ ಪ್ರಕಾಶವೂ ಉಳ್ಳವನಾದ ಇವನು ಸೂರ್ಯನೆಂಬ ಚಕ್ರವರ್ತಿ ಉದಸಿದನು — ರಾಜರುಗಳಲ್ಲಿ ಶ್ರೇಷ್ಠನಾದ ಸಾರ್ವಭೌಮ ಮಹರಾಜನು, ಅತಿ ಐಶ್ವರ್ಯಾದಿಗಳ ಅಭ್ಯುದಯ = ಹೆಚ್ಚಿಗೆಯಿಂದ ವಿಜಯಮಹೋತ್ಸವದೊಡನೆ ಪ್ರಾಪ್ತನಾಗುವಂತೆ, ಸೂರ್ಯೋದಯವಾದಿತೆಂದು ಶ್ಲೇಷಾಲಂಕಾರದೊಡನೆ ಬಣ್ಣಿಸಿರುವರು. ಆ ಕಾಲದಲ್ಲಿ ಸೂರ್ಯನು ಉಚಿತ ಮಂತ್ರ್ಯೈಃ ಮೋಕ್ಷಾದಿ ಪುರುಷಾರ್ಥಕ್ಕೆ ಕಾರಣವಾದ, ಗಾಯತ್ರ್ಯಾದಿ ಯೋಗ್ಯ ಮಂತ್ರಗಳಿಂದ ಆ ಮಂತ್ರಂಗಳಿಗೆ ತಕ್ಕ ಪಂಚಾಂಗನ್ಯಾಸವು ಹೃದಯ, ಶಿರ, ಶಿಖಾ, ಕವಚ, ಅಸ್ತ್ರ ವೆಂಬುವನ್ನೈದು ಮತ್ರಾಂಗನ್ಯಾಸ ಯೋಗ್ಯವಾದ ಅಂಗಗಳುಳ್ಳ, ಕರ್ಮಕುಶಲರು=ಸ್ನಾನಸಂಧ್ಯಾ

ಜಪತಪಾದಿ ಅನುಷ್ಠಾನಕ್ರಿಯೆ ಶಾಸ್ತ್ರನಿಪುಣರಾದ ಬ್ರಾಹ್ಮಣಾದಿಜ್ಞಾನಿಗಳಿಂದ ತಿಳಿದ=ಸಮ್ಮತವಾದ, ತ್ರೈಉದಯವೋ=ಅರುಣೋದಯ, ಉಷಃಕಾಲೋದಯ ಸೂರ್ಯೋದಯ, ಹೀಗೆ ಮೂರು ಉದಯಗಳಿಗೆ ಸಮ್ಮತವಾದ ಸುಸ್ವರೂಪವುಳ್ಳವನು. ಇನಿತೇ = ಇಷ್ಟೇ ಮೂರು ಶಕ್ತಿ=ಸಾಮರ್ಥ್ಯಗಳು ಮೂರು, ಪದಾರ್ಥಪ್ರಕಾಶನಮಾಡೋಣ, ತಾಪನ= ಬಿಸಲಿನಿಂದ ತಾಪಕೊಡುವದು, ಉರಿಸುವದು ಸುಡುವದು; ಆಹಲ್ಲಾದನ=ಹರ್ಷಗೊಳಿಸುವದು ವಿಕಾಸಮಾಡುವದು, ಇಂಥ ಮೂರು ಶಕ್ತಿಗಳುಳ್ಳವನು ತನ್ನೊಳಗೆ=ತನ್ನ ಮಂಡಲ ಮಧ್ಯದಲ್ಲಿ ಅತಿ ಪೂರ್ಣನಾಗಿಯೂ ಘನ-ಶ್ರೇಷ್ಠವಾದ ಆರು ಐಶ್ವರ್ಯಗಳಿಂದ ಸಂಪೂರ್ಣನಾದವನು. "ಐಶ್ವರ್ಯಸ್ಯ ಸಮಗ್ರಸ್ಯ, ವೀರ್ಯಸ್ಯ ಯಶಸಃ ಶ್ರಿಯಃ ಜ್ಞಾನ ವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಿತಃ" ಇವೇ ಆರು ಐಶ್ವರ್ಯಗಳು, ಸ್ವಾತ್ಮ= ಸ್ವಸ್ಯ ಆತ್ಮ ತನಗೆ ಒಡೆಯ ಮತ್ತು ತನ್ನೊಳಗಿರುವ ತೇಜೋಮಯನಾದ ಶ್ರೀ ವಿಷ್ಣುವಿನನ್ನು ಧರಿಸಿದವನಾದ, ಸೂರ್ಯನೆಂಬ ಚಕ್ರವರ್ತಿಯು ಉದಯಿಸಿದನು.

ಚಕ್ರವರ್ತಿ–ಸಾರ್ವಭೌಮ ರಾಜನಾದರೂ, ತನ್ನ ಅಭ್ಯುದಯಕ್ಕೆ ಕಾರಣವಾದ ಉಚಿತ ಮಂತ್ರೈಃ = ಗೌಪ್ಯ ವ್ಯವಹಾರವಾದ ರಾಜ್ಯಾಂಗ ಗುಪ್ತಾಲೋಚನೆಗಳಿಂದ, ರಾಜ್ಯಾಂಗಗಳು ಐದು- ಕರ್ಮಾರಂಭಕ್ಕೆ ಯೋಗ್ಯ ಉಪಾಯ, ಪುರುಷ – ದ್ರವ್ಯ ಸಂಪತ್ತು, ವಿನಿಪಾತ ಪ್ರತಿಕಾರ-ಹಗೆತನವನ್ನು ತೊರೆದು ತನ್ನೊಳಗಾದ ಸಮಾಸೀಕ ರಾಜರಲ್ಲಿ ಸಮಾನತ್ವ ಭಾವಿಸೋಣ, ದೇಶಕಾಲಾವಲೋಕನ ಕಾರ್ಯಸಿದ್ಧಿ; ಈ ಐದು ಅಂಗಗಳನ್ನು ತಿಳಿದು ರಾಜ್ಯಕಾರ್ಯಲೋಚನೆಯುಳ್ಳ ಮಂತ್ರಿಗಳಿಂದಲೂ ಮತ್ತು ಮಂತ್ರ, ಭೂ, ಕೋಶ, ಈ ಮೂರು ಉದಯಗಳಿಗೆ ಸಮ್ಮತನಾದವನು; ಉತ್ಸಾಹ ಶಕ್ತಿ, ಮಂತ್ರಶಕ್ತಿ, ಪ್ರಭುತ್ವಶಕ್ತಿ ಈ ಮೂರು ಶಕ್ತಿಗಳುಳ್ಳವನು, ತನ್ನೊಳಗೆ ಪರಿಪೂರ್ಣ= ಏಕಚಕ್ರವರ್ತಿ ಸಾರ್ವಭೌಮತ್ವ ರಾಜ್ಯವೆನಿಸುವ, ತನ್ನ ಅಧಿಪತ್ಯವಾದ ರಾಜ್ಯದಲ್ಲಿ ಪೂರ್ಣನಾದವನು: (ತನ್ನ ಸಮಾನ ಮತ್ತೊಬ್ಬರಿಲ್ಲೆನಿಸುವನು) ಘನ ಷಡ್ಗುಣೈಶ್ವರ್ಯ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯಗಳೆಂಬ ಆರು ಐಶ್ವರ್ಯವುಳ್ಳವನಾಗಿಯೂ, ಸ್ವಾತ್ಮ ತೇಜಃ= ತನ್ನ ಸ್ವರೂಪಭೂತ ಸ್ವ ಸಾಮರ್ಥ್ಯವನ್ನು ತನ್ನೊಳಗೆ ಧರಿಸಿಕೊಂಡು, ಅಭಿವೃದ್ಧಿ ಹೊಂದಿದವನು. ಇಂಥ ಚಕ್ರವರ್ತಿಯೋಪಾದಿಯಲಿ ಸೂರ್ಯದೇವನುದಯಿಸಿದನು.

೧. ಸಂಧಿ- ಹಣಕೊಟ್ಟು ಶತ್ರುವನ್ನು ಮಿತ್ರನನ್ನಾಗಿ ಮಾಡಿಕೊಳ್ಳೋಣ.

೨. ವಿಗ್ರಹ- ಶತ್ರುಗಳಲ್ಲಿಯ ಪದಾರ್ಥ ಲೂಟಿ ಮಾಡೋಣ, ಅಥವಾ ಅವರ ದೇಶಕ್ಕೆ, ಶಿಬಿರಕ್ಕೆ ಬೆಂಕಿ ಹಚ್ಚೋಣ

೩. ಯಾನ- ವೈರಿಯನ್ನು ಗೆಲ್ಲುವ ಇಚ್ಛೆಯಿಂದ ಹೊರಡೋಣ.

೪. ಆಸನ- ವೈರಿಗಳಿಗೆ ಗುರಿ ಇಟ್ಟು ಬಾಣಗಳಿಂದ ಎಚೆಯೋಣ, ಕೊಲ್ಲೋಣ, ಕಾಳಗ ಮಾಡೋಣ.

೫. ದ್ವೈಧ- ಬಲವಂತರಗೂಡ ಒಂದುಗೂಡೋಣ. ಬಲಹೀನರ ಕೂಡ ಕಾಳಗಮಾಡೋಣ.

೬. ಆಶ್ರಯ- ವೈರಿಯಿಂದ ಕಷ್ಟಬಟ್ಟವನಿಗೆ, ಬಲಿಷ್ಠ ಅರಸನಿಂದ ಆಗುವ ಆಶ್ರಯ.

**ಶ್ಲೋಕ ||** ತಿಮಿರನಿಕರಕುಂಭಿವ್ರಾತಮತ್ಯಂತತೀವ್ರಂ ।
ಸ್ಥಿರತರಮಖಿಲಾನಾಂ ಪ್ರಾಣಿನಾಂ ರುದ್ಧಮಾರ್ಗಮ್ ॥
ಭುವನಭವನಪೂರ್ಣಂ ಭಾನುಮಾನಂ ಜನಾಭಂ ।
ಹರಿರಿವ ನಖರೈಃ ಪ್ರಾಗ್ರಶ್ಮಿ ಜಾಲೈರ್ನಿರಾಸ ॥ ೧೫ ॥

ವಾರ್ಧಿಕ || ಭಾನುಮಾನ್ ಅತ್ಯಂತ ಸಹಿಸಲು ಅಸಾಧ್ಯಾದ |
ತಾಣ ಸುಸ್ಥಿರ ಸಕಲ ಪ್ರಾಣಿಗಳ ಮಾರ್ಗವನು |
ತಾನೆ ತಡೆದತಿ ಲೋಕದಲಿ ತೀವಿಕೊಂಡಿರ್ಪ ಕಾಳ್ಗತ್ತಲೆಯ
ಗಡಣವಂ ||

ತ್ರಾಣಸಿಂಹವು ತನ್ನ ತೀಕ್ಷ್ಣ ಸುಸ್ಥಿರ ನಖದಿ |
ಠಾನೆ ಮಾರ್ಗವ ತಡೆದ ಕರಿಗಡಣ ಗಂಡಸ್ಥಳ |
ಮೇಣು ಕೀಳ್ವಂತೆ ಕಿರಣಗಳಿಂದ ತಾನುದಿಪ ಮೊದಲಿಗಂ
ಪರಿಹರಿಸಿದಂ || ೧೫ || ೭೬೯ ||

ಭಾವಾರ್ಥ:— ಸೂರ್ಯದೇವನು ತಾನು ಉದಯಿಸುವ ಮೊದಲಿಗೇವೇ ತನ್ನ ಕಿರಣಗಳ ಪ್ರಕಾಶದಿಂದ ಕತ್ತಲೆಯನ್ನು ಪರಿಹರಿಸಿದ್ದನ್ನು, ಈ ಶ್ಲೋಕದಿಂದ ವರ್ಣಿಸಿರುತ್ತಾರೆ:- ಭಾನುಮಾನ್= ಭಾನವಃ ಕಿರಣಾಃ ಅಸ್ಯ ಸಂತೀತಿ ಭಾನುಮಾನ್, ಕಿರಣಗಳುಳ್ಳ ಸೂರ್ಯನು, ಅತ್ಯಂತ= ಬಹಳವಾಗಿ, ಸಹಿಸಲಿಕ್ಕೆ ಅಶಕ್ಯವಾದ ಸ್ಥಿರವಾದದ್ದು, ಸೂರ್ಯಪ್ರಕಾಶ ಹೊರ್ತಾಗಿ ಅನ್ಯರಿಂದ ನಿವಾರಿಸಲು ಸಾಧ್ಯವಿಲ್ಲದ್ದು, ತಾಣ= ಎಲ್ಲ ಸ್ಥಳಗಳಲ್ಲಿ ವ್ಯಾಪಿಸಿದ್ದು, ಸಮಸ್ತ ಪ್ರಾಣಿಗಳಿಗೆ ಮುಂದೆ ಹೋಗಲು ಮಾರ್ಗ ತೋರದೆ ತಡೆದು, ಭುವನ= ಲೋಕದಲ್ಲಿ ಅತಿ ದಟ್ಟವಾಗಿ, ತೀವಿಕೊಂಡಿರ್ಪ= ತುಂಬಿಕೊಂಡಿರುವ ವ್ಯಾಪಿಸಿರುವ, ಅಂಜನಾಭ - ಅಂಜನ ಪರ್ವತದಂತೆ ನೀಲವರ್ಣ ವಿಶಿಷ್ಟವಾದ, ಕಾಳ್ಗತ್ತಲೆಯ ಗಡಣವಂ= ಅತಿ ಕಪ್ಪಾದ ಕತ್ತಲೆಯ ಸಮೂಹವನ್ನು ತ್ರಾಣ= ಬಲಿಷ್ಠವಾದ ಸಿಂಹವು ತನ್ನ ತೀಕ್ಷ್ಣ= ಚೂಪಾದ ಮತ್ತು ಸುಸ್ಥಿರ= ಅತಿ ಗಟ್ಟಿಯಾದ ಬಲವುಳ್ಳ ಉಗುರುಗಳಿಂದ, ಠಾನೆ= ಬಹಳವಾಗಿ, ದಟ್ಟವಾಗಿ ಮುಂದೆ ಹಾದಿ ಕೊಡದೇ ಮಾರ್ಗವನ್ನು ತಡೆದು ನಿಂತ ಕಪ್ಪಾಗಿರುವ ಆನೆಗಳ ಸಮೂಹಗಳ ಗಂಡಸ್ಥಳವನ್ನು ಶೀಳಿ ನಿರಾಕರಿಸುವಂತೆಯೇ, (ಸೂರ್ಯನು ಕಿರಣಗಳ ಸಮೂಹಗಳಿಂದ) ತಾನು ಲೋಕದಲ್ಲಿ ವ್ಯಾಪಿಸುವ ಮೊದಲಿಗೇವೆ ದಟ್ಟವಾಗಿ ವ್ಯಾಪಿಸಿದ ಕತ್ತಲೆಯನ್ನು ಪರಿಹರಿಸಿದನು.

**ಶ್ಲೋಕ || ಮಧುರಪತಗರಾವಾಃ ಶಾಂತನೈಶಾಂಬುಬಾಷ್ಪಾಃ |**
**ಸಪದಿ ವಿಪುಲರಾಗಾಃ ಸ್ವಾಭಿಸಾರಾತ್ಪ್ರಸನ್ನಾಃ ||**
**ಅರುಣತರಣಿರತ್ಯಚ್ಛಾಂಬರಾ ದಿಕ್ಸುರಂಧ್ರೀಃ |**
**ಸ್ಮಿತಸರಸಿಜವಕ್ತ್ರಾಃ ಸ್ವೈಃ ಕರೈರಾಲಿಲಿಂಗೇ || ೧೬ ||**

ವಾರ್ಧಿಕ || ಬಾಲ ಸೂರ್ಯನು ಕಿವಿಗೆ ಇಂಪಾದ ಪಕ್ಷಿಗಳ |
ಶೀಲರವ ಶಾಂತ ನಿಶದಂಬು ಬಾಷ್ಪದ ಸಪದಿ |
ಮೇಲರುಣ ವರ್ಣ ತಾ ಮುದಿಸೆ ಅತಿ ನಿರ್ಮಲಾಂಬರವು
ಅರಳಿದ ಕಮಲ ಎ ||

ವೇಳ್ವೆ ದಿಕ್ಕುಗಳೆಂಬ ತರುಣಿಯರನಾ ತನ್ನ |
ಜಾಲಕಿರಣಗಳೆಂಬ ಕರಗಳಿಂದಪ್ಪುತ್ತ |
ಕಾಲಕರ್ತನು ವ್ಯಾಪಿಸಿದನು ತರುಣೋರ್ವ - ವಿರಹಿತ - ತರುಣಿ
ಯಿಂದಪ್ಪಿದೋಲು || ೧೬ || ೭೭೦ ||

**ಭಾವಾರ್ಥ:—** ಅರುಣವರಣ-ಕೆಂಪುವರ್ಣದಿಂದ ಶೋಭಿಸುವ ಬಾಲತರಣಿ, ಸದ್ಯ ಉದಯಿಸಿದ ಸೂರ್ಯನು, ಕಿವಿಗೆ ಕೇಳಲು, ಇಂಪಾದ - ಸವಿಯಾದ ಮುಂಜುಳವಾದ, ಕೋಕಿಲಾದಿ ಪಕ್ಷಿಗಳ ಶೀಲರವ-ನೈಜ ಸ್ವಾಭಾವಿಕ ಶಬ್ದಗಳುಳ್ಳ, ಮತ್ತು ಶಾಂತನಿಶದಂಬು ಬಾಷ್ಪ-ರಾತ್ರಿಕಾಲದಲ್ಲಿ ಎಳೆ ಹುಲ್ಲುಗಳ ಮೇಲೆಯೂ, ಗಿಡಗಳ ಮೇಲೆಯೂ, ಎಲ್ಲ ಪ್ರದೇಶಗಳಲ್ಲಿ ಬಿದ್ದ ಮಂಜುನೀರ ಹನಿಗಳ ತಟಕು, ಶಾಂತ= ಸೂರ್ಯೋದಯುವಾದ ಕೂಡಲೆ ತಂಗಾಳಿಯಿಂದಲೂ ಸೂರ್ಯ ಕಿರಣಗಳ ಸಂಪರ್ಕದಿಂದಲೂ, ಮಂಜು ಹಾರಿ ಹೋಗುವದು ಸರ್ವಾನುಭವ ಪ್ರಸಿದ್ಧವಷ್ಟೆ? ಹೀಗೆ ರಾತ್ರಿಕಾಲದಲ್ಲಿ ಬಿದ್ದ ಮಂಜು ಹನಿಗಳು ಸೂರ್ಯೋದಯಕ್ಕೆ ಇಲ್ಲದಂತಾಗುವಿಕೆ ಮತ್ತು ಸಪದಿ - ತಕ್ಷಣ ಉದಯಿಸುವ ಸೂರ್ಯ ಸಂಪರ್ಕ ಸಮಯ ಅತಿ ಹೆಚ್ಚಾದ ಅರುಣ= ಕೆಂಪು ವರ್ಣವುಳ್ಳ ತಾನು ಉದಯಿಸುವ ಕಾಲದಲ್ಲಿ ಹಿಮ ತುಷಾರಗಳು ಶಾಂತವಾಗಿ ಅತಿ ನಿರ್ಮಲ ಸ್ವಚ್ಛವಾದ ಆಕಾಶವುಳ್ಳ ಮತ್ತು ರಾತ್ರಿಯಲ್ಲಿ ಮುಚ್ಚಿಕೊಂಡ ಅರಳಿದ ತಾವರೆ= ಕಮಲಗಳುಳ್ಳ, ಆಹೋ ಏನು ಹೇಳಲಿ, ಒಬ್ಬ ವಿರಹಿತ ತರುಣಿಯನ್ನು ಯುವಕನೋರ್ವನು ತನ್ನ ಕರಗಳಿಂದ ಅಪ್ಪುವಂತೆ ಕಾಲಕರ್ತ ಸೂರ್ಯನು= ದಿಕ್ಕುಗಳೆಂಬ ಪುರಂಧ್ರೀ = ಸ್ತ್ರೀಯನ್ನು ತನ್ನ ಕಿರಣ ಸಮೂಹವೆಂಬ ಕರಗಳಿಂದ ಅಪ್ಪುತ್ತಾ ಜಗತ್ತಿನಲ್ಲಿ ವ್ಯಾಪಿಸಿದನು.

ಹೇಗೆಂದರೆ, ಒಬ್ಬ ತರುಣ ಯುವಕನು, ಮಧುರ ಸುಸ್ವರವಾದ ಗಿಳಿಯಂತೆ ಸವಿ ಮಾತುಳ್ಳ, ತನ್ನ ಅಗಲುವಿಕೆಯ, ವಿರಹ ತಾಪದಿಂದ, ಪುಟ್ಟಿದ ಶಾಂತ ನಿಶದಂಬು ಬಾಷ್ಪ– ತನ್ನ ಪ್ರಿಯತಮನಾದ ತರುಣನನ್ನು ನೋಡಿದ ಕೂಡಲೆ, ನೇತ್ರಾಂಬು = ಕಣ್ಣೀರನ್ನೊರಸಿಕೊಂಡ, ಮತ್ತು ಪ್ರಿಯನನ್ನು ನೋಡಿದ ಕೂಡಲೇ ಅತಿ ಅನುರಾಗಿ = ಪ್ರೀತಿಯುಳ್ಳವಳಾಗಿ, ತಾ ಮುದಿಸೆ = ಆ ತರುಣನು ತಾನು ಬಂದುದರಿಂದ ಶಾಂತ ಕೋಪಳಾದ ಅತ್ಯಂತವಾಗಿ ನಿರ್ಮಲಾಂಬರ–ಸ್ವಚ್ಛವಾದ ಬಿಳಿಯ ವಸ್ತ್ರವನ್ನುಟ್ಟು ಮುಗುಳುನಗೆಯೆಂಬ, ಮಂದಹಾಸದಿಂದ ಯುಕ್ತ, ಕಮಲ ಮುಖಿಯುಳಾದ ತರುಣಿ-ಸ್ತ್ರೀಯನ್ನು, ತನ್ನ ತೋಳುಗಳಿಂದ ಅಪ್ಪುವಂತೆ, ಸೂರ್ಯನು ದಿಕ್ಕು ಎಂಬುವ ಸ್ತ್ರೀಯನ್ನು ಅಪ್ಪಿಕೊಂಡು, ಎಲ್ಲ ದಿಕ್ಕುಗಳನ್ನು ಬೆಳಗಿದನೆಂದು ಫಲಿತಾರ್ಥ,

**ಶ್ಲೋಕ ||** ಪ್ರಣತಿ ರಭಸಧೂಲೀ ಬದ್ಧಶೋಭಾ ವಿಶೇಷಾ |
ದಧರುಪಕೃತಿ ಮತ್ರಾಂ ಸಾಧು ಜಾಲಾಂತರಾಪ್ತಾಃ ||
ಸಮಯ ಮುಪನತಂ ಸಂವೇದಯಂತೋವಯಸ್ಯಾ |
ಇವದಶಶತ ಕೇತೋಕೇತವಃ ಶ್ರಾವಕಾಣಾಮ್ || ೧೭ ||

ತಾರ್ಥಿಕ || ದಶಶತಂ ಕೇತವಃ ರವಿಯ ಸಾವಿರ ಕಿರಣ |
ವಸಮ ಭಕುತರು ನಮಿಪ ರಭಸಧೂಳಿಂ ಕಂಗೊ |
ಳಿಸುತಲ್ಲಿ ಸಾಧು ಜಾಲಾಂತರದಿ ಒಳಬರುತ ಶಾಸ್ತ್ರಶ್ರವಣ
ಕಾಲ ಪ್ರಾಪ್ತವೆಂದು ||

ಕುಶಲ ವಿದ್ಯಾರ್ಥಿಗಳು ಅರುಣೋದಯದಿ ಸ್ನಾನ ।
ವೆಸಗಿ ಜಪಿಸುತ ಒಳಗೆ ಕುಳ್ಳಿರ್ದ ಮಿತ್ರರಿಗೆ |
ಉಸಿರಲುಂ ಗೆಳೆಯರಂದದಿ ಪಾಠ ಕೇಳ್ವರಿಗೆ ಉಪಕಾರವಂ
ಮಾಡ್ದವೊ || ೧೭ || ೭೭೧ ||

**ಭಾವಾರ್ಥ:—** ಸ್ನಾನಮಾಡಿ ಜಪಿಸುತ್ತ ಒಳಗೆ ಕುಳಿತ, ಪಾಠ ಕೇಳತಕ್ಕ ವಿದ್ಯಾರ್ಥಿಗಳಿಗೆ ಸೂರ್ಯ ಕಿರಣಗಳು ಗೆಳೆಯರಂತೆ ಉಪಕಾರ ಮಾಡಿದವೆಂದು ವರ್ಣಿಸುತ್ತಾರೆ.

ದಶ ಶತಂ = ಸಾವಿರ, ಕೇತವಃ = ಕಿರಣಗಳು, ಅಂದರೆ ಸೂರ್ಯನ ಸಾವಿರ ಕಿರಣಗಳು ಅಸಮ = ಸಮರಾಗದೇ ಇದ್ದ ಉತ್ತಮರಾದ ಭಕ್ತರು, ರಭಸ = ವೇಗ ಮತ್ತು ಸಂತೋಷದಿಂದ ಸೂರ್ಯ ನಮಸ್ಕಾರ ಮಾಡುವ ಭರದಿಂದ ಹೊರಟ ಧೂಳಿಗಳು, ಸೂರ್ಯ ಕಿರಣದಿಂದ ಕೂಡಿಕೊಂಡು, ಶೋಭಾ ವಿಶೇಷದಿಂದ ತೋರುತ್ತ ಸಾಧುಜಾಲಾಂತರದಿ = ಕಿಡಕಿಗಳು ಅಥವಾ ಗವಾಕ್ಷಿ ಬೆಳಕಿಂಡಿಯಿಂದ, ಮನೆಯೊಳಗೆ ಬೀಳುತ್ತ, ಕುಶಲ = ಜಾಣರಾದ ಮತ್ತು ಜಾಗ್ರತೆಯುಳ್ಳ ವಿದ್ಯಾರ್ಥಿಗಳು, ಅರುಣೋದಯಕಾಲದಲ್ಲಿ ಸ್ನಾನ ಮಾಡಿ, ಜಪ ಮಾಡುತ್ತ ಕುಳಿತವರಿಗೆ, ಶಾಸ್ತ್ರ ಶ್ರವಣ = ಪಾಠ ಕೇಳುವ ಕಾಲ ಬಂದಿತೆಂದು; ಗೆಳೆಯರು ಪಾಠಕ್ಕೆ ಕರೆದಂತೆ, (ಅವರ ಮೇಲೆ ಬಿದ್ದು) ಉಪಕಾರ ಮಾಡಿದವು.

ಗೆಳೆಯರಾದರೂ ನಮಸ್ಕಾರ ಮಾಡುವ ಭರದಿಂದ ಮೈಗೆ ತಗಲಿದ ಧೂಳಿಗಳಿಂದ ಬಹು ಶೋಭಿತರಾಗಿ ತೋರುತ್ತ ಸಾಧುಜಾಲಾಂತರದಿ = ಸಜ್ಜನ ಸಮೂಹ ಮಧ್ಯದಲ್ಲಿದ್ದು ಇತರ ಗೆಳೆಯರಿಗೆ ಪಾಠಕ್ಕೆ ಬನ್ನಿರೆಂದು ಕರೆದು ಸೂಚಿಸುವಂತೆ, ಸೂರ್ಯ ರಶ್ಮಿಗಳು ಒಳಗೆ ಬಂದು ಜಪಿಸುತ್ತ ಕುಳಿತ ವಿದ್ಯಾರ್ಥಿಗಳಿಗೆ ಪಾಠಕಾಲ ಬಂದಿದೆ ಏಳಿರಿ, ಪಾಠಕ್ಕೆ ನಡೆಯಿರೆಂತೆಂದು ಗೆಳೆಯರಂತೆ ಸೂಚಿಸಿದವು.

**ಶ್ಲೋಕ ॥ ನಿಹಿತಮುಚಿತಮುಚ್ಚಂ ಯೋಗಪೀಠಂ ಪ್ರವಕ್ತುಃ ।**
**ಪರಿಷದಿ ಪರಿತೋಽಮೀ ಸತ್ವರಾಃ ಸತ್ವಭಾಜಃ ॥**
**ದ್ರುತಮವಸಿತಕೃತ್ಯೈರ್ಧನ್ಯಸನ್ಯಾಸಿವರ್ಗೈಃ (ಸಂಘೈಃ) ।**
**ಶ್ರವಣಪರಮಕೃತ್ಯಾಯೋಪತಸ್ಥುಃ ಸಮೇತಾಃ ॥ ೧೮ ॥**

ವಾರ್ಧಿಕ॥ ತ್ವರಿತದಿಂ ಕೂಡಿರ್ದ ಸಾತ್ವೀಕರೀಶಿಷ್ಯ |
ಭರದಿ ತಾಂ ಸ್ನಾನ ಜಪ ತರ್ಪಣಾದಿ ವಿಹಿತಾ |
ಚರಣೆ ಮುಗಿಸುತ ಧನ್ಯ ಸನ್ಯಾಸಿ ಸಂಘದಿಂ ಕೂಡಿದವರಾಗಿ ಪಾಠ॥

ಪರಿಷದಿಯು ಸಭೆಯ ಮಂಟಪದೊಳಗೆ ಯಿಟ್ಟಿರ್ದ |
ವರ ಯೋಗ್ಯ ಉನ್ನತಂ ತತ್ವೋಪದೇಶ ಗುರು |
ಸಿರಿ ಮಧ್ವರ್ಯೋಗಪೀಠದ ಸುತ್ತ ಶಾಸ್ತ್ರಶ್ರವಣ ವರಕೃತ್ಯಕೇ
ಕುಳಿತರು || ೧೮ || ೭೭೨ ||

ಭಾವಾರ್ಥ:—ಶ್ರೀ ಮಧ್ವ ಶಿಷ್ಯರೆಲ್ಲರೂ ಒಂದೆಡೆಗೆ ಸೇರಿ ಪಾಠ ಕೇಳಲು ಸಿದ್ಧರಾಗುವಿಕೆ.

ಪಾಠಸಮಯ ಬಂತೆಂಬ ತ್ವರದಿಂದ ಒಂದೆಡೆಗೆ ಕೂಡಿದ ಪಾಠ ಕೇಳತಕ್ಕ ಸತ್ವ ಗುಣ ವಿಶಿಷ್ಠರಾದ ಈ ಸಾತ್ವಿಕ ಶಿಷ್ಯರೆಲ್ಲರು, ಬೇಗನೆ ತಾವು ಸ್ನಾನ ಜಪ ತರ್ಪಣಾದಿ ಪ್ರಾತಃಕಾಲ ಯೋಗ್ಯವಾದ, ವಿಹಿತ ಕರ್ಮಾಚರಣೆ ಮುಗಿಸಿ, ಧನ್ಯ= ಶ್ರೇಷ್ಠರಾದ ಸನ್ಯಾಸಿಗಳ ಸಮೂಹದಿಂದ ಕೂಡಿಕೊಂಡು, ಪಾಠ ಪರಿಷದಿ=ಪಾಠ ಹೇಳತಕ್ಕ ಸಭೆಯ ಮಂಟಪದ ನಡುವೆ ಇಟ್ಟ ಶ್ರೇಷ್ಠವಾದುದು, ಯೋಗ್ಯವಾಗಿ ಎತ್ತರವಾದುದು, ಪರತತ್ವ ಬೋಧಕ ಗುರುಗಳಾದ ಶ್ರೀ ಮಧ್ವಾಚಾರ್ಯರ ಯೋಗಾಸನವಾದ, ಆ ಪೀಠದ ಸುತ್ತಲೂ ಶಾಸ್ತ್ರ ಶ್ರವಣವೆಂಬುವ ಉತ್ತಮ ಕಾರ್ಯಕ್ಕೆ ಕುಳಿತರು.

**ಶ್ಲೋಕ || ಬಭುರಮಲಗುಣಾನಾಂ ಶೋಭನಾಚ್ಛಾದನಾನಾಂ |**
**ಮುರರಿಪುನಿಲಯಾನಾಂ ಹಂತ ವೈ (ವೇ) ದಾಂತಕೀ (ಕಾ) ನಾಮ್ ||**
**ಸಪದಿ ಸುವಿವೃತಾನಾ ಮಂತರಾರ್ಥಾಧಿಯಾಂ ವಾ |**
**ವಿವಿಧಕವಲಿಕಾನಾಂ ಸಂಚಯಾಃ ಪತ್ರಿಕಾಣಾಮ್ || ೧೯ ||**

ವಾರ್ದಿಕ || ಕ್ರಮ ವಿವಿಧ ಕವಲಿಕದಿ ಇಟ್ಟ ತಾಲದ ವೋಲೆ |
ಅಮಿತ ಸಂಪುಟ ಶೋಭಿಸಿದವು ಪರಮಾತ್ಮನಂ |
ತಮಲ-ಗುಣ ಬಂಧವಾಚ್ಛಾದ ಸುಂದರ ವಸ್ತ್ರ ಶ್ರೀ ಕೃಷ್ಣ ನಿಲಯಾಶ್ರಯಂ ||
ವಿಮಲ ವೇದಾಂತಕ್ಕೆ ಬರೆದವಂ ಗ್ರಂಥಗಳು |
ಪ್ರಮತಿ ಪಾಠವ ಕೇಳ್ವಸಮಯದಲಿ ಸುವಿವೃತಂ |
ದಮಿತ ಅಂತಃಕರಣ ಬುದ್ಧಿಂಗೆ ಅರ್ಥವ ಬೋಧಕ ಗುರುಪದಿಷ್ಟದಿ || ೧೯ || ೭೭೪ ||

ಭಾವಾರ್ಥ:— ಪಾಠ ಮಂಟಪದಲ್ಲಿಟ್ಟ, ಪುಸ್ತಕಗಳು ಶ್ರೀ ಪರಮಾತ್ಮನಂತೆ ಶೋಭಿಸುತ್ತಿರುವವೆಂದು (೨) ಶ್ಲೋಕದಿಂದ ವರ್ಣಿಸುತ್ತಾರೆ. ಕ್ರಮ= ಸಾಲಾಗಿ, ವಿವಿಧ= ನಾನಾತರದ, ಕವಲಿಕಾ= ದರ್ಭೆ, ಹುಲ್ಲು, ಕಟ್ಟಿಗೆ, ತಾಮ್ರ, ಬೆಳ್ಳಿ ಮುಂತಾದವು ಪುಸ್ತಕಗಳನ್ನು ಇಡಲಿಕ್ಕೆ ಮಾಡಿದ, ವ್ಯಾಸ ಪೀಠಗಳಲ್ಲಿಟ್ಟ, ತಾಳದ ವಾಲಿಗಳಿಂದ ಕೂಡಿದ ಸಂಪುಟ, = ಸಂಚಿಕಾರೂಪವಾದ ಪುಸ್ತಕಗಳು. ಪರಮಾತ್ಮನಾದ ಶ್ರೀ ಹರಿಯಂತೆ ಶೋಭಿಸಿದವು. ಅದು ಹೇಗೆಂದರೆ ಅಮಲಗುಣಬಂಧ= ನಿರ್ಮಲವಾಗಿ ಬೆಳ್ಳಗಿದ್ದ ಗುಣ = ಕಟ್ಟುವ ಹಗ್ಗ (ಸೂತ್ರ) ವುಳ್ಳ, ಮತ್ತು ಸುಂದರವಾದ ರೇಶಿಮೇ ವಸ್ತ್ರಗಳಿಂದ, (ಸಂವೇಷ್ಟಿತವಾದವು) ಸುತ್ತಿದವು, ಮುರನಾಮಕ ದೈತ್ಯನಿಗೆ ವೈರಿಯಾದ ಶ್ರೀಕೃಷ್ಣ ಪರಮಾತ್ಮನಿಗೆ ಆವಾಸ= ಇರಲಿಕ್ಕೆ ಯೋಗ್ಯವಾದವು. ಆ ಪುಸ್ತಕಗಳಲ್ಲಿ ಶ್ರೀ ಭಗವಂತನ ಮಹಿಮೆ ಪ್ರತಿಪಾದಿಸುತ್ತಿದ್ದ ಕಾರಣಾ, ಶ್ರೀ ಹರಿಯ ಸನ್ನಿಧಾನವು ಹೆಚ್ಚಾಗಿರುವದಾಗಿಯೂ, ವಿಮಲ = ನಿರ್ದುಷ್ಟ

ವಾದ, ವೇದಾಂತಕ್ಕೆ = ವೇದಾಂತ ಶಾಸ್ತ್ರಕ್ಕೆ ಸಮ್ಮಂದಪಟ್ಟ, ವೇದಾಂತ ಶಾಸ್ತ್ರಗಳನ್ನೇ ಬರೆದವು. ಪ್ರಮಿತಿ = ಯಥಾರ್ಥ ಜ್ಞಾನವನ್ನು ಬೋಧಿಸುವವು. ಸಪದಿ = ಪಾಠ ಕೇಳುವ ಕಾಲದಲ್ಲಿ, ಸುವಿವೃತಂ = ಮೇಲೆ ಕಟ್ಟಿದ ಸೂತ್ರ ವಸ್ತ್ರಗಳನ್ನು ಬಿಚ್ಚಿ ಕಾಣುವಂತೆ ತೆರೆಯಲ್ಪಟ್ಟವಾಗಿಯೂ, ಗುರುಗಳ ಉಪದೇಶದಿಂದ, ಅಮಿತ = ಹೆಚ್ಚಿಗೆ = ಬುದ್ಧಿಗೆ ಅರ್ಥವಾಗತಕ್ಕವಾಗಿ ಭಗವತ್ ಸ್ವರೂಪವನ್ನು ಚನ್ನಾಗಿ ತಿಳಿಸತಕ್ಕವಾಗಿರುವವು.

ಭಗವತ್ ಸ್ವರೂಪವನ್ನು ತಿಳಿಯುವ ಬುದ್ಧಿಗಳಾದರೂ ಹೇಗಿದ್ದವೆಂದರೆ, ನಿರ್ದೋಷ ಗುಣ= ನಿರ್ಮಲಜ್ಞಾನ ಭಕ್ತ್ಯಾದಿ ಗುಣವುಳ್ಳವು. ಶೋಭನಾಚ್ಛಾದನಾನಾಂ,= ಸುಂದರ ಆಚ್ಛಾದನ ವಸ್ತ್ರವುಳ್ಳವೆಂದರೆ, ಭಗವತ್‌ಸ್ವರೂಪವನ್ನು ಅಯೋಗ್ಯರಿಗೆ ತಿಳಿಸದ ಹಾಗೆ, ಅತಿ ಗೌಪ್ಯವಾಗಿರಿಸಿಕೊಂಡವು, ಮುರರಿಪುವಾದ ಶ್ರೀಕೃಷ್ಣ ಭಗವಾನನ್ನು ಧ್ಯಾನ ರೂಪದಿಂದ ಧರಿಸಿಕೊಂಡವು, ವೇದಾಂತ ಶಾಸ್ತ್ರ ವಿಚಾರದಲ್ಲಿ ನಿರತವಾದವು, ಗುರುಗಳ ಉಪದೇಶ ಮಾತ್ರದಲ್ಲಿ ಸುವಿವೃತಂ = ಸಮ್ಯಕ್, ನಿಃಸ್ತ್ರಾವೃತಂ ಆವರಣಂ= ಅಜ್ಞಾನವನ್ನು ಬಿಟ್ಟವು; ಪ್ರಮಿತಿ=ಯಥಾರ್ಥ ಜ್ಞಾನವುಳ್ಳವಾಗಿದ್ದವು.

ಇಂತಹ ಅಂತಃಕರಣಗಳಲ್ಲಿರುವ ಬುದ್ಧಿಗಳಿಗೆ ವಿಷಯವಾಗಿ ಗೋಚರಿಸತಕ್ಕ ಭಗವತ್ ಸ್ವರೂಪಗಳಂತೆ ಪತ್ರಗಳಿದ್ದವೆಂದು ಹೇಳಿದಂತಾಯಿತು.

ಅಂತು ಭಗವತ್ ತತ್ವಗಳನ್ನು ನೈಜವಾದ ಜ್ಞಾನ ಭಕ್ತ್ಯಾದಿಗಳುಳ್ಳವರಿಗೆ ಉಪದೇಶ ಮಾಡಬೇಕೆ ಹೊರ್ತಾಗಿ ಅಯೋಗ್ಯರಿಗೆ ಸರ್ವಥಾ ಉಪದೇಶ ಮಾಡಬಾರದೆಂದು ಐತರೇಯ ಪ್ರಮೇಯವನ್ನೆ ಉದಹರಿಸಿರುವರು.

ಶ್ಲೋಕ ॥ ಅನತಿವಿರಲಭಾವಾ ಅಪ್ಯನನ್ಯೋನ್ಯಸಂಗಾ ।
ಋಜುತರ ತತನಾನಾ ಪಂಕ್ತಿ ಸಾಮ್ಯಾಪ್ತಶೋಭಾಃ ॥
ದ್ವಿರದ ತುರಗದೇಶ್ಯಾ ದೂರತೋ ವರ್ಜಿತಾಂತಾಃ ।
ಕುಶಲಲಿಖಿತರೂಪಾ ರೇಜಿರೇ ತೇಷು ವರ್ಣಾಃ ॥ ೨೦ ॥

ವಾರ್ಧಿಕ ॥ ಬರೆದ ಪುಸ್ತಕ ತಾಳದೋಲಿ ಶೋಭಿಸಿದವ್ಯೆ ।
ಬೆರೆಯದೆ ಪರಸ್ಪರಂ ಪಂಕ್ತಿಯತಿ ದೂರಿರದೆ ।
ಸರಸದಲಿ ಋಜುತರದನೇಕ ಸಾಲುಗಳು ಸಮವಾಗಿ ಸುಂದರ ಕಾಣ್ಬವೊ ।
ದ್ವಿರದ ತುರಗಾಕೃತಿಯ ಲಿಪಿಯ ಅಕ್ಷರ ಉಪರಿ ।
ಸರಿಯಾಗಿ ನಾಲ್ಕು ಬದಿ ಚನ್ನಾಗಿ ಸ್ಥಳಬಿಟ್ಟು ।
ಬರೆದಿರುವ ಕಾರ್ಣ ಲೇಖನಕಾರ್ಯ ಕುಶಲರಿಂ ಬರೆದವಕ್ಷರ ನಿಜವಿವೊ ॥ ೨೦ ॥ ೭೭೪ ॥

ಭಾವಾರ್ಥ:— ಆ ಹಸ್ತಲಿಖಿತ ಅಕ್ಷರಗಳನ್ನು, ವರ್ಣಿಸುತ್ತಾರೆ. ಆ ಪುಸ್ತಕಗಳ ತಾಳ ಪತ್ರಿಕಾಗಳಲ್ಲಿ, ಬರೆದ ಅಕ್ಷರಗಳು ಬಹು ಸುಂದರವಾಗಿ, ಶೋಭಿಸಿದವು- ಹೆಚ್ಚು ದೂರ ವಿರಳವಾಗಿರದಿದ್ದರೂ ಒಂದು ಅಕ್ಷರಕ್ಕೆ ಮತ್ತೊಂದು ಅಕ್ಷರ ತಗಲದೇ ಆ ಅಕ್ಷರಗಳ ಸಾಲುಗಳು ಸಹ ಬಹು ದೋ

ವಾಗಿರದೇ, ಮತ್ತು ಒಂದಕ್ಕೊಂದು ತಾಕದೇ, ಋಜುತರದ=ಸರಿಯಾದ ನೀಟವಾಗಿ ಸರಳ ರೇಖೆಗಳಂತೆ ಇರುವ ಅನೇಕ-ಸಾಲುಗಳು ಸಮಾನವಾಗಿಯೂ, ಬಹು ಚಂದವಾಗಿಯೂ, ಕಾಣಿಸುವವು. ಆ ಅಕ್ಷರಗಳು ದ್ವಿರದ ತುರಗಾಕೃತಿಯ=ಆನೆ ಕುದುರೆಗಳ ಆಕೃತಿಯಂತೆ ಗಜಲಿಪಿ ತುರಗಲಿಪಿಗಳಾಗಿಯೂ, ಮತ್ತು ಆ ಪತ್ರಗಳಲ್ಲಿ ಬರೆದ ಅಕ್ಷರಗಳ ಸಾಲುಗಳ ಮೇಲೆ, ಬುಡಕೆ, ಎಡಬಲ ನಾಲ್ಕೂ ಬದಿಗಳಲ್ಲಿ ತಕ್ಕ ಸ್ಥಳ ಬಿಟ್ಟು ಬರೆದ ಕಾರಣ, ನಿಜವಾಗಿ ಬರವಣಿಗೆಗಲ್ಲಿ ನಿಪುಣರಾದ ಪುರುಷರಿಂದ ಬರೆದ ಅಕ್ಷರಗಳಿಂದ ಆ ತಾಳದ ಓಲೆ ಚನ್ನಾಗಿ ಪ್ರಕಾಶಿಸಿದವು.

**ಶ್ಲೋಕ ॥ ಸಪದಿ (ಝಟಿತಿ) ದದೃಶುರೇಕೇ ವಾಚನೀಯಾದಿಭಾಗಂ |**
**ಪರಿಚಯ ಪಟುತಾಭ್ಯಾಂ ತಾವದೇಕೇ ಚಿರೇಣ ॥ ||**
**ಹರಿಗುರುನಮನಂ ದ್ರಾಗ್ಯತ್ನತೋಽಮೀ ವಿಧಾಯ |**
**ಪ್ರಯಯುರಪರ ಸಾಮ್ಯಂ ಸಿದ್ಧಯೇ ಸ್ಯಾದ್ಧಿಯತ್ನಃ ॥೨೧॥**

ಸಾರ್ಥಿಕ ॥ ಕೆಲವು ಶಿಷ್ಯರು ವಾಚನೀಯಾದಿ ಭಾಗ ವಾ |
ಗಲೆ ತಕ್ಷಣದಿ ನೋಡಿ ತಮ ಬುದ್ಧಿಬಲದಿಂದ |
ತಿಳಿದುಕೊಂಡರು ಹಲರು ಕಾಲಂ ವಿಲಂಬಿಸುತ ಬಲುಭಾರಿ
ನೋಡಿ ತಿಳಿಯಲ್ ॥

ಬಲುಮೆಯಿದೆಯತ್ನಹರಿಗುರುವಿಂಗೆ ತ್ವರ ನಮಿಸಿ |
ಸಲೆ ತೀಕ್ಷ್ಣಬುದ್ಧಿಯರ ಸಾಮ್ಯವನು ಪೊಂದಿದರು |
ಬಲುಯುಕ್ತ ದೇಶಕಾಲೋಚಿತ ಪ್ರಯತ್ನವದು ಕಾರ್ಯ
ಸಿದ್ಧಿಂಗಿರುವದೈ ॥ ೨೧ ॥ ೭೭೫ ॥

ಭಾವಾರ್ಥ:— ಇನ್ನು ಪಾಠ ಕೇಳತಕ್ಕ ಶಿಷ್ಯರು ಹೇಗಿದ್ದರೆಂದು ವರ್ಣಿಸುವರು ಅನೇಕ ಶಿಷ್ಯರು, ವಾಚನೀಯಾದಿ ಭಾಗ=ಪಾಠ ಕೇಳಲಿಕ್ಕೆ ಪ್ರಾರಂಭಿಸುವ ಕಾಲದಲ್ಲಿ ಕೇಳಲು ಉಚಿತವಾದ ಓದತಕ್ಕ ಗ್ರಂಥದ ಆದಿಭಾಗಂ=ವಾಕ್ಯರೂಪವಾದ ಏಕದೇಶವನ್ನು ಆ ಗ್ರಂಥ ವಿಷಯ ಶ್ರವಣ ಮನನಾದಿರೂಪ ಪರಿಚಯ ಅಭ್ಯಾಸ ಪಟುತ್ವ, ವಾಚನೀಯ ಚಾತುರ್ಯಾದಿ ಶಕ್ತಿ ಎಂಬುವ ತಮ್ಮ ಬುದ್ಧಿಬಲದಿಂದ ನೋಡಿದಕೂಡಲೇ ತಿಳಿದುಕೊಂಡರು. ಕೆಲವು ಶಿಷ್ಯರು ಕೆಲಕಾಲ ತಡೆದು ನೋಡಿ ಬಹು ಹೊತ್ತಿನ ಮೇಲೆ ತಿಳಿದುಕೊಂಡರು. ಅಷ್ಟು ಚಾತುರ್ಯ ಬುದ್ಧಿ ಇಲ್ಲದ ಮಂದಮತಿಗಳಾದರೂ ಶ್ರೀಹರಿಗುರುಪಾದ ಚರಣಾವಲಂಬಿಗಳಾಗಿ, ಅಡಿಗಡಿಗೆ ಅವರ ಪಾದಗಳಿಗೆರಗುತ್ತ, ಬಲುಮೆ = ಹೆಚ್ಚಾದ ಪ್ರಯತ್ನದಿಂದ ಸಂತತವಾಗಿ ಓದಿ ಆ ತೀಕ್ಷ್ಣ ಬುದ್ಧಿಯ ಶಿಷ್ಯರ ಸರಿಯಾದದ್ದು, ಆಶ್ಚರ್ಯವಲ್ಲ. ಇದು ಬಲು ಯುಕ್ತವು. ಯಾಕಂದರೆ ದೇಶಕಾಲಕ್ಕೆ ಯೋಗ್ಯವಾದ ಪ್ರಯತ್ನವು ನಿಶ್ಚಯವಾಗಿ ಸಕಲ ಕಾರ್ಯಗಳ ಸಿದ್ಧಿಯಾಗಿರುತ್ತದಷ್ಟೇ ? ಆ ಆ ಕಾರ್ಯೋಚಿತ ಪ್ರಯತ್ನ ಮಾಡಿದರೆ ಯಾವ ಕಾರ್ಯವು ಸಿದ್ಧಿಸಲಿಕ್ಕಿಲ್ಲ. ಪ್ರಯತ್ನದಿಂದ ಸರ್ವವು ಸಿದ್ಧಿಯಾಗುವವು.

**ಶ್ಲೋಕ ॥ ಯತವಚಸಿ ಜನೇಽಸ್ಮಿನ್ನಾನತೇ ಸನ್ನಿರಸ್ಯನ್ ।**
**ಸಿಚಯ (ನ್ನಿಸಿಚ) ಯವನಿಕಾಂತಾಂ**
**ಸಾಂಧ್ಯಜೀಮೂತರಕ್ತಾಮ್ ॥**
**ರವಿರಿವ ರವಿಪೂಜಾಂಘ್ರಿಃ ಸಮಾಜಾಂತರಿಕ್ಷೇ ।**
**ವ್ಯಲಸದತಿಶಯಾಲುಃ ಸನ್ ಸಹಸ್ರಪ್ರಕಾಶಃ ॥ ೨೨ ॥**

ವಾರ್ಧಿಕ ॥ ಆನತಂ ಶ್ರೋತ್ರಜನ ಮೌನದಿಂ ಕುಳ್ಳಿರೆಯು ।
ಭಾನು ಸಾವಿರ ಕಿರಣವಂತ ನಾಕಾಶದಲಿ ।
ತಾನು ಸಂಧ್ಯಾಕಾಲದರುಣ ಮೇಘವನಟ್ಟಿ ಮೇಲುದಿಸಿ
ಬರುವೊ ತೆರದಿ ॥
ಜ್ಞಾನಪೂರ್ಣರು ಮಧ್ವರವಿಯಿಂದ ಪೂಜ್ಯಾಂಘ್ರಿ ।
ತಾನೆ ಸ್ವಕಾಂತಿಯಂ ರವಿಯನ್ನು ಮೀರಿದತಿ ।
ಧ್ಯಾನದರುಣ್ಯವನಿಕವ ಹಿಂದಟ್ಟಿ ವ್ಯಾಖ್ಯಾನ ಸಭೆಗಗನ
ರಾರಾಜಿಸೇ ॥ ೨೨ ॥ ೭೭೬ ॥

**ಭಾವಾರ್ಥ :—** ಶ್ರೀಮದಾಚಾರ್ಯರು ಪಾಠ ಹೇಳುವ ಸಭಾ ಮಂಟಪಕ್ಕೆ ಬಂದ **ವರ್ಣನೆ.**

ಮೇಲೆ ವಿವರಿಸಿದಂತೆ ಎಲ್ಲ ಶಿಷ್ಯರು ಶ್ರೀಮದಾಚಾರ್ಯರ ಯೋಗಪೀಠದ ಸುತ್ತಲೂ, ಪಾಠ ಕೇಳಲಿಕ್ಕೆ ಕುಳಿತು ಶ್ರೀ ಸರ್ವಜ್ಞ ಗುರುಗಳ ಆಗಮನ ನಿರೀಕ್ಷಿಸುತ್ತ, ಮುಂದೆ ನಡೆಯುವ ಪಾಠವು ಯಾವುದೆಂದು ತಮ್ಮ ಬುದ್ಧಿಯ ಬಲದಿಂದ ತಿಳಿಯುತ್ತ, ಪಾಠ ಕೇಳತಕ್ಕ ಶಿಷ್ಯ ವರ್ಗವು, ಆನತಂ = ತಲೆಬಾಗಿ ಕೈಮುಗಿದು ನಮಸ್ಕರಿಸುತ್ತ ಮೌನದಿಂ = ವಚನವನ್ನು ನಿಗ್ರಹಿಸಿ ಮಾತಾಡದೇ ಈಗ ಗುರುಗಳು ದಯಮಾಡಿಸುವರೆಂದು ಸುಮ್ಮನೇ ಕುಳಿತಿರಲಾಗಿ, ಸಂಧ್ಯಾನುಷ್ಠಾನ ಮಾಡುವ ವಿಪ್ರಾದಿಗಳು ಪ್ರಾತಃಕಾಲದ ಸಂಧ್ಯಾದಿಗಳನ್ನು ಮುಗಿಸಿ, ಸೂರ್ಯದರ್ಶನದಿಂದ ಸೂರ್ಯನಿಗೆ ನಮಸ್ಕಾರ ಮಾಡುವದೆಂದು ಸೂರ್ಯೋದಯ ಕಾಲವನ್ನು ನಿರೀಕ್ಷಿಸುತ್ತ ಮಾತಾಡದೇ ಮೌನವ್ರತರಾಗಿ ಕುಳಿತಿರಲು, ಸಾವಿರ ಕಿರಣಗಳುಳ್ಳ ಸೂರ್ಯನು, ರಾತ್ರಿಕಾಲದ ಅರುಣಮಯ ಕೆಂಪಾದ ಮೇಘ-ಮೋಡವನ್ನು ಹಿಂದಕ್ಕೆ ಒತ್ತುತ್ತಾ ಆಕಾಶದಲ್ಲಿ ಮೇಲಕ್ಕೆ ಉದಯಿಸಿ ಬರುವಂತೆಯೇ ಜ್ಞಾನಪೂರ್ಣರಾದ ಶ್ರೀಮದಾಚಾರ್ಯರು, ಸೂರ್ಯದೇವರಿಂದ ನಮಸ್ಕರಿಸಿಕೊಳ್ಳುವ ಪಾದಗಳುಳ್ಳವರೂ, ತಾವು ತಮ್ಮ ಸ್ವಪ್ರಭೆಯಿಂದ ಸೂರ್ಯನನ್ನು ಮೀರುವ ಅಪರಿಮಿತ ದೇಹಕಾಂತಿಯೂ, ಹೆಚ್ಚಾದ ಜ್ಞಾನಪ್ರಕಾಶವುಳ್ಳವರೂ, ಧ್ಯಾನಕ್ಕೆ ಕುಳಿತ ರಾತ್ರಿಕಾಲದ ಮೇಘದಂತೆ ಅರುಣಮಯವಾದ ಕಾವೀ ಶಾಟಿಯ ಸರದೆಯನ್ನು ಹಿಂದೆ ಮಾಡುತ್ತ, ಸೂರ್ಯನಂತೆ ಮಹಾ ಪ್ರಕಾಶಿಸುತ್ತ, ವ್ಯಾಖ್ಯಾನ ಸಭೆ ಎಂಬುವ ಆಕಾಶವನ್ನು ಶೋಭಿಸಿದರು. ಅಂದರೆ ಶ್ರೀಮದಾಚಾರ್ಯರು ಧ್ಯಾನಕ್ಕೆ ಕುಳಿತವರು, ತಾವು ಆ ಕೆಂಪಾದ ಪರದೆಯನ್ನು ಹಿಂದಕ್ಕೆ ಸರಿಸಿ, ಪಾಠ ಮಂಟಪಕ್ಕೆ ಬಂದರು.

**ಶ್ಲೋಕ ॥ ತ್ರಿಭುವನವರತೇಜೋವ್ಯಕ್ತ ವೇದಾರ್ಥಶುಕ್ಲ- ।
ತ್ರಿತಯರಸತಯಾ ಯೇ ವರ್ಣಿತಾ ವರ್ಣವರ್ಯಾಃ ॥
ಪೃಥುಮತಿರಥ ತೇಷಾಮೈಕ್ಯಮಾಪಾದ್ಯಸಮ್ಯಕ್ ।
ಪ್ರವಚನಪರಿಶುದ್ಧ್ಯೈಸ್ಮ ಪ್ರಣಾತಿ ಪ್ರವೀಣಃ ॥ ೨೩ ॥**

ವಾರ್ಧಿಕ ॥ ಪ್ರವಚನದಿ ನಿಪುಣ ಪೃಥುಮತಿಗಳೋಂಕಾರವೀ ।
ಹವಣದಿಂದುಚ್ಚರಿಸೆ ವ್ಯಾಖ್ಯಾನ ಶುದ್ಧಿಂಗೆ ।
ಅ, ಉ, ಮ, ಕಾರಂ ನಿತ್ಯಸಶ್ಲೇಷ್ಯದಿಂ ವರವರಣ ತ್ರಿಭುವನ ತ್ರೈಅಗ್ನಿಯಾ ॥
ಅವಿಕಾರ ವೇದತ್ರಯು ವ್ಯಾಹೃತಿಯ ವರಸಾರ ।
ವಿವೆ ಪೃಥ್ವಿ ಅಂತರಿಕ್ಷ ದ್ವಿಲೋಕಾಗ್ನ್ಯೈನಿಲ ।
ಸವಿತೃಋಗ್ಯಜುಃ ಸಾಮಾರ್ಥ ಭೂರ್ಭುವಃಸುವಃ ವೇದ ಮೂಲೋಂಕಾರವಂ ॥ ೨೩ ॥ ೭೭೭ ॥

ಭಾವಾರ್ಥ:— ಶ್ರೀಮದಾಚಾರ್ಯರು, ಪಾಠ ಪೇಳಲಾರಂಭಿಸಿದ ವರ್ಣನೆ

ಪಾಠ ಪೇಳತಕ್ಕವರಲ್ಲಿ (ನಿಪುಣ) ಕುಶಲರಾದ, ಪೃಥುಮತಿಗಳು ಶ್ರೀ ಪೂರ್ಣಪ್ರಜ್ಞರು, ಪಾಠಪಾರಂಭ ಕಾಲದಲ್ಲಿ ತಾವು ಹೇಳತಕ್ಕ ವ್ಯಾಖ್ಯಾನ= ಪಾಠ, ಪ್ರವಚನ ಶುದ್ಧವಾಗುವದಕ್ಕಾಗಿ, ಹವಣ= ಬಹು ಹಂಚಿಕೆ, ಜಾಣತನದಿಂದ, ಆಯಾ ವರ್ಣಗಳಿಗೆ ಚನ್ನಾಗಿ ಅನುಪೂರ್ವ= ಕ್ರಮವಾಗಿ ಒಂದಕ್ಕೊಂದು ಸಂಬಂಧವಾಗಿ ನಿರಂತರ, ಸಂಶ್ಲೇಷ= ಒಂದಕ್ಕೊಂದು ಬಿಡದೇ ಅಪ್ಪಿಕೊಂಡಿರುವ— ಆ ಅಕ್ಷರ ಶ್ರೇಷ್ಠವಾದ, ಅ— ಉ— ಮ, ಎಂಬ ಮೂರು ಅಕ್ಷರಗಳಿಗೆ, ಚನ್ನಾಗಿ ಐಕ್ಯವನ್ನುಂಟು ಮಾಡಿ ಓಂ ಎಂದು ಪ್ರಣವೋಚ್ಚಾರಣೆ ಮಾಡಿದರು.

ಯಾವ ಈ ಮೂರು ಅಕ್ಷರ ಶ್ರೇಷ್ಠಗಳು, ಪೃಥ್ವಿ, ಅಂತರಿಕ್ಷ ದಿವಃ= ಸ್ವರ್ಗ ಈ ಮೂರು ಲೋಕಗಳಲ್ಲಿ ಸಾರವಾದುದರಿಂದಲೂ, ಅಗ್ನಿ ವಾಯು ಆದಿತ್ಯರೆಂಬ, ಮೂರು ತೇಜಸ್ಸುಗಳಲ್ಲಿ, ಸಾರ (ಮುಖ್ಯ) ವಾದುದರಿಂದಲೂ, ಮತ್ತು ಶ್ರೇಷ್ಠವಾದ ಋಕ್, ಯಜುಃ ಸಾಮ ಎಂಬ ಮೂರು ವೇದ ಗಳಲ್ಲಿ ಸಾರವಾದುದರಿಂದಲೂ, ಮತ್ತು ಈ ಮೂರು ವೇದಾರ್ಥರೂಪವಾಗಿರುವ, ಭೂಃ ಭುವಃ— ಸುವಃ—ಎಂಬುವ ಮೂರು ವ್ಯಾಹೃತಿಗಳ ಸಾರವೆಂದು ವೇದಗಳು ವರ್ಣಿಸಿರುವವೋ ಇಂತು ಸಕಲ ವೇದಗಳಿಗೆ ಮೂಲ ಭೂತವಾದ ಓಂಕಾರವನ್ನು ಉಚ್ಚರಿಸಿದರು.

ಈ ಅ – ಉ – ಮ ಎಂಬ ಮೂರು ಅಕ್ಷರಗಳನ್ನು ವರ್ಣಿಸುವ ಶ್ರುತಿ ಯಾವುದೆಂದರೆ;

" ಸ ಇಮಾನ್ ಲೋಕಾನ್ ಸೃಜತ್ ಪೃಥಿವೀ ಮಂತರಿಕ್ಷಂ ದಿವಂ ತಾನ್ ಲೋಕಾನಭ್ಯ ತಪತ್ ತೇಭ್ಯೋಭಿತಪ್ತೇಭ್ಯಸ್ತ್ರೀಣಿ ಜ್ಯೋತೀಂಷ್ಯಜಾಯಂತಾ ಅಗ್ನಿರೇವ ಪೃಥಿವ್ಯಾ ಅಜಾಯತ್ ವಾಯುರಂತರಿಕ್ಷಾ ಸಾದಿತ್ಯೋ ದಿವಸ್ತಾನಿ ಜೋತೀಷ್ಯಭ್ಯತಪತ್ ತೇ ಭ್ಯೋ ಅಭಿತಪ್ತೇಭ್ಯ ಸ್ತ್ರಯೋ ವೇದಾ ಅಜಾಯಂತ, ಋಗ್ವೇದ ಏವಾ ಅಗ್ನೇ ರಜಾಯತ, ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾತ್ ತಾನ್ ವೇದಾನಭ್ಯತಪತ, ತೇಭ್ಯೋಽಭಿತಪ್ತೇಭ್ಯ ತ್ರೀಣಿ ಶುಕ್ರಾಣ್ಯಜಾಯಂತ, ಭೂರಿ

ತ್ರೈವ ಋಗ್ವೇದಾದಜಾಯತ್, ಭುವರಿತಿ ಯಜುರ್ವೇದಾತ್ ಸ್ವರಿತಿ ಸಾಮವೇದಾತ್, ತಾನಿ ಶುಕ್ರಾಣ್ಯಭ್ಯತಪತ್,=ತೇಭ್ಯೋ ಅಭಿತಪ್ತೇಭ್ಯ ಸ್ತ್ರಯೋವರ್ಣಾ ಅಜಾಯಂತಾಕಾರ ಉಕಾರೋ ಮಕಾರ ಇತಿ, ತಾನೇಕಧಾ ಸಮಭರತ್ತದೇತತ್ತದೋಮಿತಿ, ಎಂದು ಐತರೇಯ ಬ್ರಾಹ್ಮಣ ಪಂಚಮ ಖಂಡ ಪ್ರತಿಪಾದಿತ ಪ್ರಣವ ಪ್ರಕಾರವನ್ನು ಭಾವಪ್ರಕಾಶಿಕೆಯಲ್ಲಿ ಸೂಚಿಸಿರುವರು.

ಶ್ಲೋಕ ॥ ಸ್ವರಮುಚರಮಕಾಲೇ ಮಂದ್ರಮೇ ವಾತ್ಯಜದ್ಭಿಃ ।
ಸ್ಫುಟಮುಪನಿಷದಂತೇ ವಾಚಕೈರ್ವಾಚ್ಯಮಾನೇ ॥
ಪ್ರವಚನಮತಿಚಿತ್ರಂ ಪ್ರಾಣಭಾಜಾಂ ಶ್ರುತೀನಾ ।
ಮಮೃತಮಮೃತಭಾವಸ್ಯೈಷ ಹೇತುಂ ಚಕಾರ ॥ ೨೪ ॥

ವಾರ್ಧಿಕ ॥ ಭರದಿ ಶಿಷ್ಯರು ಪಾಠವಾರಂಭ ಸಮಯದಲಿ ।
ಸ್ವರ ಮಂದ್ರವಂ ಬಿಡದೆ ಮೆಲ್ಲನೆಯ ಅರ್ಥಾಗ್ವ ।
ತೆರ ಉಪನಿಷದ್ಭಾಷ್ಯ ಜವದಿ ಸಸ್ಫುಟದಿಂದ ಓದುತಿರೆ ಗುರುಸನ್ನಿಧಿ ॥
ಸಿರಿಮದಾಚಾರ್ಯರ್ತಾಂ ಕೇಳುವರ ಕಿವಿಗಳಿಗೆ ।
ವರ ಅಮೃತ ದಂತಿರುವ ಮೋಕ್ಷ ಫಲಕಂ ಕಾರ್ಣ
ನಿರುತ ಅತ್ಯಾಶ್ಚರ್ಯಕರ ವ್ಯಾಖ್ಯೆಯಿಂದ ಶಾಸ್ತ್ರೋಪದೇಶವ ಗೈದರು ॥ ೨೪ ॥ ೭೭೮ ॥

ಭಾವಾರ್ಥ:— ಇನ್ನು ಶ್ರೀಮದಾಚಾರ್ಯರ ಶಿಷ್ಯರು ಪಾಠವಾರಂಭ ಸಮಯದಲ್ಲಿ, ಪಾಠ ಓದುವ ಕ್ರಮವನ್ನು ಹೇಳುತ್ತಾರೆ. ಭರದಿ=ಶ್ರೀ ಪೂರ್ಣಪ್ರಜ್ಞ ಗುರುಗಳು ಓಂ ಎಂದು ಉಚ್ಚಾರ ಮಾಡಿದಕೂಡಲೇ, ಪಾಠ ಹೇಳಲಿಕ್ಕೆ ಪ್ರಾರಂಭ ಮಾಡುವ ಕಾಲದಲ್ಲಿ ತ್ವರದಿಂದ, ಸ್ವರಮಂದ್ರ=ಮೆಲ್ಲಗಾದ ಧ್ವನಿಯನ್ನು ಬಿಡದಲೇ ಅಂದರೆ ಉಚ್ಚ ಧ್ವನಿಯಿಂದ ಓದುವದು ಗುರುಗಳ ಸನ್ನಿಧಿಯಲ್ಲಿ ನಿಷಿದ್ಧವಾದ ಕಾರಣ, ಮೆಲ್ಲನ ಧ್ವನಿಯಿಂದಲೇ ಪುಸ್ತಕಗಳನ್ನು ಓದುವ ಶಿಷ್ಯರು, ಉಪನಿಷತ್ ಭಾಷ್ಯವನ್ನು, ಸ್ಪಷ್ಟವಾಗಿ ತಿಳಿಯುವಂತೆ ಮತ್ತು ಅರ್ಥವಾಗುವಂತೆ ಮೆಲ್ಲನೇ ಓದುತ್ತಿರಲಾಗಿ; ಆಗ್ಗೆ ಶ್ರೀ ಪೂರ್ಣಪ್ರಜ್ಞಾಚಾರ್ಯರು, ಶ್ರೋತ್ರೇಂದ್ರಿಯ ಪಾಟವವುಳ್ಳ ಜೀವಿಗಳ ಕಿವಿಗಳಿಗೆ, ಅಮೃತದಂತೆ ಸುಖವನ್ನು ಕೊಡುವುದೂ, ಮತ್ತು ಮೋಕ್ಷಫಲಕ್ಕೆ ಮುಖ್ಯ ಕಾರಣವಾದದ್ದೂ, ಅತ್ಯಾಶ್ಚರ್ಯವಾಗಿ, ಅನೇಕಾರ್ಥಬೋಧಕವಾದ ವ್ಯಾಖ್ಯಾನದಿಂದ, ವೇದಾಂತ ಶಾಸ್ತ್ರೋಪದೇಶವನ್ನು ಗೈದರು.

ಶ್ಲೋಕ ॥ ಧನಮಿವ ಸಧನಾಯೋ ಭ್ಯೋಽರ್ಕ ಸೂನುಃ ಪ್ರಸನ್ನಃ ।
ಶರಶತಮಿವ ಪಾರ್ಥಃ ಸಂಯುಗಾರ್ಥಿಭ್ಯ ಉಗ್ರಃ ।
ಅರತಿ ವಿರಹಿತಃ ಸೋಽನಾರತಂ ನಾದಿ (ನೋಽದಿ) ಶನ್ನೋ
ಪ್ರತಿವಚನಮದೀನಂ ಚೋದಕೇಭ್ಯೋಽಖಿಲೇಭ್ಯಃ ॥ ೨೫ ॥

ವಾರ್ಧಿಕ || ಆಲಸ್ಯವಿಲ್ಲದಲೆ ಶ್ರೀಮಧ್ವ ಪ್ರಶ್ನೆಯಂ
ಸಾಲಾಗಿ ಮಾಳ್ಪರಿಗೆ ಸಂತೊಷದಿಂದ ಜವ |
ಮೇಲತಿ ಪ್ರೌಢ ಪ್ರತ್ಯುತ್ತರವ ವಿಚ್ಛಿನ್ನದಿಂ ಕೊಡದೆ
ಯಿರಲಿಲ್ಲವೋ ||
ಕೇಳ್ವ ತತ್ವಬುಭುತ್ಸು ವಿದ್ಯಧನ ಕಾಂಕ್ಷಿಂಗೆ |
ತಾಳ್ಮೆಯಿಂ ಕರ್ಣಧನ ದಾನವಂ ಮಾಳ್ಪಂತೆ |
ಕೀಳಮತ್ಸರ ಯುದ್ಧ ಬಯಿಪ ಶತ್ರುವಿಗುಗ್ರ ಪಾರ್ಥ ಶರಶತ
ಎಚೆದವೋಲ್ || ೨೫ || ೭೭೯ ||

ಭಾವಾರ್ಥ:— ಆಗ್ಗೆ ಕೆಲವು ಜನರು ಶ್ರೀ ಸರ್ವಜ್ಞರನ್ನು ಕುರಿತು ಪ್ರಶ್ನೆಗಳನ್ನು ಮಾಡಲು, ಅವರೆಲ್ಲರಿಗೂ, ಅವರ ಪ್ರಶ್ನಾನುಸಾರವಾಗಿ ಉತ್ತರವನ್ನು ಕೊಟ್ಟರೆಂದು ಹೇಳುತ್ತಾರೆ. ಅದು ಹೇಗೆಂದರೆ ಕೆಲವು ಜನರು ಒಬ್ಬರಿಂದೊಬ್ಬರು ಪ್ರಶ್ನೆ ಮಾಡಲು, ಶ್ರೀ ಪೂರ್ಣಪ್ರಜ್ಞರು ತಡಮಾಡದಲೇ (ಯೋಚಿಸದೆ) ಕೋಪಿಸಿಕೊಳ್ಳದೇ, ಶಾಂತಚಿತ್ತದಿಂದ ಸಂತೋಷಯುಕ್ತಮನರಾಗಿ, ಮೇಲತಿ — ಶ್ರೇಷ್ಠವಾದ, ಪ್ರೌಢವಾದ, ಗಂಭೀರವಾದ ಪ್ರತ್ಯುತ್ತರವನ್ನು ಅವಿಚ್ಛಿನ್ನ ಧಾರಾಳವಾಗಿ ಕೊಡದೇ ಇರಲಿಲ್ಲ. ಯಾರು ಅಸೂಯಾದಿಗಳಿಂದ ರಹಿತರಾಗಿ ನಿಷ್ಕಾಪಟ್ಯದಿಂದ ನಿಜವಾದ ತತ್ವವನ್ನು ಕೇಳಬೇಕೆಂಬುವ, ವಿದ್ಯಾಧನವನ್ನು ಬಯಸುವರಿಗೆ ಸೂರ್ಯಪುತ್ರನಾದ, ಕರ್ಣನು ಧನವನ್ನು ದಾನ ಮಾಡುವಂತೆ; ತತ್ವಬುಭುತ್ಸುಗಳಿಗೆ ಅವರಿಗೆ ತೃಪ್ತಿಕರವಾದ ಉತ್ತರವನ್ನು ಕೊಟ್ಟರು. ಮತ್ತು ಯಾರು ಕೆಟ್ಟ ಬುದ್ಧಿಯಿಂದ ಮಾತ್ಸರ್ಯ ತಾಳಿ ಶ್ರೀ ಸರ್ವಜ್ಞರನ್ನು ಪರೀಕ್ಷಿಸಿ ಜಯಿಸಲಿಚ್ಛಿಪ, ಶತ್ರುಸಮರಾದವರಿಗೆ ಶತ್ರುಗಳಿಗೆ ಪಾರ್ಥನು ನೂರು ಉಗ್ರ ಬಾಣಗಳನ್ನು ಒಮ್ಮೇಲೆಚೆಯುವಂತೆ, ತಮ್ಮ ವಾಗ್ಬಾಣಗಳಿಂದ ಕುಮಾತ್ಸರ್ಯರ ಪ್ರಶ್ನರೂಪ ಪೂರ್ವಪಕ್ಷವನ್ನು ನಿರಾಕರಿಸಿ-ಮುಂದೆ ಅವರು ಆಕ್ಷೇಪಿಸದಂತೆ ಮಾಡಿದರು.

**ಶ್ಲೋಕ || ಅಥ ದಶಶತಶೋಚಿಷ್ಯಾ ಪ್ರಯಾತಿ ಪ್ರತೀಚ್ಯಾಂ (ಚ್ಯಾಃ)**
**ಪ್ರವಚನಮುವಸಾಯ (ಯ್ಯ) ಸ್ನಾತುಮಾಯಾತ್ತ**
**ಟಾಕಮ್ ||**
**ಪೃಥು ಮತಿರಿಹತಾವಜ್ಜ್ಯೇಷ್ಠ ಸಂಸರ್ಗಲೋಲ್ಯೈಃ |**
**ಸಮಗಮಿ ಸಪದಿ ಸ್ವರ್ನಿಮ್ನಗಾದ್ಯೈಶ್ಚ(ಸ್ಸು)ತೀರ್ಥೈಃ || ೨೬ ||**

ವಾರ್ಧಿಕ || ಆ ನಳಿನ ಮಿತ್ರ ಸಾವಿರ ಕಿರಣ ಪಡುವಣಕೆ |
ತಾನು ಅಭಿಮುಖಿಸಿ (ಖದ) ಬರೆ ಮಧ್ಯಾಹ್ನ ಕಾಲವೆಂ |
ದಾನಂದ ಮುನಿ ಪಾಠವಂ ಮುಗಿಸಿ ಮಧ್ಯಾಹ್ನಿಕ ಸ್ನಾನವಂ
ಮಾಡಲು ||

ಮಾನ್ಯರು ಸರೋವರಕೆ ಬರಲು ಆವಾಗಲೆಯೇ
ಸಾನುರಾಗದಿ ಸಕಲ ಗಂಗಾದಿ ತೀರ್ಥಾಭಿ |
ಮಾನಿದೇವತೆಗಳುಂ ಶ್ರೇಷ್ಠ ಮಧ್ವಾರ್ಯ ಸಂಸರ್ಗ-
ಲೋಲ್ಯದಿ ಬಂದರೈ ॥ ೨೬ ॥ ೭೮೦ |

ಭಾವಾರ್ಥ:— ಈ ಶ್ಲೋಕವಾರಂಭಿಸಿ ೪೯ ಶ್ಲೋಕವರಿಗೆ ಶ್ರೀ ಸರ್ವಜ್ಞರ ಮಾಧ್ಯಾಹ್ನಿಕ ಆಹನ್ನೀಕ ವರ್ಣಿಸುತ್ತಾರೆ.

ನಳಿನಮಿತ್ರ=ಕಮಲ ಗೆಳೆಯನಾದ-ಸಾವಿರ ಕಿರಣಗಳುಳ್ಳ - ಸೂರ್ಯನು, ಪಡುವಣಕೆ= ಪಶ್ಚಿಮ ದಿಕ್ಕಿಗೆ - ಅಭಿಮುಖಿಸಿ = ಎದುರಾಗಿ ಪಶ್ಚಿಮ ದಿಕ್ಕಿಗೆ ಬರಲು - ಅಂದರೆ ಮಧ್ಯಾಹ್ನ ಕಾಲೋ ಗಲು; ಶ್ರೀಮದಾನಂದತೀರ್ಥರು ಶಿಷ್ಯರಿಗೆ ಪಾಠ ಹೇಳುವುದನ್ನು ಮುಗಿಸಿ ಉತ್ತರ ಶಾಂತಿಯನ್ನು ಹೇಳಿ, ಮಧ್ಯಾಹ್ನ ಕಾಲದ ಸ್ನಾನ ಮಾಡಲು, ಮಾನ್ಯರು = ಪೂಜ್ಯರು ಸರೋವರಕ್ಕೆ ಯಾವ ಕಾಲದಲ್ಲಿ ಬಂದರೋ ಆಕ್ಷಣವೇ = ಶ್ರೇಷ್ಠ ಸಂಸರ್ಗಲೋಲ್ಯ = ಉತ್ತಮರಾದ ಶ್ರೀಮದಾಚಾರ್ಯರ ಅಂಗ ಸಂಬಂಧ ಆಶೆಯುಳ್ಳವರಾಗಿ, ಸ್ವರ್ಗ ನದಿಯಾದ ಶ್ರೀ ಭಾಗೀರಥಿ ( ಗಂಗಾ ) ದೇವಿಯೇ ಮೊದಲಾದ ಸಕಲ ತೀರ್ಥಾಭಿಮಾನಿಗಳು, ಈ ಸರೋವರದಲ್ಲಿ ಬಂದು ಸೇರುತ್ತ ಸನ್ನಿಹಿತರಾದರು.

ಶ್ರೀಮದಾಚಾರ್ಯರ ಸ್ನಾನ ವೇಳೆಯಲ್ಲಿ ಅವರ ಅಂಗ-ಸಂಬಂಧಪಟ್ಟ ಉದಕ ಸ್ಪರ್ಶದಿಂದ ನಾವು ಮಹಾ ಪವಿತ್ರತೆ ಹೊಂದುತ್ತೇವೆಂದು ಬಯಸಿ, ದ್ರವರೂಪ ತೀರ್ಥಗಳಿಂದ ಸಹಿತರಾದ ಸಕಲ ತೀರ್ಥಾಭಿಮಾನಿ ದೇವತೆಗಳು ಈ ಸರೋವರಕ್ಕೆ ಬಂದು ಕೂಡಿದರೆಂದು ಭಾವ.

ಶ್ಲೋಕ ॥ ಘನರಸನಿಕರೋಽಸಾವಂತರತ್ಯಂತಶುದ್ಧೋ |
ಮುನಿಗಣ ಇವ ಭೂಯಃ ಸ್ನೇಹವಾನ್ ಪ್ರಾಗ್ದಧಾನಃ ॥
ಪ್ರತಿಕೃತಿಮಖಿಲಜ್ಞಸ್ಯಾಪರೋಕ್ಷೇಣ ತಾವತ್ |
ಸ್ಫುಟಿಮಲಭತರೂಪಂ ಮಜ್ಜನೇ ಸಜ್ಜನೇಷ್ಟಮ್ ॥ ೨೭ |

ವಾರ್ಧಿಕ ॥ ವಿಮಲಜಲ ಮಧ್ಯವತಿ ನಿರ್ಮಲದಿ ದ್ರವಿಪವೋ ॥
ಅಮಿತ ಮುನಿಗಣ ಶುದ್ಧ ಹೃದಯ ಭಕ್ತಿಮಂತರೊ |
ಕ್ರಮದಿ ಪ್ರಾಕ್ ಮಜ್ಜನವೊ ಅಪರಿಪಕ್ವಂ ಧ್ಯಾನೊ-
ಅಖಿಲಜ್ಞರಾ ಛಾಯವೋ ॥
ಸುಮನ ವಾಸನ ಮಯದ ಪ್ರತಿಮೆಯೋ ಮಜ್ಜನದ |
ಸಮಯವೋ ಧ್ಯಾನಪರಿಪಕ್ವವೋ ಸುಜನೇಷ್ಟ |
ಪ್ರಮದ ಪೂರ್ಣರ ರೂಪೊ ಭಗವತ್‌ಸ್ವರೂಪವೋ
ಸ್ಫುಟವೊಂದಿದರಿಯದಾಯ್ತು ॥ ೨೭ ॥ ೭೮೧ |

**ಭಾವಾರ್ಥ:—** ಇನ್ನು ಶ್ರೀ ಸರ್ವಜ್ಞಾಚಾರ್ಯರ ಸ್ನಾನಸಗೈವುದನ್ನು ಅಲಂಕಾರದೊಡನೆ ಬಣ್ಣಿಸುವಿಕೆ.

ಆ ಸರೋವರದಲ್ಲಿದ್ದ ಜಲಗಳು ಅತ್ಯಂತ ಶುದ್ಧವಾಗಿಯೂ, ಸ್ವಚ್ಛವಾಗಿಯೂ ಹರಿಯುತ್ತ ಋಷಿಗಳ ಸಮೂಹದಂತೆಯೇ, ಶ್ರೀ ಸರ್ವಜ್ಞರು ನೀರಿನಲ್ಲಿ ಇಳಿಯುವ ಮೊದಲಿಗೆ ಅವರ ನೆರಳನ್ನು ಜಲಗಣವು ತಾವು ಧರಿಸಿ, ಶ್ರೀ ಮಣಲವಬೋಧರು ನೀರಿನಲ್ಲಿ ಇಳಿದು ಅವಗಾಹನ ಸ್ನಾನ ಮಾಡುವ ಕಾಲ ಸಜ್ಜನರಿಗೆ ಇಷ್ಟವಾದ ಪ್ರಮುದ=ಸಂತೋಷ ಆನಂದಪೂರ್ಣರ ರೂಪವನ್ನು ಸ್ಪಷ್ಟವಾಗಿ ಪ್ರತ್ಯಕ್ಷದಿಂದ ಹೊಂದಿತು. ಹೇಗೆದಂದರೆ, ಬಹು ಭಕ್ತಿಮಂತರಾದ ಧ್ಯಾನ ಮಾಡತಕ್ಕ ಮುನಿಗಳಂತೆನೆ. ಆ ಮುನಿಗಳ ಸಮೂಹವು ತಮ್ಮ ಅಂತಃಕರಣದಲ್ಲಿ ಅತ್ಯಂತ ಶುದ್ಧರಾಗಿಯೂ ಅಜ್ಞಾನಾದಿ ದೋಷರಹಿತರಾಗಿಯೂ, ಅಪರಿಪಕ್ವಂ ಧ್ಯಾನೆ,=ಧ್ಯಾನ ಪರಿಪಾಕವಾಗದ ಮೊದಲಿಗೆ, ಅಂದರೆ ಧ್ಯಾನ ಸಾಧನ ಕಾಲವಲ್ಲಿ ಪೂರ್ಣ ಷಡ್ಗುಣೈಶ್ವರ್ಯ ಸಂಪನ್ನನಾದ, ಭಗವಾನ್ ಅಖಿಲಜ್ಞ=ಸರ್ವವನ್ನು ಬಲ್ಲ ಶ್ರೀ ಪ್ರಾಣಾಂತರ್ಯಾಮಿ ಶ್ರೀ ಹರಿಯ ವಾಸನಾಮಯ ತಮ್ಮ ಇಚ್ಛಾನುರೂಪವಾದ ಜಡಪ್ರತಿಮೆಯ ಪ್ರತಿಬಿಂಬವನ್ನು ಧಾರಣಮಾಡಿ, ಧ್ಯಾನ ಪರಿಪಕ್ವವಾದನಂತರ, ಆ ವಾಸನಾಮಯನಾದ ಪ್ರಾಜ್ಞನು, ಸರಿದು, ತಮ್ಮ ಚಿದ್ ಹೃದಯಗತನಾದ ಬಿಂಬರೂಪಿ ಶ್ರೀ ಹರಿಯನ್ನು ಪ್ರತಕ್ಷ ಸ್ಫುಟವಾಗಿ ನೋಡಿದರೋ ಎಂಬುವಂತೆಯೇ ತೋರಿತು. ನೀರಿನ ಸಮೂಹವೋ=ಮುನಿಗಳೋ, ಸ್ನಾನದಕಿಂತಲೂ ಮೊದಲಿನ ಕಾಲವೇ, ಧ್ಯಾನಕಾಲವೋ, ನೀರಿನಲ್ಲಿ ಇಳಿಯುವಾಗ ನೀರಿನೊಳಗೆ ಬಿದ್ದ ಶ್ರೀ ಸರ್ವಜ್ಞರ ಛಾಯವೇ ಶ್ರೀ ಹರಿಯ ವಾಸನಾಮಯ ಪ್ರತಿಮೆಯೋ, ಸ್ನಾನಕಾಲವೇ ಪರಿಪಕ್ವ ಧ್ಯಾನಕಾಲವೋ, ಪ್ರಮುದ ಪೂರ್ಣ=ಆನಂದತೀರ್ಥರ ರೂಪವೇ, ಭಗವತ್ ಸ್ವರೂಪವಾದ ಬಿಂಬರೂಪವೋ ಸ್ಪಷ್ಟವಾಗಿ ತಿಳಿಯದೇ ಅರಿಯದಂತಾಯಿತು.

ಶುದ್ಧ ಭಕ್ತಿಮಂತರಾದ ಧ್ಯಾನಯೋಗ ಮಾಡತಕ್ಕ ಮೋಕ್ಷಯೋಗ್ಯ ಸಜ್ಜೀವರುಗಳು, ಇಡಾ ಪಿಂಗಳಾದಿ ನಾಡಿಗತ ಗಂಗಾದಿ ತೀರ್ಥಗಳಲ್ಲಿ ಮಿಂದು, ಶುದ್ಧಮನಸ್ಕರಾಗಿ ಹೃದಯದಲ್ಲಿ, ಶ್ರೀ ಮಧ್ವಾಂತರ್ಯಾಮಿ ಶ್ರೀ ಹರಿಯ ಸುಸ್ವರೂಪವನ್ನೇ ಚಿಂತನೆ ಮಾಡಬೇಕೆಂಬ ಪ್ರಮೇಯವನ್ನು ರೂಪಕಾಲಂಕಾರದೊಡನೇ ಶ್ರೀ ದಾಸಾರ್ಯರು ವರ್ಣಿಸಿರುವರು. ಶ್ರೀ ವಿಜಯದಾಸರ ನಿಜಮರ್ಮವನ್ನರಿತ ಅವರ ಗೂಢ ದಾಸರೇ ನಿಜವು.

**ಶ್ಲೋಕ ||** **ಅಪರಿಮಿತಮುನೀಷಸ್ಯೋಲ್ಲಸಚ್ಛಂಖ ಬಾಹೋ |**
**ರಥಚರಣಿ ಶಿಲಾನಾಂ ತನ್ಮತೋsತ್ರಾಭಿಷೇಕಮ್ ||**
**ಪ್ರತತಿನವ ಉದಾರಾಸ್ತಾಸ್ವಲಂ ಸನ್ನಿಧಾತು— |**
**ಸ್ತನವ ಇವ ವಿರೇಜುಃ ಪಾಂಚಜನ್ಯಪ್ರಿಯಸ್ಯ || ೨೮ ||**

ವಾರ್ಧಿಕ || ಸ್ನಾನ ನಂತರ ತಟಾಕದಿ ತೀರ್ಥನಿರ್ಮಾಲ್ಯ |
ಪಾನ ಮಾಡಲು ಮಧ್ವರಥ ಚರಣ ಶಿಲೆಗಳಿಗೆ |
ತಾನು ಅಭಿಷೇಕವಂ ಮಾಡಲು ಸುಕಾಂತಿಯುತ
ಶಂಖ ಬಲಕರದಿ ಧರಿಸಲ್ ||

ಮಾನೀಷರಪರಿಮಿತರುತ್ಕೃಷ್ಟ ಪ್ರತಿಬಿಂಬ |
ಭಾನುಪ್ರಕಾಶ ಶಿಲೆ ಶಾಲಗ್ರಾಮದಿ ಬೀಳೆ |
ದಾನವಾರಿಯು ಪಾಂಚಜನ್ಯಪ್ರಿಯ ತತ್ರ ಸನ್ನಿಹಿತ
ರೂಪ ತೆರಶೋಭಿಸೆ || ೨೮ || ೭೮೨ ||

ಭಾವಾರ್ಥ:— ಸ್ನಾನ ನಂತರದಲ್ಲಿ ಶ್ರೀ ಸರ್ವಜ್ಞರು ನಿರ್ಮಾಲ್ಯ-ತೀರ್ಥವನ್ನು ಮಾಡಿದ ಕ್ರಮವನ್ನೂ ಅಗ್ಗೆ ಅವರ ಶೋಭೆಯನ್ನೂ ಉತ್ಪ್ರೇಕ್ಷದೊಡನೆ ವರ್ಣಿಸುವರು.

ಶ್ರೀ ಸರ್ವಜ್ಞರು ಸ್ನಾನ ಮಾಡಿದ ನಂತರ ಚನ್ನಾಗಿ ವೈರೆಸಿಕೊಂಡು ಕಾವೀ ಶಾಟಿಯನ್ನುಟ್ಟು ಆ ಸರೋವರದ ದಂಡಿಯಲ್ಲಿ ಆಸನದ ಮೇಲೆ ಕುಳಿತು, ಶ್ರುತ್ಯುಕ್ತಾನುಸಾರವಾಗಿ ನಿರ್ಮಾಲ್ಯ ತೀರ್ಥ ವನ್ನು ತೆಗೆದುಕೊಳ್ಳಲು, ರಥಚರಣ=ರಥಗಳಿಗೆ ಪಾದರೂಪವಾದ ಚಕ್ರಗಳು ಯಾವ ಶಿಲೆಯಲ್ಲಿ ಭಗವಂತನಿಗೆ ನಿತ್ಯ ಸನ್ನಿಹಿತವಾಗಿರುವವೋ ಅಂಥ ಶಾಲಗ್ರಾಮ ಶಿಲೆಗಳಿಗೆ, ತಾನು=ಶ್ರೀ ಮಧ್ವರು ತಾವು ಸ್ವತಃ ಅಭಿಷೇಕ ಮಾಡಲು, ಅತಿ ಕಾಂತಿಯುಕ್ತವಾಗಿ ಶುಭ್ರವಾಗಿ ಶೋಭಿಸುವ ಬೆಳ್ಳನ ಶಂಖ ವನ್ನು ಬಲಕೈಯಲ್ಲಿ ತೆಗೆದುಕೊಳ್ಳಲು ಅಪರಿಮಿತ ಮಾನೀಷ (ಮನೀಷ) ಬಹಳ,=ಪೂರ್ಣ ಬುದ್ಧಿ ಮಂತರಾದ ಶ್ರೀ ಪೂರ್ಣಪ್ರಜ್ಞರ, ಉತ್ಕೃಷ್ಟ=ಶ್ರೇಷ್ಠವಾದ ಪ್ರತಿಬಿಂಬ=ದೇಹದ ಛಾಯಾ, ಭಾನು ಪ್ರಕಾಶ ಶಿಲೆ=ಸೂರ್ಯ ಪ್ರಕಾಶದಂತೆ ಥಳಥಳ ಹೊಳೆಯುವ, ಅಥವಾ ಸೂರ್ಯ ಪ್ರಕಾಶದಿಂದ ಹೆಚ್ಚಾಗಿ ಹೊಳೆಯುವ ಶಾಲಗ್ರಾಮ ಶಿಲೆಯ ಮೇಲೆ ಬೀಳಲು; ಆ ಶಾಲಗ್ರಾಮ ಶಿಲೆಯಲ್ಲಿ ಅತ್ಯಂತ ಬಾಗಿ ನಿತ್ಯ ಸನ್ನಿಹಿತನಾದ ಪಾಂಚಜನ್ಯ ಶಂಖವನ್ನು ಕರದಿ ಧರಿಸಿದ, ದಾನವರಿಗೆ ಶತ್ರುವಾದ ಶ್ರೀ ಹರಿಯ ರೂಪದಂತೆಯೇ ತೋರಿತು.

ಇಲ್ಲಿ ಶ್ರೀ ಮಧ್ವರೂಪಕ್ಕೂ ಶ್ರೀ ಹರಿಯ ರೂಪಕ್ಕೂ ಐಕ್ಯವೆಂದು ಭ್ರಮಿಸಬಾರದು. ಮಧ್ವ ಹರಿ ರೂಪಗಳು ನಿತ್ಯವಾಗಿ ಬೇರೆ ಬೇರೆ ಇರುವವು. ಆದರೂ, ಸಕಲ ಜಗತ್ತಿನಲ್ಲಿ ಪ್ರಾಣಾಂತರ್ಯಾಮಿ ಶ್ರೀ ಹರಿ ರೂಪಗಳೇ ವ್ಯಾಪಿಸಿ ವ್ಯಕ್ತನಾಗಿರುವವು. ಮತ್ತು ಈ ಪ್ರಕಾರ ಧೇನಿಸುವವರಿಗೆ ಮೊದಲು ಶ್ರೀ ಮಧ್ವ=ಪ್ರಾಣ ರೂಪದರ್ಶನವಾಗಿ, ಅನಂತರ ಪ್ರಾಣನಾಮಕ ಬಿಂಬನ ಸಂದರ್ಶನವಾಗುವದು ಸಹಜ. ಮತ್ತು ಶ್ರೀಮನ್ ಮಧ್ವರ ಮೂಲ ರೂಪವಾದ ಶ್ರೀ ಮುಖ್ಯ ಪ್ರಾಣರೂಪವು ಶಂಖಚಕ್ರಧಾರಿ ಶ್ರೀ ಹರಿಗೆ ಮುಖ್ಯ ಪ್ರತಿಬಿಂಬವಾದ ಕಾರಣ ಬಿಂಬರೂಪನಾದ ಶಾಲಗ್ರಾಮ ಸನ್ನಿಹಿತ ಶ್ರೀಹರಿ ರೂಪ ದಂತೆ ತೋರಿದ್ದು ಆಶ್ಚರ್ಯವಲ್ಲ.

ಶ್ಲೋಕ|| ಅಭಿದಧತಿ ಮುನೀಂದ್ರಾ ದ್ವಾದಶಾಬ್ದೋಪವಾಸ |
ಪ್ರತಿಮಫಲಮಲಂ ಯತ್ಸೇವನಂ ಭಕ್ತಿಯುಕ್ತಮ್ ||
ಅಧಿಕ ಮಮರನದ್ಯಾದ್ಯಾಪ್ಲವಾದನ್ಯ ಮಾನ್ಯಾ |
ದಪಿಬದಲವಬೋಧೋ ವಿಷ್ಣುಪಾದೋದಕಂ ತತ್ || ೨೯ ||

ವಾರ್ಧಿಕ|| ಮುನಿವರರು ಅತಿ ಭಕುತಿಯಿಂ ಯಾವ ಶ್ರೀವಿಷ್ಣು |
ವಿನ ಸುಪಾದೋದಕಂ ಶಾಲಗ್ರಾಮದ ತೀರ್ಥ |
ವನು ಪ್ರಾಶನಂ ಮಾಡೆ ವಿಧಿವತ್ತು ಹನ್ನೆರಡು ವರ್ಷ ಉಪವಾಸಗೈದ||

ಅನಶನಂ ವ್ರತಫಲಕೆ ಸರಿ ಧನ್ಯ ಮಾನ್ಯರಿಂ |
ದನಿತೆ ಗಂಗಾದ್ಯಲ್ಲ ತೀರ್ಥ ಮಜ್ಜನದಧಿಕ |
ಘನ ಫಲವಿದೆಂದು ಪೇಳುವರಿಂಥ ಮಹಮಹಿಮೆಯಾ
ತೀರ್ಥಪಾನ ಮಾಡ್ದರ್ ॥ ೨೯ ॥ ೭೮೩ ॥

**ಭಾವಾರ್ಥ:—** ಶ್ರೀ ಸರ್ವಜ್ಞರು ಶಂಖಪೂರಿತ ವಾರಿಯಿಂದ, ಶಾಲಗ್ರಾಮ ಶಿಲೆಗಳಿಗೆ ಅಭಿಷೇಕ ಮಾಡಿ, ನಿರ್ಮಾಲ್ಯ ತೀರ್ಥ ಪ್ರಾಶನ ಮಾಡಿದ ಕ್ರಮವನ್ನು ಹೇಳುತ್ತಾರೆ.

ಮುನಿಶ್ರೇಷ್ಠರಾದ ಯಾವ ಋಷಿಗಳು ಮಹಾ ಭಕ್ತಿಪೂರ್ವಕವಾಗಿ ಶ್ರೀ ವಿಷ್ಣುವಾದ ಶ್ರೀ ಹರಿಯ ಪಾದೋದಕ, ಶಾಲಗ್ರಾಮ ತೀರ್ಥ ( ಸೇವಿಸಿ ) ಪಾನ ಮಾಡುವರೋ, ವಿಧಿಪೂರ್ವಕವಾಗಿ ಹನ್ನೆರಡು ವರುಷ ಅನ್ನವಿಲ್ಲದೇ ಉಪವಾಸ ಮಾಡಿದ ಅನಶನ ವ್ರತಕ್ಕೆ ಬರುವ ಫಲ ಯಾವುದೋ, ಅದಕ್ಕೆ ಸರಿಯಾದ ಪುಣ್ಯ ಬರುವದೆಂದು ಹೇಳುತ್ತಾರೋ, ಮತ್ತು ಧನ್ಯ ಮಾನ್ಯ=ಮಹಾತ್ಮರಾದ ರುದ್ರಾದಿ ದೇವತೆಗಳಿಂದ, ಆದರಣೀಯವಾದ ಶ್ರೀಹರಿ ಪಾದೋದಕರೂಪ, ಗಂಗಾದಿ ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದಕಿಂತಲೂ ಹೆಚ್ಚಿನ ಫಲ ಬರುತ್ತದೆಂದು ಹೇಳುತ್ತಾರೋ, ಅಲವಬೋಧರು ಇಂತಹ ಮಹಾ ಮಹಿಮೆಯುಳ್ಳ ನಿರ್ಮಾಲ್ಯ ತೀರ್ಥವನ್ನು ಪಾನಮಾಡಿದರು. ಇದು ವೇದದಲ್ಲಿಯೂ ಪುರಾಣಗಳಲ್ಲಿಯೂ ಪ್ರಸಿದ್ಧ.

" ತ್ರಿರಾತ್ರ ಫಲದಾನದ್ಯೋಯಾಃ ಕಾಶ್ಚಿದ ಸಮುದ್ರಗಾಃ ।
ಸಮುದ್ರಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥
ಷಣ್ಮಾಸ ಫಲದಾ ಗೋದಾ, ವತ್ಸರಸ್ಯ ತು ಜಾನ್ಹವೀ ।
ದ್ವಾದಶಾಬ್ದೋಪವಾಸಶ್ಚ ವಿಷ್ಣು ಪಾದೋದಸೇವನಮ್ ॥ "

"ಯಾನಿಕಾನಿ ಚ ತೀರ್ಥಾನಿ, ಬ್ರಹ್ಮಾಂಡಾಂತರ್ಗತಾನಿ ಚ। ವಿಷ್ಣು-ಪಾದೋದಕಸ್ಯೈತೇ ಕಲಾನಾರ್ಹಂತು ಷೋಡಶೀಮಿತ್ಯಭಿದಧತಿ.'' ಎಂದು ಪುರಾಣ ವಚನಗಳು ( ಭಾವಪ್ರಕಾಶಿಕೆ ) ಈ ಶ್ಲೋಕಾರ್ಥ ಪ್ರತಿಪಾದಕ ಶ್ರೀ ಮದಣು ಮಧ್ವವಿಜಯ ಶ್ಲೋಕ ೧೪ '' ಸ್ನಾತೋ ದೇವಾಭಿಷಿಕ್ತಾ '' ಎಂಬುವ ಶ್ಲೋಕಕ್ಕೆ ಶ್ರೀ ಶ್ರೀ ರಘುವರ್ಯತೀರ್ಥರು ಬರೆದ ಪುರಾತನ ಟಿಪ್ಪಣಿಯಲ್ಲಿ ಮೂಲ ಶ್ಲೋಕಗಳಲ್ಲಿ ನಿರ್ಮಾಲ್ಯ ತೀರ್ಥವೆಂಬ ಶಬ್ದಗಳಿರದೇಯಿದ್ದರೂ, ನಿರ್ಮಾಲ್ಯ ತೀರ್ಥವೆಂದೆಯೆ ಅರ್ಥ ಮಾಡಬೇಕು. ಏಕೆಂದರೆ ಮುಂದೆ ಇದೇ ಸರ್ಗದ (೩೪) ಶ್ಲೋಕದಲ್ಲಿ ಶ್ರೀ ದೇವರಿಗೆ ಸ್ವಾದೋದಕಪೂರಿತವಾದ ಮಹಾ ಅಭಿಷೇಕ ಷೋಡಶೋಪಚಾರ ಪೂಜೆ ವಿಸ್ತಾರವಾಗಿ ಹೇಳಿರುವರು. ಕಾರಣ ಇಲ್ಲಿ ನಿರ್ಮಾಲ್ಯ ತೀರ್ಥ ಮಾಡಿ ಶ್ರುತಿ ಪ್ರತಿಪಾದ್ಯರಾದ ಮಧ್ವರು ತೀರ್ಥಪ್ರಾಶನ ಮಾಡಿದರೆಂದು ಶ್ರೀ ಸ್ವಾದಿ ಗುರುರಾಜರು ರಚಿಸಿದ ಯುಕ್ತಿ ಮಲ್ಲಿಕಾ ಗ್ರಂಥ ಫಲ ಸೌರಭದಲ್ಲಿ ಉದಹರಿಸಿದ " ಶ್ರೀ ವಿಷ್ಣು ಸೂಕ್ತಗತವಾದ ಶ್ರುತಿಯನ್ನ ಪ್ರಮಾಣವಾಗಿ ಕೊಟ್ಟಿರುವರು.

ವೇದ ಋಚ ಶ್ರುತಿ.

ಓಂ ತದಸ್ಯ ಪ್ರಿಯ ಮಭಿ ಪಾಥೋ
ಅಸ್ಯಾಂ ನರೋಯತ್ರ ದೇವಯುವೋ ಮದಂತಿ ॥
ಉರುಕ್ರ ಮಸ್ಯ ಸಹಿ ಬಂಧುರಿಥ್ಥಾ
ವಿಷ್ಣೋಃ ಪದೇ ಪರಮೋ ಮಧ್ವ ಉತ್ಸಃ ॥

ಪದಪಾಠ=ತತ್ – ಅಸ್ಯ – ಪ್ರಿಯಂ – ಅಭಿಪಾಥಃ – ಅಸ್ಯಾಂ – ನರಃ – ಯತ್ರ – ದೇವಯವಃ-ಮದಂತಿ- ಉರುಕ್ರಮಸ್ಯ-ಸಃ-ಹಿ-ಬಂಧುಃ- ಇಥ್ಥಾ-ವಿಷ್ಣೋಃ - ಪದೇ-ಪರಮೇ- ಮಧ್ವ-ಉತ್ಸಃ॥
ಅನ್ವಯಸ್ತು=ಪ್ರಿಯತತ್, ಅಸ್ಯ ಅಭಿಪಾಥಾ, ನರಃ, ಅಹಂ, ಅಸ್ಯಾಂ, ಯತ್ರದೇವಯವಃ, ಮದಂತಿ ಪರಮೇ ವಿಷ್ಣೋಃ ಪದೇ ಉತ್ಸಃ ಸಹ ಇಥ್ಥಾ ಉರುಕ್ರಮಸ್ಯ ಬಂಧುರ್ಹಿ ||

ಅರ್ಥ:— ಪ್ರಿಯಂ = ಸಕಲ ಶ್ರುತಿ ಸ್ಮೃತಿನಾಂ ತತ್ವಪ್ರವರ್ತಕ ಮುನೀನಾಂ ಚ ಹರ್ಷಕರಂ ತತ್ = ಅಕಾಲೇ ಮೃತ್ಯುಮಥನ, ಮಿತ್ಯಾದೋ ಪ್ರಸಿದ್ಧಂ, ಅಸ್ಯ = ನಾರಾಯಣಸ್ಯ, ಅಭಿಪಾಥಃ = ೨ ಸರ್ವಾಂಗೇಷ್ವಭಿಷಿಕ್ತಂ ತೀರ್ಥೋದಕ ಮಿತ್ಯರ್ಥ, ೨ ೧ ಅಭಿತಃ ಸರ್ವಾಂಗೇಷು ಸಮ್ಮದ್ಧಂ ಪಾದ ಉದಕಂ ಶಿರ ಆದಿ ೧ ( ನರಃ ಅಹಂ ಅಧ್ಯಾರ) ನರಃ ಅಹಂ = ಅಸ್ಯಾಂ ಪಾನಂ ಕುರ್ಯಾಂ, ಅಂತಃ ಶುದ್ಧೇರೇವ ಮುಖ್ಯತ್ವಾದಶ್ಯಾಮಿತ್ಯುಕ್ತಂ, ಯತ್ರ ವಿಷ್ಣ್ವಂಗ ಸಂಬಂಧೇನಾತಿ ಪಾವಿತ ತೀರ್ಥೇ ದೇವಯವಃ=ಬ್ರಹ್ಮರುದ್ರಾದ್ಯಾ ದೇವಾಃ ವೇದಿಕೋ ದೇವ ಪದಪರ್ಯಾಯೋ ದೇವಯು ಶಬ್ದೋಯಂ ದೇವಂ=ನಾರಾಯಣಂ ಪರಿವಾರತಯಾ ಯುಂಜತೀತಿವ್ಯುತ್ಪತ್ಯಾವಾ ದೇವಯವಃ, – ( ದೇವಯವ= ದೇವಯುಃ= ಇಯು ವೈದಿಕ ಶಬ್ದಃ ) ಮದಂತಿ = ಹರ್ಷಂ ಕುರ್ವಂತಿ, ದೇವಾನಾಮಪಿ ಪಾನಾದಿನಾ ಹರ್ಷಕರೇ ವಿಷ್ಣು ಪಾದೋದಕೇ ಮನುಷ್ಯಾಣಾಂ ಕೈಮುತ್ಯದ್ಯೋತನಾಯೇದಮುದಿತಂ, ಏವಂಚ ಬ್ರಹ್ಮಾದಿ ಮನುಷ್ಯಾಂತ ಸಕಲ ವೈಷ್ಣವಾನಾಂ ವಿಷ್ಣು ಪಾದೋದಕ ಪ್ರಾಶನಂ ವಿಹಿತಮಿತಿಶ್ರುತೇರಭಿಪ್ರಾಯಃ । ದೇವಾನಾಂ ವಿಷ್ಣು ಪಾದೋದಕ ಸೇವನಂ ಪ್ರತ್ಯಕ್ಷೇಣ ದರ್ಶಯಿತುಂ ಸಕಲ ದೇವೋತ್ತಮ ಮುಖ್ಯ ಪ್ರಾಣಾವತಾರ ಮಧ್ವಸ್ಯ ವಿಷ್ಣು ಪಾದೋದಕೇ= ಪ್ರೀತಿಂ ಪ್ರತಿಪಾದಯಿತುಂ ಶ್ರುತೇರುತ್ತರಾರ್ಧಂ ಪ್ರವೃತ್ತಂ ॥ ಪರಮೇ = ಉತ್ತಮೇ, ವಿಷ್ಣೋಃ= ನಾರಾಯಣಸ್ಯ, ಪದೇ= ಪಾದೇ,ಉತ್ಸ= ಉತ್ಸುಕಃ, ಸಃ = ಪ್ರಸಿದ್ಧ ಮಧ್ವಮುನಿ, ಇಥ್ಥಾ ಇಥ್ಥಂ=ಪೂರ್ವೋಕ್ತ ರೀತ್ಯಾ ವಿಷ್ಣು ಪಾದೋದಕ ಪ್ರಾಶನೇನ, ಉರುಕ್ರಮಸ್ಯ = ಉತ್ಕೃಷ್ಟ ಪಾದವಿಕ್ಷೇಪ ಸಹಿತಸ್ಯ ತ್ರಿವಿಕ್ರಮಸ್ಯ, – ಬಂಧುರ್ಹಿ = ಪುತ್ರತ್ರಯಾ ಶಿಷ್ಯತಯಾಚ, ಬಂಧುರ್ಜಾತೋಹಿ । ಹೀತ್ಯನೇನಾಸ್ಮಿನ್ನರ್ಥೇ ಶ್ರುತಿಸ್ಮೃತಿ ಪ್ರಸಿದ್ಧಿಂ ದರ್ಶಯತಿ ।

ಭಾವಾರ್ಥ:— ಸಕಲ ವೇದ ಪುರಾಣಾದಿಗಳ ಅಭಿಮಾನಿ ದೇವತಾ, ಹಾಗು ಅವುಗಳನ್ನು ಪ್ರವರ್ತಿಸುವೋ ಮುನಿಗಳಿಗೆ ಹರ್ಷಕರವಾದ, ಅಕಾಲ ಮೃತ್ಯು ಪರಿಹಾರಕವಾದ ನಾರಾಯಣನ ಸರ್ವಾಂಗ ಅಭಿಷಿಕ್ತ ಪಾದೋದಕವನ್ನು ಜೀವನಾದ ನಾನು ಅಂತಃಕರಣ ಶುದ್ಧಿಗೋಸ್ಕರ ಪಾನ ಮಾಡುತ್ತೇನೆ. ಈ ಪಾದೋದಕದಲ್ಲಿ ಬ್ರಹ್ಮಾದಿ ದೇವತೆಗಳು ಮನವಿಟ್ಟು ಹರ್ಷ ಪಡುತ್ತಾರೆ. ನಾರಾಯಣನ ಉತ್ತಮ ಪಾದಯುಗ್ಮದಲ್ಲಿ ಔತ್ಸುಕ್ಯವುಳ್ಳ ವೇದ ಪ್ರಸಿದ್ಧನಾದ ಮಧ್ವ ಮುನಿಯು ಪೂರ್ವ ಕಲ್ಪದ ದೇವತೆಗಳ ಪದ್ಧತಿಯನುಸಾರ ಶ್ರೀ ವಿಷ್ಣು ಪಾದೋದಕ ಪ್ರಾಶನದಿಂದ, ಉತ್ಕೃಷ್ಟ ಪಾದ ವಿಕ್ಷೇಪವುಳ್ಳ ತ್ರಿವಿಕ್ರಮ ದೇವರ ಮಗನಾಗಿ ಶಿಷ್ಯನಾಗಿ ದಾಸನಾಗಿ ಬಂಧುವೆಂದೆನಿಸಿಕೊಂಡನೆಂಬೋ ಈ ಸಂಗತಿಯು ಶ್ರುತಿ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವದು.

ಕಾರಣ ಸತ್ಸಂಪ್ರದಾಯ ಪ್ರವರ್ತಕರಾದ ವೇದ ಪ್ರಸಿದ್ಧರಾದ ಮಧ್ವ ಮುನಿಗಳಾಚರಿಸಿದಂತೆ, ಪ್ರತಿಯೊಬ್ಬ ಮೋಕ್ಷ ಯೋಗ್ಯ ಜೀವರು, ನಿತ್ಯ ಸ್ನಾನಾನಂತರ ಅವಶ್ಯವಾಗಿ ನಿರ್ಮಾಲ್ಯ ತೀರ್ಥ ಪ್ರಾಶನ ಮಾಡಬೇಕು. ಆ ಕಾಲದಲ್ಲಿ ಈ ಶ್ರುತಿಯನ್ನು ಅರ್ಥಾನುಸಂಧಾನ ಪೂರ್ವಕ ಉಚ್ಚರಿಸಬೇಕು. ಎಂದು ಪೂರ್ವಾಚಾರ್ಯರ ಮತವಿದೆ. ಕಾರಣ ಸರ್ವ ಬ್ರಾಹ್ಮಣರು ಈ ಶ್ರುತಿಯನ್ನು ನಿತ್ಯ ಉಚ್ಚರಿಸಿ ಶ್ರೀ ಮಧ್ವಮುನಿಗಳ ಕರುಣೆಗೆ ಪಾತ್ರರಾಗಬೇಕು.

ಶ್ಲೋಕ ॥ ತರಣಿಭಿರಿವ ಗೌರ್ಯೈರೂರ್ಧ್ವಪುಂಡ್ರೈರ್ದ್ವಿಷಡ್ಭಿಃ ।
ಸದರ ಪರಮ ಚಕ್ರೋದೀರ್ಣತೇಜಾಹರೀಷ್ಟಃ ॥
ಮುರರಿಪು ವಿಮುಖಾನಾಂ ದುಸ್ಸಹೋ ದೇಹಭಾಜಾಂ ।
ಲಯಸಮಯ ಇವಾನ್ಯೋ ಮಾನ್ಯಧೀರಾ ಬಭಾಸೇ ॥ ೩೦ ॥

ಸಾರ್ಥಿಕ ॥ ತಾನೂರ್ಧ್ವ ಪುಂಡ್ರ ತಿಲಕವ ಧರಿಸೆ ಮಧ್ವಾರ್ಯ ।
ಭಾನು ದ್ವಿಷಡರಂತೆ ಶುಭ್ರ ದ್ವಾದಶನಾಮ ।
ಮೇಣು ಅರಿದರ ಚಿನ್ಹೆ ಪರಮಕಾಂತಿಯಲಿಂದ ಶೋಭಿಸಿದ
ರೇವೇಳ್ವೆನೊ ॥
ತಾನು ಹರಿಗಿಷ್ಟ ಸುಜನೇಷ್ಟಂ ಮುರರಿಪು ವಿಮು
ಖಾನುಗಳಿಗತಿ ದುಸ್ಸಹದ ತಮವ ಪೊಂದಿಸಲು ।
ಮಾನ್ಯ ಧೀರಾ ರನ್ಯಲಯ ದೋಲ್ ಪ್ರಕಾಶಿಸಿದ
ದ್ವಿದಶರವಿಯಿಂ ಕೂಡಿದ ॥ ೩೦ ॥ ೭೮೪ ॥

ಭಾವಾರ್ಥ:— ಸ್ನಾನಾಂಗ ನಿರ್ಮಾಲ್ಯತೀರ್ಥ ಪ್ರಾಶನನಂತರ, ಶ್ರೀ ಸರ್ವಜ್ಞರು ದ್ವಾದಶನಾಮ ಮುದ್ರೆಗಳನ್ನು ಹಚ್ಚಿಕೊಂಡ ಶೋಭೆ ವರ್ಣಿಸುತ್ತಾರೆ. ನಿರ್ಮಾಲ್ಯತೀರ್ಥ ಪಾನ ಮಾಡಿದ ನಂತರ, ತಾನು=ಶ್ರೀಮದಾಚಾರ್ಯರು, ಗೋಪೀಚಂದನದಿಂದ ಊರ್ಧ್ವಾಕಾರವಾಗಿ ತಿಲಕ ಹನ್ನೆರಡು ನಾಮಗಳನ್ನು ಹಚ್ಚಿಕೊಂಡು ಮೇಲೆ ಅರಿ=ಚಕ್ರ, ದರ=ಶಂಖ, ಮೊದಲಾದ ಮುದ್ರೆಗಳನ್ನು ಧಾರಣ ಮಾಡಿದರು. ಈ ಊರ್ಧ್ವ ಪುಂಡ್ರ ದ್ವಾದಶನಾಮ ಶಂಖ ಚಕ್ರ ಲಾಂಛನಾಭಿವೃದ್ಧಿಯಿಂ ಶೋಭಿಸಿದ್ದು ಅಹೋ ನಾನು ಪೇಳಲಿ ! ಶ್ರೀ ಮಧ್ವರು ತಾವು ಹರಿಗಿಷ್ಟ=ಹರಿಯ ಚಕ್ರದಿಂದ ಪ್ರವೃದ್ಧ ತೇಜಸ್ಸುಳ್ಳವರಾದ ಕಾರಣ ತಾವು ಶ್ರೀ ಹರಿಗೆ ಇಷ್ಟರಾಗಿಯೂ, ಇಂಥ ಉತ್ತಮ ಚಿನ್ಹಗಳನ್ನು ನೋಡಿದ ಸುಜನರಿಗೆ ಅವರ ಮನೋಭೀಷ್ಟ ಫಲವನ್ನು ಕೊಡುವವರೂ, ಮುರರಿಪುವಿಮುಖನಾಂ=ಶ್ರೀ ಹರಿಗೆ ವಿಮುಖ=ಹಿಂದುರಿಗಿದ, ಬೇಡಾದ ದುರ್ಜನರಿಗೆ ವಿರೋಧಿಗಳಾಗಿಯೂ, ( ಭಗವಂತನಲ್ಲಿ ದ್ವೇಷ ಮಾಡುವ ದುರ್ಜನರು ಈ ಶಂಖ ಚಕ್ರ ಧರಿಸಿದ ಶ್ರೀ ಮಧ್ವರನ್ನು ನೋಡಿ ಸಹಿಸಲಿಲ್ಲ. ) ಕಾರಣ ದುರ್ಜನರಿಗೆ ಅಪ್ರಿಯರಾಗಿಯೂ, ಮಾನ್ಯಧೀ = ಪ್ರಮಾಣಜನ್ಯವಾದ ಯಥಾರ್ಥ ಬುದ್ಧಿಯುಳ್ಳವರು. ಅಥವಾ ಮಾನ್ಯಧೀ=ಸರ್ವರಿಂದ ಆದರಣೀಯವಾದ ಬುದ್ಧಿಯುಳ್ಳ ಶ್ರೀ ಪೂರ್ಣ ಪ್ರಜ್ಞರು, ಅನ್ಯ= ಎರಡನೇ ಪ್ರಲಯ ಕಾಲದಂತೆ ( ದ್ವಾದಶ ನಾಮಗಳೆಂಬ ) ದ್ವಾದಶ ಸೂರ್ಯರಿಂದ ಸಹಿತರಾಗಿ ಶೋಭಿಸಿದರು. ಲಯಕಾಲದಲ್ಲಿಯೂ ಸಹ ಹನ್ನೆರಡು ಜನ ಸೂರ್ಯರು ಏಕದಾ ಉದಯವಾಗುವರು. ಮತ್ತು ಲೋಕಸಂಹಾರಕ್ಕಾಗಿ ಸುದರ್ಶನ ಚಕ್ರ ತೇಜಸ್ಸಿನ ಕಾಂತಿಯುಕ್ತವಾದುದು. ಕಾಲವು ಜಡ ಕಾಲ ನಿಯಾಮಕನಾದ ಶ್ರೀ ಹರಿಯ ಸತ್ಯ ಸಂಕಲ್ಪಾನುಸಾರ ಪ್ರವೃತ್ತಿಸುವ ಕಾರಣ ಶ್ರೀ ಹರಿಗೆ ಇಷ್ಟವಾದದ್ದು ಮತ್ತು ಅಂಧಃತಮಸ್ಸಿಗೆ ಯೋಗ್ಯರಾದ ವಿಷ್ಣು ದ್ವೇಷಿಗಳಿಗೆ ಸಹಿಸಲಸಾಧ್ಯವಾದುದು. ಶ್ರೀಹರಿವಾಯುಗಳಲ್ಲಿ ದ್ವೇಷ ಪರಿಪಾಕಾ ನಂತರ ಪ್ರತಿದಿನ ಕಲ್ಪದಲ್ಲಿ ಒಂದೊಂದು ಅಂಶಗಳಿಂದ ನಿತ್ಯ

ನರಕಗಳ ಸಮೀಪದಲ್ಲಿ ಬಿದ್ದ ದೈತ್ಯರ, ಎಲ್ಲ ಅಂಶಗಳು ಮಹಾಪ್ರಳಯ ಕಾಲದಲ್ಲಿ ಏಕವಾಗಿ ನಿತ್ಯ ನರಕವಾದ ಅಂಧಂತಮಸ್ಸಿಗೆ ಬೀಳುವುದು, ಇದು ಪ್ರಸಿದ್ಧವಾದದ್ದು. ಹೀಗೆ ಬೇರೆ ಲಯಕಾಲ ಕಾಲದಂತೆ ಶ್ರೀ ಸರ್ವಜ್ಞರು ಶೋಭಿಸಿದರು.

**ಶ್ಲೋಕ ॥ ಸಮಧಿಕಧಿಷಣಸ್ಯ ಪ್ರೇಕ್ಷಮಾಣೋ ಜನೌಘಃ ।**
**ಪ್ರಕೃತಿಮಧುರ ಮಾಸ್ಯ ವ್ಯಾಜಪೂರ್ಣೇಂದು**
**ಬಿಂಬಮ್ ॥**
**ಅಮುಚದಪಸರೇತಿಶ್ರಾವಕೋಕ್ತೇಃ ಪುರಾಸ್ಮಿನ್ ।**
**ಪ್ರಚಲತಿ ಪದವೀಂ ತಾಂ ಪ್ರಾಂಜಲಿಸ್ತೂರ್ಣ**
**ಮಾರಾತ್ ॥ ೩೧ ॥**

ವಾರ್ಧಿಕ ॥ ಸುಖತೀರ್ಥ ಸಮಧಿಕ ಧಿಷಣ ಪ್ರಕೃತಿ ಸುಂದರರ ।
ಮುಖ ಪೂರ್ಣ ಚಂದ್ರನಂ ನೋಡ್ವ ಜನ ಸಮುದಾಯ ।
ಅಖಿಳಜ್ಞರಾಸನದಲೆದ್ದು ತಾಂ ಮಠಕೆ ಪೋಪಾಗಲಾ
ಜನಸಂಘಕೆ ॥
ಚಕನೆ ಮಾರ್ಗವ ಬಿಡುತ ದೂರನಡೆ ರೆಂತೇಳ್ವ ।
ಸುಖರವದ ಶಿಷ್ಯರುಕ್ತಿಗೆ ಮೊದಲೆ ಜನವೃಂದ ।
ಪ್ರಕಟವಂಜಲಿಬದ್ಧನಮಿಸಿ ಜವ ದೂರಾಗಿ ಮಾರ್ಗ ಬಿಟ್ಟಿತು
ಪೂಜ್ಯಗೆ ॥ ೩೧ ॥ ೭೮೫ ॥

ಭಾವಾರ್ಥ :— ಶ್ರೀ ಸರ್ವಜ್ಞರು ಸರೋವರದಲ್ಲಿ ಸ್ನಾನಮಾಡಿ ಮಠಕ್ಕೆ ಬರುವದನ್ನು ವರ್ಣಿಸುತ್ತಾರೆ.

ಸುಖತೀರ್ಥರು= ಆನಂದದಾಯಕ ಶಾಸ್ತ್ರ ರಚಿಸಿದ ಶ್ರೀಮದಾನಂದ ತೀರ್ಥರು, ಸಮಧಿಕ-ಧಿಷಣ=ಸಮ್ಯಕ್ ಅಧಿಕಧಿಷಣ = ಸಮೀಚೀನವಾದ ಪೂರ್ಣ ಬುದ್ಧಿಯಿಂದ ಕೂಡಿದ ಪೂರ್ಣ ಪ್ರಜ್ಞಾಚಾರ್ಯರು; ಪ್ರಕೃತಿ ಸುಂದರರು=ಸ್ವಭಾವದಿಂದಲೇ ಮೂವತ್ತೆರಡು ಲಕ್ಷಣದಿಂದ ಯುಕ್ತರಾದ ಬಹು ಚಂದುಳ್ಳ ರೂಪವುಳ್ಳವರು; ಪೂರ್ಣ ಚಂದ್ರನನ್ನು ತಿರಸ್ಕರಿಸುವ ಶ್ರೀ ಸರ್ವಜ್ಞರ ಮುಖ ಚಂದ್ರನನ್ನು ನೋಡುತ್ತಲಿರುವ ಜನರ ಸಮೂಹವು, ಅಖಿಳಜ್ಞ = ಎಲ್ಲವನ್ನು ಬಲ್ಲ ಶ್ರೀ ಮಧ್ವಾಚಾರ್ಯರು, ಕುಳಿತ ಆಸನದಿಂದೆದ್ದು ತಾವು ಇರುವ ಮಠಕ್ಕೆ ಹೋಗೆ, ಸನ್ನಿದ್ಧರಾಗಿ ನಡೆಯಲು, ಆ ಜನಸಮೂಹಕ್ಕೆ ಹೆ ಜನರೇ ನೀವು ಗುರುಗಳಿಗೆ ಮಾರ್ಗ ಬಿಟ್ಟು ದೂರ ಸರಿಯಿರಿ ಎಂತ, ಸುಖರವದ= ಒಳ್ಳೆ ಶಾಂತ ವೃತ್ತಿಯ ಮಾತಿನಿಂದ ಮಧ್ವಶಿಷ್ಯರು, ಆ ಜನಗಳಿಗೆ ಹೇಳುವದಕಿಂತ ಮೊದಲಿಗೇವೆ, ಆ ಜನರ ಸಮೂಹವು ಪ್ರಕಟ=ಎಲ್ಲರಿಗೂ ತೋರುವಂತೆ ಕರಗಳನ್ನು ಜೋಡಿಸಿ ನಮಿಸುತ್ತಾ ಶೀಘ್ರವಾಗಿ ದೂರ ಸರಿದು, ಪೂಜ್ಯರಾದ ಮಧ್ವರಿಗೆ ಮಾರ್ಗವನ್ನು ಬಿಟ್ಟಿತು. ಮಹಾತ್ಮರ ಮುಖದರ್ಶನ ಪ್ರಭಾವದಿಂದಲೇ ಜನರು, ದೂರ ಸರಿದು ನಿಂತು ಮಾರ್ಗ ಕೊಡುವುದು ಮಹಾತ್ಮರ ಮಹಾ ಮಹಿಮೆ. ಮೂಲ ಶ್ಲೋಕದಲ್ಲಿ

'ಸುಖರವದ' ಎಂಬ ಶಬ್ದವಿಲ್ಲದಿದ್ದರೂ ಶ್ರಾವಕಾ, ಎಂಬ ಪದದಿಂದ ಸಚ್ಛಿಷ್ಯರು ಒಳ್ಳೇ ಮಾತನಾಡುವ ರೆಂದು ಶಾಂತರಾದ ಶಿಷ್ಯರಿಗೆ ವಿಶೇಷಣ ಕೊಟ್ಟದ್ದು ಸಮಂಜಸ ತೋರುವದಲ್ಲದೆ ಆಚಾರ್ಯರ ಕಾಲಕ್ಕೆ ಮಠದ ದಿಂಡಿಯರು ಶಾಂತವೃತ್ತಿಯುವರೆ ಇದ್ದರೆಂದು ಸೂಚಿತವಾಯಿತು. ಕಠೋರ ವಾಕ್ಯದ ಶಿಷ್ಯರಿದ್ದಿಲ್ಲ.

**ಶ್ಲೋಕ ॥ ಗುರುಚರಣಸರೋಜದ್ವಂದ್ವನಿರ್ಣೇಜನಾಂಭೋ ।**
**ದಧತಿ ಜನನಿಕಾಯೇ ಸರ್ವಮುರ್ವೀಗತಂ ಚ ॥**
**ಅವನಿರನಭಿನಂದಿ ನ್ಯಸ್ಯದಕ್ಷ್ಟಕ್ಷಮೇಽಸೌ ।**
**ಕಥಮಪಿ ಕಥಮೇವ ಸ್ಯಾತ್**
**ಕ್ಷಮಾಖ್ಯಾನ್ಯಥಾ ಸ್ಯಾಃ ॥೩೨॥**

ವಾರ್ಧಿಕ ॥ ಮಠಕೆ ಬರೆ ಗುರುಚರಣ ಕಮಲಯುಗ್ಮಕೆ ಶಿಷ್ಯ ।
ಚಟುಲದಿಂ ಪಾದಪ್ರಕ್ಷಾಲನೆಯ ಮಾಡೆಜನ ।
ಕಟಕ ಭೂಮಿಲಿ ಬಿದ್ದ ಸರ್ವಜಲ ಗುರುಪಾದ ಪಕ್ಷಾಲ-
ನೋದಕವನು ॥
ಜಟದಿ ಧರಿಸಲು ಭುವಿಯಸಂತುಷ್ಟಳಾದಡೆಯು ।
ಪಟುತರದ ತನ್ನಲ್ಲಿಯಿದ್ದ ಪಾದೋದಕವ ।
ದಿಟದಿ ಜನ ಧರಿಸಿದಂ ಶ್ರಮದಿ ಸಹಿಸಿದಳಿಲ್ಲದೊಡೆ ಕ್ಷಮಾ
ನಾಮ ಹೇಗೆ ? ॥ ೩೨ ॥ ೭೮೬ ॥

ಭಾವಾರ್ಥ:— ಶ್ರೀ ಸರ್ವಜ್ಞರು ತಟಾಕದಿಂದ ಸ್ನಾನಮಾಡಿ ಮಠಕ್ಕೆ ಬರಲು, ಮಠ ಪ್ರವೇಶ ಮಾಡುವ ಕಾಲದಲ್ಲಿ ಧೂಳಯುಕ್ತ ಪಾದಗಳನ್ನು ಶಿಷ್ಯನು ತೊಳೆದದ್ದನ್ನು ಬಣ್ಣಿಸುತ್ತಾರೆ.

ಚಟುಲ = ಚಂದದಿಂದ ಶ್ರೀ ಮಧ್ವರ ಎರಡೂ ಪಾದಗಳನ್ನು, ಶಿಷ್ಯನು ತೊಳೆದನು, ಆ ಗುರು ಪಾದ ಪ್ರಕ್ಷಾಲನೋದಕವನ್ನು ಜನಕಟಕ = ಜನರ ಸಮೂಹವು, ಆ ಗುರು ಪಾದ ಪ್ರಕ್ಷಾಲನೋದಕ ಸರ್ವ ಜಲವನ್ನು, ಜಟದಿ = ತಮ್ಮ ಶಿರಸ್ಸಿನಲ್ಲಿ ಧಾರಣ ಮಾಡಿದ್ದನ್ನು ನೋಡಿ, ಭೂದೇವಿಯು ಈ ಜನಗಳು ಪಾದೋದಕವನ್ನು ನನಗೆ ಒಂದು ಹನಿಯಾದರೂ ಉಳಿಸಲಿಲ್ಲವೆಂದು ಅಸಂತೋಷ ಮನಸ್ಕಳಾಗಿ; ಅಹೋ ಇಂಥ ಪಟುತರ = ಸಮರ್ಥವಾದ ಗುರು ಪಾದೋದಕವು ತನ್ನಲ್ಲಿ ಇದ್ದರೂ ತಾನು ನೋಡುತ್ತಲೇ, ದಿಟದಿ = ಧೈರ್ಯದಿಂದ ಜನರು-ಧಾರಣ ಮಾಡಿದ್ದನ್ನು ಬಹು ಕಷ್ಟದಿಂದ ಸಹಿಸಿಕೊಂಡಳು. ಇಂತಹ ಸಹನಶೀಲತೆ ಗುಣವಿದ್ದುದರಿಂದ ಭೂದೇವಿಗೆ "ಕ್ಷಮಾ" ಎಂತ ನಾಮವು ಸುಪ್ರಸಿದ್ಧವು. ಇಲ್ಲದಿರೆ ಕ್ಷಮನಾಮ ಹೇಗೆ ಕೂಡಿತು.

ನದಿ, ಸರೋವರಾದಿಗಳಿಂದ, ಸ್ನಾನಮಾಡಿ ಹಾಗೇ ಬರಬಾರದು. ಸ್ನಾನಮಾಡಿ ಒಣಗಿದ ವಸ್ತ್ರಗಳನ್ನುಟ್ಟು ನಿರ್ಮಾಲ್ಯತೀರ್ಥ ಪ್ರಾಶನಮಾಡಿ ದ್ವಾದಶನಾಮಮುದ್ರೆಗಳನ್ನು ಹಚ್ಚಿಕೊಂಡು, ಮನಿಗೆ

ಬಂದು ದ್ವಾರದ ಹೊರಗೆ ಧೂಳಿಗಾಲುಗಳನ್ನು ತೊಳೆದುಕೊಂಡು ಒಳಗೆ ಪ್ರವೇಶ ಮಾಡಬೇಕೆಂಬ ಧರ್ಮಶಾಸ್ತ್ರ ಸದಾಚಾರನಿಯಮವನ್ನು ಶ್ರೀ ಸರ್ವಜ್ಞರು ತಾವು ಆಚರಿಸಿ ತೋರಿಸಿ ಸದಾಚಾರ ಸ್ಮೃತಿಯನ್ನು ರಚಿಸಿದ ಸಮರ್ಥರು.

**ಶ್ಲೋಕ ॥ ಅವಿದಿತರಸಭೇದಂ ಶೀತಲಂ ಲಘ್ವಗಂಧಂ ।**
**ವಿಮಲಮಮಲಪಾಣಿಃ ಪಾಣಿಜೈರಸ್ಪ್ರವಿಷ್ಟಮ್ ॥**
**ವದನಪವನಭೀತ್ಯಾ ಪಾರ್ಶ್ವತೋ ಬಿಭ್ರದಗ್ರ್ಯಂ ।**
**ಕಮಠಕರಕಪೂರ್ಣಂ ಸಂಯಮೀಹಾನಿನಾಯ ॥ ೩೩ ॥**

ವಾರ್ಧಿಕ ॥ ಮನದಿ ದೃಢ ಅಮಲ ಪಾಣಿಯು ಓರ್ವ ಸಂಯಮಿಯು ।
ಘನದ ಮಧ್ವರ ಪೂಜೆಕಾಲವಗ್ರ್ಯೋದಕಂ ।
ತನ ಶ್ವಾಸ ತಾಕ್ಷದೆಂಬೋ ಭಯದಿ ಜಾಗ್ರತೆಲಿ
ಪಾರ್ಶ್ವದಲಿ ಪಿಡಿದು ತಂದ ॥
ತನಿತಂಪನುಚ್ಛಿಷ್ಟ ಲಘುವು ಗುರು ದುರ್ಗಂಧ
ಗುಣದೋಷರಹಿತ ಸ್ವಚ್ಛವು ನಖದಲಸ್ಪೃಷ್ಟ
ಇನಿತು ಸೂರ್ಯೋದಯಾತ್ಪೂರ್ವ ವಿಧಿವತು ಶೋಧಿತಾ ಕಲಶ
ಪೂರಿತಜಲಂ ॥ ೩೩ ॥ ೭೮೭ ।

ಭಾವಾರ್ಥ:— ಮನೋನಿಗ್ರಹಿಗಳೂ ಜಿತೇಂದ್ರಿಯರೂ ಆದ ಒಬ್ಬ (ಸಂಯಮಿ) ಸನ್ಯಾಸಿಗಳು, ಅಮಲಪಾಣಿಯು=ಕೈಗಳನ್ನು ಸ್ವಚ್ಛವಾಗಿ ನೀರಿನಿಂದ ತೊಳೆದುಕೊಂಡು, ಘನದ=ಮಹಮಹಿಮೆಯುಳ್ಳ ಶ್ರೀಮದಾಚಾರ್ಯರ ಪೂಜಾ ಪ್ರಾರಂಭಕ್ಕೆ ಮೊದಲು, ಅಗ್ರ್ಯೋದಕಂ=ಅಗ್ರ್ಯಂ ಶ್ರೇಷ್ಠವಾದ, ಉದಕಂ=ಜಲಂ ಉತ್ತಮವಾದ ಉದಕವನ್ನು ಕಲಶ=ಗಿಂಡಿಗಳಲ್ಲಿ ತುಂಬಿಟ್ಟವು. ತನ ಮುಖದ ವಾಯು ಉಸಿರು ಬಡಿಯುವದೆಂಬ ಭಯದಿಂದ, ಬಹು ಎಚ್ಚರಿಕೆಯಿಂದ ತಮ್ಮ ಮಗ್ಗಲಿ ಹಿಡಿದುಕೊಂಡು ಬಂದರು. ಆ ಕಲಶದಲ್ಲಿ ಪೂರಿತವಾದ ಜಲವು ಬಹು ತಂಪಾಗಿಯೂ, ಅನುಚ್ಛಿಷ್ಟ=ರುಚಿ ನೋಡದೇಯಿದ್ದದ್ದು ಅಂದರೆ ಮೊದಲಾಗಿ ತುಂಬಿದ್ದು. ಬಹು=ಲಘು ಹಗುರಾಗಿರುವುದೂ ಗುರು-ಹೆಚ್ಚು ಭಾರ (ತೂಕ) ವಾಗದೇ ಇದ್ದುದೂ ಮತ್ತು ದುರ್ಗಂಧ ಗುಣಗಳೆಂಬ ದೋಷಗಳ ಇಲ್ಲದೇ ಇದ್ದುದೂ, ಮತ್ತು ಪ್ರಾತಃಕಾಲ ಸ್ನಾನ ಮಾಡಿದಾಗ್ಗೆ ಸೂರ್ಯೋದಯದಕಿಂತಲೂ ಪೂರ್ವದಲ್ಲೆ ವಿಧಿವತು=ಶಾಸ್ತ್ರದಲ್ಲಿ ಹೇಳಿದಂತೆ ದಪ್ಪಾದ ವಸ್ತ್ರದಿಂದ ೭ ಸಾರೆ ಚನ್ನಾಗಿ ಸೋಸಿ, ಕಲಶ=ಗಿಂಡಿ, ತಂಬಿಗೆ ಚಿಕ್ಕ ಮುದ್ದಾದ ಕೊಡ ಮುಂತಾದವುಗಳನ್ನು ತುಂಬಿಟ್ಟ ಅಗ್ರ್ಯೋದಕವನ್ನು ಪಾರ್ಶ್ವದಲ್ಲಿ ಹಿಡಿದು ತಂದರು. ಮೂಲ ಶ್ಲೋಕದಲ್ಲಿ ಸೂರ್ಯೋದಯಾತ್ಪೂರ್ವವೇ ತುಂಬಿದ ಅಗ್ರ್ಯೋದಕವೆಂದು ಇಲ್ಲ. ಜಲದಲ್ಲಿ ಸೂರ್ಯರಶ್ಮಿ ಬಿದ್ದರೆ ಅದರಲ್ಲಿ ತಂಪು ಗುಣವು ಕಡಿಮೆಯಾಗಿ ಉಷ್ಣ ಬರುವದು ಕಾರಣ, ಹೆಚ್ಚಾಗಿರುವ ತಂಪಾದ ಜಲ (ಶೀತಲಂ) ಎಂಬ ಪದದಿಂದ ಈ ಅರ್ಥದ್ಯೋತಕ

ನಾಗುತ್ತದೆ ಶ್ರೀ ದಾಸರಾಯರು ರಚಿಸಿರುವದು ಬಹು ಸಮಂಜಸ. "ಪೂರ್ವಾನೀತಾಗ್ರ್ಯೋದಕಾಸೀನ್ ದಕ್ಷಭಾಗೇ ವಿನಿಕ್ಷಿಪೇತ್" ಎಂದು ಶ್ರೀ ಕೃಷ್ಣಾಚಾರ್ಯರ ಸ್ಮೃತಿ ವಚನ, ಇದೇ ಅಭಿಪ್ರಾಯವನ್ನೇ ಶ್ರೀ ದಾಸಾರ್ಯರು ಪೂರ್ವಾನೀತಾಗ್ರ್ಯೋದಕಾದೀನ್. ಎಂಬುದಕ್ಕೆ ಸೂರ್ಯೋದಯಾತ್ ಪೂರ್ವದಲ್ಲಿಯೇ ತಂದಿಟ್ಟ ಅಗ್ರ್ಯೋದಕವೆಂದು ವರ್ಣಿಸಿರುವದು. ಬಹು ಸರಿಯಾದುದು.

ಈ ಪ್ರಕಾರ ಅಗ್ರ್ಯೋದಕ ತರುವದು ಬಹು ಕಷ್ಟಸಾಧ್ಯವಾದರೂ ಬಹು ಭಕ್ತಿಯಿಂದ ದೇವತಾರ್ಚನೆ ಮಾಡುವದರಲ್ಲಿ ಆದರವಿದ್ದ ಆಧ್ಯಾತ್ಮಿಕರಿಗೆ ಇದು ಬಹು ಸುಲಭವಾದುದು. ಈ ನಿಯಮವನ್ನು ಪ್ರತಿ ಒಬ್ಬರೂ ತಪ್ಪದೇ ಆಚರಿಸಬೇಕು. ಅದರಂತೆ ಫಲವಾದರೂ ದೊರಕುವದು ನಿಜ.

ಶ್ಲೋಕ ॥ ವಿಹಸಿತಬಿಸಭಂಗಶ್ರೀಪ್ರಕಷಂ ಸಿ (ಶಿ) ತಿಮ್ನಾ ।
ಜಲಜಮಮೃತಪೂರ್ಣೈಃ ಪೂರಯಾಮಾಸ ರಮ್ಯಮ್ ॥
ಸಮಯಗುಣವಿಶೇಷಾಲೋಚಕೈರ್ಲಾಲನೀಯಃ ।
ಸಸುರಭಿಸುಮನೋಭಿಃ ಸಸ್ಫುಟಂ ಗೌರಪಕ್ಷಃ ॥ ೩೪ ॥

ವಾರ್ಧಿಕ ॥ ನಿರುಮಲಂ ಶುಕ್ಲಪಕ್ಷಂ ಐಸೆ ಪ್ರಾಮಾಣ್ಯ ।
ವರ ವೈಷ್ಣವ ಸಮಯ ಸುಸಿದ್ಧಾಂತಗುಣವೈಸೆ ।
ನೆರೆ ತಿಳಿದ ದೇವತೆಗಳೈಸೆ ಜೋತಿರಭಿಜ್ಞರೈಸೆ
ಲಾಲನಿಯ ಮಧ್ವ ॥
ಪರಮ ಬಿಸಧವಳ ವಿಹಸಿತ ರಮ್ಯ ಶಂಖಚಂ- ।
ದಿರನೈಸೆ ಪರಿಮಳಸಪೂರ್ವೈಸೆ ಸುರಭಿಸಹ ।
ಸುರರೈಸೆ ಅಮೃತಕಲಿವೈಸೆ ಜಲಗಣವೈಸೆ
ಪೂರಿಸೆಭಿಷೇಕ ಗೈದರ್॥ ೩೪ ॥ ೭೬೮ ॥

ಭಾವಾರ್ಥ:— ಇಂತಹ ನಿರ್ಮಲವಾದ, ಅಗ್ರ್ಯೋದಕದಿಂದ ಪೂರಿತವಾದ ಕಲಶಾರ್ಚನೆ ಮಾಡಿ ಮಹಾಭಿಷೇಕ ಗೈದುದನ್ನು ಉತ್ಪ್ರೇಕ್ಷದೊಡನೆ ವರ್ಣಿಸುತ್ತಾರೆ.

ಇತರ ದೂಷಣಾದಿಗಳಿಲ್ಲದೆ ಪ್ರಮಾಣತ್ವೇನ ನಿರ್ಮಲವಾದ, ಶುಕ್ಲಪಕ್ಷ=ಸ್ವಚ್ಛವಾದ ವೈಷ್ಣವ ಸಿದ್ಧಾಂತವಾದುದರಿಂದ ಸ್ವಪ್ರಣೀತ ಸಿದ್ಧಾಂತ ಗುಣವಿಶೇಷಗಳು ಮತ್ತು ಈ ವೈಷ್ಣವ ಸಿದ್ಧಾಂತವು. ಶ್ರುತಿ ಸ್ಮೃತಿ ಅನುಗುಣತ್ವಾದಿ ಗುಣಗಳನ್ನು, ಹೆಚ್ಚಿಗೆ ಆಲೋಚನೆ ಮಾಡಿದ ದೇವತೆಗಳಿಂದ ಚನ್ನಾಗಿ ಲಾಲನೀಯ=ಆದರಣೀಯರಾದ ಶ್ರೀ ಮಧ್ವಾಚಾರ್ಯರು. ಪರಮ=ಉತ್ತಮವಾದ, ಧವಳ=ವಿಶೇಷವಾಗಿ ಶುಭ್ರ ವರ್ಣವುಳ್ಳ, ಬಿಸ=ಕಮಲದ ದೇಂಟನ ಮಧ್ಯದ ತಂತುವಿನ ಅತಿ ಬಿಳುಪಾದ ಕಾಂತಿಯನ್ನು, ವಿಹಸಿತ=ಅಪಹಾಸ ಮಾಡುವ, ಅಂದ=ಸುಂದರವಾದ ಅತಿ ಶುಭ್ರ ಶಂಖದಲ್ಲಿ, ಸುರಭಿ=ಸುಗಂಧಯುಕ್ತವಾದ ಸುಮನ ಹೂಗಳಿಂದ ಕೂಡಿದ, ಅಮೃತ=ಜಲಗಳಿಂದ ತುಂಬಿಸಿದರು. ದೇವಪೂಜಾ ಕಾಲದಲ್ಲಿ ಅಗ್ರ್ಯೋದಕಗಳಿಂದ ಶಂಖವನ್ನು ತುಂಬಿ ಶಾಲಿಗ್ರಾಮ ಪ್ರತಿಮಾದಿಗಳಿಗೆ ಅಭಿಷೇಕವನ್ನು ಮಾಡಿದರು. ಅದು ಹೇಗೆಂದರೆ,

ಚಂದ್ರನ ಕಲಾಭಿವೃದ್ಧಿಯ ಕಾಂತಿಯಿಂದ ಶುಭ್ರವಾಗಿ ಬೆಳದಿಂಗಳಿಂ ಶೋಭಿಸುವ ಹದಿನೈದು ದಿನವಾದ ಶುಕ್ಲಪಕ್ಷ ಮತ್ತು ಚಂದ್ರ ಕಳೆಗುಂದುವ ಕೃಷ್ಣಪಕ್ಷ ಮೊದಲಾದ ಸಮಯಗುಣ= ಕಾಲ ವಿಶೇಷ ಗುಣಗಳನ್ನು ಚನ್ನಾಗಿ ತಿಳಿದ ಜ್ಯೋತಿರಭಿಜ್ಞ= ಜ್ಯೋತಿಷ್ಯ ಶಾಸ್ತ್ರ ಬಲ್ಲವರಿಂದ, ಸಮ್ಯಕ= ಚನ್ನಾಗಿ, ಲಾಲನೀಯ= ಶುಭ ಕರ್ಮಾದಿಗಳಿಗೆ ಪ್ರಾಮಾಣಿಕವಾಗಿ ಸುಪ್ರಶಸ್ತವಾದುದೆಂದು ಆದರಣೀಯವಾದ ಶುಕ್ಲಪಕ್ಷ ಸಮಯವು, ಧವಳ= ಶುಭ್ರ ಕಾಂತಿಯಿಂದ, ಪರಮ= ಉತ್ತಮವಾದ, ಬಿಸ= ತಾವರೆ ದೇಟಿನ ಅತಿ ಬಿಳಿದಾದ ಕಾಂತಿಯನ್ನು, ವಿಹಸಿತ= ಅಪಹಾಸ ಮಾಡುವಂಥ ಸುಂದರನಾದ ಚಂದ್ರನನ್ನು, ಸುರಭಿ= ಕಾಮಧೇನುವಿನಿಂದ, ಕೂಡಿದ ದೇವತೆಗಳಿಂದ ಅಮೃತಕಲೆಗಳು ಪೂರ್ಣಗೊಳಿಸಿದವು. ದೇವತೆಗಳು ಶುಕ್ಲಪಕ್ಷ ಪ್ರತಿಪದಾ ಮೊದಲ್ಗೊಂಡು ಪೌರ್ಣಿಮೆಯ ಪರಿಯಂತ ದಿನಕ್ಕೊಬ್ಬ ದೇವತೆಗಳು ಚಂದ್ರನಲ್ಲಿ ಕಲೆಗಳನ್ನು ಹೇಗೆ ತುಂಬುವರೋ ಅದರಂತೆಯೇ ಶ್ರೀ ಸರ್ವಜ್ಞರು ಶಂಖದಲ್ಲಿ ಪರಿಮಳಯುಕ್ತವಾದ ಸ್ವಾದೋದಕವನ್ನು ತುಂಬಿ ಅಭಿಷೇಕ ಮಾಡಿದರು.

ಇದನ್ನು ದಾಸಾರ್ಯರು ಅತಿ ವಿಚಿತ್ರವಾದ ಅಲಂಕಾರದೊಡನೆ ವರ್ಣಿಸಿರುವರು. ಐಸೆ=ಅಷ್ಟೇ, ಅಂತೆ, ಹಾಗೆ, ಉಪಮಾನ-ಉಪಮೇಯ ಪದಗಳಿಗೆ ಐಸೆ ಎಂಬುವ ಪದ ಪ್ರಯೋಗಿಸುತ್ತಾ ನಿರ್ಮಲವಾದ ಶುಕ್ಲಪಕ್ಷವೊ ಪ್ರಾಮಾಣ್ಯವಾದ ವೈಷ್ಣವ ಸುಸಿದ್ಧಾಂತವೊ ! ಇಂಥ ಪ್ರಾಮಾಣ್ಯವಾದ ಶ್ರುತಿಗಳನ್ನು ಆಲೋಚಿಸಿದ ದೇವತೆಗಳೋ ಅಥವಾ, ಸಮಯಗುಣ= ಶುಕ್ಲಪಕ್ಷಾದಿ ಕಾಲ ವಿಶೇಷಗಳನ್ನು ತಿಳಿದ ಜ್ಯೋತಿರಭಿಜ್ಞರೊ= ಸ್ಪಷ್ಟವಾಗಿ ಆದರಿಸಲ್ಪಡುವ ಶುಕ್ಲಪಕ್ಷ ಕಾಲವೊ; ಅತಿ ಶುಭ್ರವಾದ ತಾವರೆಯ ದೇಟಿನ ಬಿಳಿದಾದ ಕಾಂತಿಯನ್ನು ಅಪಹಾಸವನ್ನು ಮಾಡುವ ಶಂಖವೋ ಚಂದ್ರನೋ, ಸುಗಂಧಯುಕ್ತವಾದ ಹೂವುಗಳೋ ಕಾಮಧೇನುವಿನಿಂದ ಕೂಡಿದ ದೇವತೆಗಳೋ, ಜಲಸಮೂಹವೋ, ಅಮೃತ ಕಲೆಗಳೋ ಎಂದು ಬಣ್ಣಿಸಿದ್ದು ಕವಿ ಚಮತ್ಕೃತಿಯು.

ಶ್ಲೋಕ ॥ ವಿಮಲಮಲಯಜಾಂಭೋಬಿಂದುಭಿಶ್ಚರ್ಚಿತಾಚ್ಚೋರ್ಚ |
ನವಲಲಿತತುಲಸ್ಯಾಃ (ಸ್ಯಾ) ಪುಷ್ಪರಾಜ್ಯಾರ್ಚಿಚ
(ರ್ಚಯ)ತ್ಸಃ ॥
ಸ್ಥಲಜಜಲಜವಲ್ಲೀ ವೃಕ್ಷವೀರುತ್ಸಮಸ್ತ |
ಪ್ರಸವವಿಜಯಲಕ್ಷ್ಮ್ಯಾ ಮೂರ್ತಯೇವೇಂದಿರೇಶಮ್ ॥೩೫॥

ವಾರ್ಧಿಕ ॥ ವಿಮಲ ಮಲಯಜ ಚಂದನಾರ್ದ್ರಗಂಧ ಭಕುತಿಯಿಂ |
ಅಮಲ ಅರ್ಚಾ ಸಾಲಗ್ರಾಮಶಿಲೆ ಪ್ರತಿಮಿಂಗೆ |
ಅಮಿತಮತಿ ಲೇಪಿಸುತ ಮೂರ್ತಿಮಂತದಿ ದೇಹಧರ
ತುಲಸಿನವಮಂಜರಿಂ ॥
ಸುಮನಸ್ಥಳಜ ಜಲಜವಲ್ಲಿ ವೀರೂಧಜ
ಮಮರ ತರುಜ,ಜಾತಿ ಮಾಲತಿ ಕಲ್ಹಾರಾದಿ |
ಭ್ರಮರವರಿ ಪುಷ್ಪ ಸೌಂದರ್ಯದಭಿಮಾನಿಯಿಂ
ಶ್ರೀರಮಣನಂ ಅರ್ಚಿಸೇ ॥ ೩೫ ॥ ೭೮೯ ||

**ಭಾವಾರ್ಥ:— ಸರ್ವಜ್ಞರು ಶ್ರೀ ದೇವರಿಗೆ, ಗಂಧ ತುಲಸೀ ಪುಷ್ಪಾದಿಗಳ ಅರ್ಪಿಸಿದ ಬಗೆಯನ್ನು ವರ್ಣಿಸುತ್ತಾರೆ.**

**ವಿಮಲ= ನಿರ್ಮಲವಾದ, ಮಲಯಜ= ಮಲಯ ದೇಶದಲ್ಲಿ ಹುಟ್ಟಿದ ಅತಿ ಶ್ರೇಷ್ಠವಾದ ಚಂದನ=ಶ್ರೀಗಂಧ ಆರ್ದ್ರಗಂಧ=ಹಸಿಯಗಂಧವನ್ನು, ಅಮಲಶಾಲಗ್ರಾಮಾದಿಗಳಿಗೆ=ಅಭಿಷೇಕ ಮಾಡಿ ಸ್ವಚ್ಛವಾಗಿ ವಸ್ತ್ರದಿಂದ ಒರಸಿಯಿಟ್ಟ ಶಾಲಗ್ರಾಮಶಿಲೆ ಮತ್ತು ಪ್ರತಿಮೆಗಳಿಗೆ, ಲೇಪಿಸುತ್ತ = ಹಚ್ಚುತ್ತ ಅಮಿತ ಮತಿಗಳಾದ ಶ್ರೀ ಸರ್ವಜ್ಞರು, ದೇಹವನ್ನು ಧರಿಸಿಕೊಂಡು ಪ್ರತ್ಯಕ್ಷವಾಗಿ ಬಂದ ಶ್ರೀ ತುಲಸೀ ದೇವಿಯೋ, ಎಂಬುವಂತಿರುವ, ಆಗಲೇ ತೆಗೆದುದರಿಂದ ನೂತನವಾದದ್ದು, ಅತಿ ಮೃದುವಾದದ್ದು, ಆ ದಳಗಳ ಮೇಲೆ ಗೋದಿಯ ಕಾಳಿನಷ್ಟು ತೆನೆಗಳು ಇರುವ ಮಂಜರೀಯುಕ್ತ ಶ್ರೀ ತುಲಸೀ ದಳಗಳಿಂದಲೂ, ಸ್ಥಳಜ= ಭೂಮಿಯಲ್ಲಿ ಹಬ್ಬಿದ, ಜಾತಿ ಮಾಲತಿ ಶಾವಂತ್ಯಾದಿ ಪುಷ್ಪಗಳು; ಜಲಜ=ನೀರಿನಲ್ಲಿ ಹುಟ್ಟಿದ ಕಲ್ಹಾರಾದಿ ಕಮಲ, ಕುಶೇಶಯಾದಿ ಪುಷ್ಪಗಳು; ವಲ್ಲಿಜ=ಊರ್ಧ್ವವಾಗಿ ಮೇಲಕ್ಕೆ ಹಬ್ಬಿದ ಲತೆಗಳಲ್ಲಿ ಹುಟ್ಟಿದ ಮಲ್ಲಿಕಾದಿ ಪುಷ್ಪಗಳು ವಿರೂಧಜಂ= ಭೂಮಿಯಲ್ಲಿ ಪ್ರಸಾರಿತವಾದ ಬಳ್ಳಿಗಳಿಂದ ಹುಟ್ಟಿದ ಹೂವುಗಳು, ಅಮರತರು = ದೇವತಾ ವೃಕ್ಷಗಳಿಂದ ಹುಟ್ಟಿದ ಬಕುಳ ಪಾರಿಜಾತಾದಿ ಭ್ರಮರವರಿಪುಷ್ಪ= ಗುಂಗಿಯ ಹುಳಕ್ಕೆ ಶತ್ರುವಾದ ಪಂಚಕ ಪುಷ್ಪಗಳು, ಈ ಸಕಲ ಪುಷ್ಪಗಳಿಗೆ ಕಾಂತಿಯನ್ನುಂಟುಮಾಡುವ "ಪುಷ್ಪೋತ್ಕರ್ಷಾಭಿಮಾನಿ ಶ್ರೀ; ಎಂಬುವಂತೆ ಶ್ರೀ ದೇವಿಯೇ ಮೂರ್ತಿಮಂತಳಾಗಿರುವ ತುಲಸ್ಯಾಭಿಮಾನಿ ದೇವತೆಗಳಂತಿರುವ ಪುಷ್ಪಗಳ ಸಮೂಹದಿಂದ ಶ್ರೀ ಲಕ್ಷ್ಮೀಪತಿಯಾದ ನಾರಾಯಣನನ್ನು ಪೂಜಿಸಿದರು.**

**ಶ್ಲೋಕ ||** **ಸದದಧಿಕಬೋಧಃ ಷೋಡಶಾತ್ರೋಪಚಾರಾನ್ |**
**ವ್ಯರಹಯದಗುಣಾನ್ ದ್ವಾತ್ರಿಂಶದಾಗಃ ಪುರೋಗಾನ್ ||**
**ಅಗಣಿತಗುಣಮುಚ್ಚೈಸ್ತೋಷಯಂಛಾಙ್ಗಪಾಣಿಂ |**
**ಷಡಪಿ ಪರಮಭಕ್ತ್ಯಾನೂಪಚಾರಾನ್ ದಿದೇಶ || ೩೬ ||**

ವಾರ್ಧಿಕ || ಪೂಜೆಯೋಳ್ ಷೋಡಶುಪಚಾರ ಅರ್ಘ್ಯವು ಪಾದ್ಯ |
ನೈಜವಾಚಮನ ಮಧುಪರ್ಕ ಪುನರಾಚಮನ |
ಓಜ ಸ್ನಾನವು ವಸನ ಭೂಷಣುಪವೀತ ಆಸನಗಂಧ
ಪುಷ್ಪಧೂಪ ||
ತೇಜದಂದೀಪ ನೈವದ್ಯನಮನವು ಇನಿತು |
ಮೂಜಗತ್ಪತಿಯು ಶಾರಂಗಧರನಂತಗುಣ |
ರಾಜರಾಜೇಶ್ವರನ ಉಚ್ಚ ತೋಷವ ಬಡಿಪರ್ಯೆ ಅಧಿಕ
ಬೋಧಾರ್ಯರು || ೩೬ || ೭೯೦ ||

**ಭಾವಾರ್ಥ: — ಈ ಮೂವತ್ತಾರನೆಯ ಶ್ಲೋಕದ ಅರ್ಥರುಚಿಯನ್ನು ಶ್ರೀ ದಾಸಾರ್ಯರು ೩೭ ನೇ ಪದ್ಯದ ಅರ್ಥ ಪದ್ಯ (೩) ನೇಯ ಪಾದದವರಿಗೆ ವಿಸ್ತಾರವಾಗಿ ರಚಿಸಿರುವರು.**

ಶ್ರೀ ಸರ್ವಜ್ಞರು ಷೋಡಶೋಪಚಾರ ಪೂಜಾ ಮಾಡಿದ ಕ್ರಮವನ್ನು ಹೇಳುತ್ತಾರೆ.

ಪೂಜಾ ಕಾಲದಲ್ಲಿ ಶ್ರೀಮದಾಚಾರ್ಯರು ಹದಿನಾರು ಪೂಜೆಗಳನ್ನು ಮಾಡಿದರು ಅದ ಹೇಗಂದರೆ– ೧ ಅರ್ಘ್ಯ, ೨ ಪಾದ್ಯ, ೩ ಆಚಮನ, ೪ ಮಧುಪರ್ಕ, ೫ ಪುನರಾಚಮನ, ೬ ಓಜಸ ಸ್ನಾನವು=ಮೈಗೆ ಬಲ ಕೊಡುವ ಸ್ನಾನವು, ೭ ವಸ್ತ್ರ, ೮ ಭೂಷಣ=ಆಭರಣಾದಿ ಶಂಖ ಚಕ್ರಾ ಆಯುಧಭೂಷಣ, ೯ ಉಪವೀತ=ಯಜ್ಞೋಪವೀತ, ೧೦ ಆಸನ, ೧೧ ಗಂಧ, ೧೨ ಪುಷ್ಪ, ೧೩ ಧೂಪ ೧೪ ದೀಪ, ೧೫ ನೈವೇದ್ಯ, ೧೬ ನಮಸ್ಕಾರ ಹೀಗೆ ಹದಿನಾರು ಪೂಜೆಗಳಿಂದ ಮಹಾ ಪೂಜೆಯನ ಮಾಡಿ, ಲೋಕಕ್ಕೆ ಒಡೆಯನಾದ, ಶಾರ್ಙ್ಗ ಧನುವನ್ನೆ ಕೈಲಿಹಿಡಿದ, ಜ್ಞಾನಾನಂದಾದಿ ಅಪರಿಮಿತ ಗು ಪೂರ್ಣನಾದ ರಾಜರಾಜೇಶ್ವರ ಮೂರ್ತಿಯಾದ ಶ್ರೀ ನಾರಾಯಣನನ್ನು ಉಚ್ಚ = ಹೆಚ್ಚಾಗಿ ಸಮ್ಯಕ= ಚನ್ನಾಗಿ ಸಂತೋಷಪಡಿಸುವವರಾದರು.

ಈ ಹದಿನಾರು ಪೂಜೆಗಳಲ್ಲಿ ಆವ್ಹಾನ, ಆಸನ, ಮೊದಲಿಗೆ ಬರಬೇಕಾಗಿತ್ತು ಆದರೆ ಶಾ ಗ್ರಾಮಾದಿಗಳಲ್ಲಿ ಆವ್ಹಾನಾದಿಗಳಿಲ್ಲ. ಮತ್ತು ಪ್ರತಿಮೆಗಳಲ್ಲಿಯೂ ಸಹ ಮುಖ್ಯಪ್ರಾಣಾಂಶ ಸಂಭೂ ಶಾದ ಶ್ರೀ ಮಧ್ವರ ಕರಸ್ಪರ್ಶ ಮಾತ್ರದಿಂದಲೇ ನಿತ್ಯ ಸನ್ನಿಹಿತನಾದ ಹರಿಯು ಸ್ವಯಂ ವ್ಯಕ್ತರೂಪನು ಮತ್ತು ಬ್ರಹ್ಮ, ಪ್ರಾಣ, ಭೀಮಮಧ್ವ ಋಜುಗಳ ಕರಾರ್ಚಿತ ಪ್ರತಿಮೆಗಳಲ್ಲಿ ಆವ್ಹಾನಾದಿಗಳಿಲ್ಲ. ಇದು ನಿರ್ಣಿತ ಪ್ರಮೇಯ: ಇದರಂತೆಯೇ ಆಸನವು ಎರಡನೇದಾಗಿ ಹೇಳಬೇಕಾಗಿತ್ತು. ಉಪವೀತವಾ ನಂತರ ೧೦ನೇ ಪೂಜೆಯಲ್ಲಿ ಹೇಳಿದ್ದಾರೆ. ಇದಕ್ಕೆ ಕಾರಣವೇನಂದರೆ ಶ್ರೀ ಮಧ್ವರಿಗೆ ನಿತ್ಯ ಪ್ರತ್ಯಕ್ಷದಿಂ ನಿಂತ, ಮತ್ತು ಕುಳಿತ, ತಿರುಗಾಡುವ, ಮಲಗುವ ಈ ನಾಲ್ಕು ರೂಪಗಳಿಂದತಾವು ಕಣ್ಣಾರೆ ನೋಡು ಹರಿಗೆ ಆವ್ಹಾನ ಆಸನಗಳೆಲ್ಲಿ ? ಸರ್ವದಾ ಹೃದಯಾಷ್ಟ ಕಮಲದಲ್ಲಿಯೂ ಬಹಿರದಲ್ಲಿಯೂ, ಪ್ರತ್ಯ ವಾಗಿ ನೋಡುವ ಹರಿಯನ್ನು ಹೊಸದಾಗಿ ಕರೆಯುವದು ಹೇಗೆ ? ಕುಳ್ಳಿರಿಸುವದು ಹೇಗೆ ? ಒಂದ ಕ್ಷಣವಾದರೂ ಅಗಲದೇ ಇರುವ ಶ್ರೀ ಹರಿಯ ಪೂಜೆ ಶ್ರೀ ಮಧ್ವರಿಗೆ ಮಾತ್ರ ಆಹ್ವಾನ, ಆಸನ ಪೂಜಾ ಗಳು ಹೇಳಿಲ್ಲವಾದರೂ ವ್ಯತಿರೇಕ ಪೂಜಾದಿಗಳಲ್ಲಿ ಬಹಿರಂಗದಿ, ಅರ್ಘ್ಯ ಪಾದ್ಯಾಚಮನ ಸ್ನಾ ವಸ್ತ್ರಾದಿಗಳಲಂಕಾರ ನಂತರ (ಆಸನ) ಪೀಠದಲ್ಲಿ ಪ್ರತಿಮೆಗಳನ್ನು ಕುಳ್ಳಿರಿಸಿ ಗಂಧ ಪುಷ್ಪಾದಿಗಳು ಧೂ ದೀಪ ನೈವೇದ್ಯಗಳನ್ನು ಸಮರ್ಪಿಸಿದರೆಂದು, ಭಾವಪ್ರಕಾಶಿಕೆಯೇ ಪ್ರಮಾಣ. '' ಅರ್ಘ್ಯ ಪಾದಾ ಚಮನೀಯ ಮಧುಪರ್ಕ ಪುನರಾಚಮನೀಯ ಸ್ನಾನ ವಸ್ತ್ರ ಭೂಷಣ ಯಜ್ಞೋಪವೀತಾಸನ ಗಂ ಪುಷ್ಪ ಧೂಪ ದೀಪ ನೈವೈದ್ಯ ನಮಸ್ಕಾರಾಃ '' ಇತಿ. ಇನ್ನು ಮೂವತ್ತೆರಡು ಅಪರಾಧಗಳನ್ನು ತ್ಯಜಿ ಹದಿನಾರು ಪೂಜೆಗಳನ್ನು ಮಾಡಿದ ಕ್ರಮವನ್ನು ಮುಂದಿನ ಪದ್ಯದಲ್ಲಿ ವರ್ಣಿಸುತ್ತಾರೆ.

೩೨ ಅಪರಾಧಗಳ ವಿವರ ಭಾವಪ್ರಕಾಶಿಕೆಯಲ್ಲಿ ಹೇಳಿದೆ :—

ಅಗುಣಾ, ಅನ್ಯಚಿತ್ತತ್ವಾದಯಾ । ಭುಕ್ತ್ವಾ ಪೀತ್ವಾರ್ಚನಂ ದಂತಕಾಷ್ಠಾಭಕ್ಷ್ಯೋಪಸರ್ಪಣಂ । ಮೈಥುನಾನಂತರಂ ಚಾರ್ಚಾ, ಶವಂ ಸ್ಪೃಷ್ಟ್ವೋಪಸರ್ಪಣಂ॥ ಅರ್ಚಾಂತರೇ ಮೂತ್ರವಿಷ್ಠಾವಿಸರ್ಗೌ ಸಾಸ್ರಭಾಷಣಮ್ । ನೀಲವಸ್ತ್ರಾವೃತಸ್ಯಾಪ್ತೀ ರಾಜಾನ್ನಾತ್ತಿರುಪಾಗ (ಹ) ತಿಃ । ಉಪಸ್ಪೃಶ್ಯಾವಿಧಾ ನೈಸ್ತು ಶುಶ್ರೂಷೋರಪಿರುಷ್ಟತಾ । ಅಕರ್ಮಣ್ಯ ಪ್ರಸೂನಾರ್ಚಾ ರಕ್ತಕೌಪೀನವಸ್ತ್ರತಾ । ಕೃಷ್ಣ ವಸ್ತ್ರೈರ್ಹರೇಃ ಕರ್ಮವಿಧಿಃ ಸ್ಪೃಷ್ಟಿಃ ತಮಸ್ಯಪಿ। ಕಾಮಾನುಸಾರಿತಾ ಕೃಷ್ಣವಸ್ತ್ರಸ್ಯ ಪರಿಧಾನಮ್ ಶ್ವ (ಸಂ) ಸ್ಪೃಷ್ಟಿಃ ಕೋಲಮಾಂಸಾತ್ತಿರ್ಜಾಲಪಾದಾಸನಂ ತಥಾ । ಉಪಸರ್ಪಃ ಪಂಕಿಲೇ ಚ ಚಿತಿಂ ಸ್ಪೃಷ್ಟ್ವೋಪಸರ್ಪಣಮ್ । ಪಿಣ್ಯಾಕಾತ್ತಿಶ್ಶ್ವೋಪಸರ್ಪಃ ಪೋತ್ರಿ ಮಾಂಸೋಪಪಾದನಮ್ । ಉಪಯಾತುಮರ್ದ್ಯಪಾನಂ ಕುಸುಂ ಭದಲ ಭಕ್ಷಣಮ್ । ಪರಪ್ರಾವರಣಗಾಹಃ ಸ್ವಂಜನಾದೇ ಕಲ್ಪನಮ್ । ಪುಷ್ಪಾದಾನೇ ಧೂಪದಾನಂ ಹರಿಮೋಢುರುಪಾನಹೌ । ಅಭೇರಿಹಂತುರಭ್ಯಾಪ್ತಿರಜೀರ್ಣಾ ನ್ನಸ್ಯ ಪೂಜನಮ್ । ದ್ವಾತ್ರಿಂಶದಪರಾಧಾಸ್ತು ಕಥಿತಾ ಗುರುದೋಷದಾಃ॥ ವಸುಂಧರಾಯೈ ಕೋಲೇನ (ಲೇಕೇಶ) ವಿಷ್ಣುನಾ ಪ್ರಭುವಿಷ್ಣುನೇತಿ, ಚ । ಇತಿ ಭಾವಪ್ರಕಾಶಿಕೆ.

ಶ್ಲೋಕ || ತಮರುಣಮಣಿವರ್ಣಂ ದಿವ್ಯದೇಹಾಖ್ಯಗೇಹೇ |
ಸ್ನಪಿತಮತಿಪೃಥುಶ್ರದ್ಧಾನದೀಚಿತ್ತವಾರ್ಭಿಃ ||
ನನು ಸ ಜಯತಿ ನಿತ್ಯಂ ಹೃತ್ಸರೋಜಾಸನಸ್ಥಂ |
ನ ತು ಸಕೃದಿತಿ ಪುಷ್ಪೈರಷ್ಟಭಿರ್ಭಾವಪುಷ್ಪೈಃ || ೩೭ ||

ವಾರ್ಧಿಕ || ಮೋದದಿಂ ದ್ವಾತ್ರಿಂಶದಪರಾಧವನು ತ್ಯಜಿಸು |
ತಾದರದನುಪಚಾರಮುಖವಾಸತಾಂಬೂಲ |
ಆದರ್ಶ ಛತ್ರಚಾಮರ ಪಾದುಕೆಯ ದೇವಗರ್ಪಿಸುತ
ಕ್ಷಮೆಯ ಬೇಡ್ದ ||
ಮಾಧವನ ಪ್ರಿಯ ಮಧ್ವರಿನಿತು ನಾನಾಪುಷ್ಪ
ಭೇದದಿಂ ನಿತ್ಯ ಹರಿ ಯಜಿಪರಲ್ಲದೆ ದಿವ್ಯ
ವಾದ ದೇಹಾಖ್ಯ ಮಂದಿರ ಪೃಥುಲ ಶ್ರದ್ಧಾಖ್ಯ
ನದಿಚಿತ್ತ ಜಲಸ್ನಾನವೊ || ೩೭ || ೭೯೧ ||

ಭಾವಾರ್ಥ :— ಅಧಿಕಬೋಧರಾದ ಶ್ರೀ ಪೂರ್ಣ ಪ್ರಜ್ಞಾಚಾರ್ಯರು ಸಂತೋಷದಿಂದ ಯಾವ ಶ್ರಮವಿಲ್ಲದೇ ಅನಾಯಾಸವಾಗಿ ದ್ವಾತ್ರಿಂಶತ್= ಮೂವತ್ತೆರಡು ಮಹಾ ಅಪರಾಧಗಳನ್ನು ಬಿಟ್ಟು, ಬಹು ಭಕ್ತಿಯಿಂದ ಆರು ಅನುಪಚಾರ= ಹಿಂದಿನಿಂದ ಅಥವಾ ಹಿಂದುಗಡೆ ಮಾಡುವ ಪೂಜೆಗಳು ಆರು, ೧ ಮುಖವಾಸ= ಊಟವಾದಮೇಲೆ ತಾಂಬೂಲ ಸೇವಿಸದಕ್ಕಿಂತಲೂ ಮೊದಲಿಗೆ ಸುವಾಸನೆಗೋಸುಗ ಬಾಯಿಯಲ್ಲಿ ಹಾಕುವ ಸುವಾಸನೆ ಪದಾರ್ಥಗಳು ಇತ್ಯಾದಿ, ೨ ತಾಂಬೂಲ= ವೀಳ್ಯದೆಲೆಯು ತ್ರಯೋದಶ ಪದಾರ್ಥಗಳಿಂದ ಯುಕ್ತವಾದದ್ದು, ೩ ಆದರ್ಶ= ಕನ್ನಡಿ ತೋರಿಸುವ ಸೇವೆ, ೪ ಛತ್ರ= ಛತ್ತರಿಗೆ ದೇವರ ಮೇಲೆ ಹಿಡಿಯೋಣ, ೫ ಚಾಮರ ಬೀಸುವದು, ೬ ದೇವರಿಗೆ ಪಾದುಕಾಗಳನ್ನು ಸಮರ್ಪಿಸುವದು ಹೀಗೆ ಆರು ಅನುಪಚಾರಗಳನ್ನು, ದೇವರಿಗೆ ಅರ್ಪಿಸಿ ಅಪರಾಧಗಳನ್ನು ಕ್ಷಮಾ ಮಾಡೆಂದು ಶ್ರೀ ಹರಿಯನ್ನು ಪ್ರಾರ್ಥಿಸಿದರು. ( ಇಲ್ಲಿಗೆ ೩೬ ನೇ ಶ್ಲೋಕದ ಅರ್ಥ ಮುಗಿಯಿತು. ಮುಂದೆ ೩೭ ಶ್ಲೋಕಾರ್ಥ ೩೮ನೇ ಪದ್ಯದಲ್ಲಿ ಮುಗಿಸಿರುವರು. ಮಾಧವನ= ಲಕ್ಷ್ಮೀದೇವಿಗೆ ಒಡೆಯನಾದ ಶ್ರೀ ಹರಿಗೆ ಅತ್ಯಂತ ಪ್ರೀತಿಪಾತ್ರರಾದ ಶ್ರೀಮಧ್ವಾಚಾರ್ಯರು ಪೂರ್ವೋಕ್ತ ಪ್ರಕಾರದಿಂದ ನಾನಾವಿಧವಾದ ಪುಷ್ಪಾದಿಗಳಿಂದ ಪ್ರತಿ ನಿತ್ಯದಲ್ಲಿಯೂ, ಸಕೃದೇವ_ ಒಂದೇ ಸಲ ಶ್ರೀ ಹರಿಯನ್ನು ಪೂಜಿಸುವ ಮಾತ್ರವಲ್ಲದೇ ಪ್ರತಿ ನಿತ್ಯ ಪ್ರತಿ ಕಾಲದಲ್ಲಿಯೂ ತಮ್ಮ ದಿವ್ಯವಾದ ದೇಹ= ಮಂದಿರ ಮನೆಯಲ್ಲಿ ಅತಿ ಪೃಥುಲ=ಬಹು ಶ್ರೇಷ್ಠವಾದ ಶ್ರದ್ಧಾ= ಭಕ್ತಿ ಎಂಬ ನದಿಯು, ಚಿತ್ತ= ಮನವೆಂಬ ಜಲದಲ್ಲಿ ಶ್ರೀ ಹರಿಗೆ ಸ್ನಾನಮಾಡಿಸುತ್ತ, ಅರುಣಮಣಿ=ಕೆಂಪು ರತ್ನದಿಂದೊಪ್ಪುವ ಹೃದಯಕಮಲವೆಂಬ ಪೀಠದಲ್ಲಿ ಸ್ತೋತ್ರಾರ್ಹನಾದ ಬಿಂಬರೂಪನಾದ ಶ್ರೀ ಹರಿಯನ್ನು, ಭಾವಾಷ್ಟ= ಮನೋಭಾವವೆಂಬ ಎಂಟು ಪುಷ್ಪಗಳಿಂದ ಸರ್ವದಾ ಪೂಜಿಸುತ್ತಾರೆ.

" ಆರಾಧಯಾಮಿ ಮಣಿಸನ್ನಿಭಮಾತ್ಮಬಿಂಬಂ ಮಾಯಾಪುರೇ ಹೃದಯಪಂಕಜಸನ್ನಿವಿಷ್ಟಮ್, | ಶ್ರದ್ಧಾನದೀ ವಿಮಲ ಚಿತ್ತ ಜಲಾಭಿಷೇಕಂ | ಭಾವಾಷ್ಟ ಪುಷ್ಪ ವಿಧಿನಾ ಹರಿಮರ್ಚಯಾಮಿ ಎಂಬ ಶ್ರೀ ಭೀಮಸೇನ ದೇವರ ವಾಕ್ಯವನ್ನು ಭಾವಪ್ರಕಾಶಿಕೆಯಲ್ಲಿ ಉದಹರಿಸಿರುವರು. ಇದರ ಸಾರಾಂಶವೇನಂದರೆ, ರತ್ನದಂತಿರುವ ಈಶ್ವರೇಚ್ಛೆಯಿಂದ ಕಲ್ಪಿತವಾದ ದೇಹಾಖ್ಯ ಪಟ್ಟಣದಲ್ಲಿ ಹೃತ್ಕಮಲದಲ್ಲಿರುವ ಎನ್ಮೋಲ್ ಪ್ರತಿಬಿಂಬದಂತಿರುವ ಎನಗೆ ಬಿಂಬ ಸ್ವರೂಪನಾದ ಶ್ರೀ ವಿಷ್ಣುವಾದ ಶ್ರೀ ಹರಿಯನ್ನು ಶ್ರದ್ಧೆ= ಭಕ್ತಿ ಎಂಬ ನದಿಯು, ಮನವೆಂಬ ನಿರ್ಮಲವಾದ ಉದಕದಿಂದ ಅಭಿಷೇಕ ಮಾಡಿ ಎಂಟು ಭಾವ ಪುಷ್ಪಗಳಿಂದ ವಿವಿಧ ಪ್ರಕಾರ ಪೂಜಿಸುವೆನು. ಎಂಬ ತಮ್ಮ ಪೂರ್ವಾವತಾರ ವಾಕ್ಯದಂತೆ ಭೈಮೀತನು= ಭೀಮನ ದೇಹದಂತೆ ದೇಹವನ್ನು ಧರಿಸಿದ, ಅಥವಾ ಭೌಮೀತನು= ಭೀಮನಂತೆ ಮುಕ್ತತ್ವಾತ್ಮಕನಾದರೂ ಜನಗಳಿಗೆ ಭೂಮಿ ಸಂಬಂಧ ದೇಹವನ್ನು ಧರಿಸಿದವರಂತೆ ತೋರ್ವ ಶ್ರೀಮದಾಚಾರ್ಯರು ಹೀಗೆ ತಮ್ಮ ಹೃದಯದಲ್ಲಿ ಕ್ಷಣ ಬಿಡದೆ ಪೂಜಾ ಮಾಡುವರಾದರೂ, " ಪ್ರತಿಮಾಸು ಅಪ್ರಬುದ್ಧಾನಾಂ " ಎಂಬಂತೆ ಅಧಮ ಭಕ್ತರಾದ ಮನುಷ್ಯರಿಗೆ ಪೂಜಾ ಕ್ರಮವನ್ನು ತೋರಿಸಿದರಲ್ಲದೆ ಅಪರೋಕ್ಷ ಜ್ಞಾನಿಗಳಿಗೂ ಋಷಿಗಳಿಗೂ ದೇವತೆಗಳಿಗೂ ಬಾಹ್ಯ ಪ್ರತಿಮಾರ್ಚನೆ ಮಾಡುವದು ವಿಧಿಬದ್ಧವಲ್ಲ

" ಅಹಿಂಸಾ, ಸತ್ಯ, ಮಸ್ತೇಯಂ, ಬ್ರಹ್ಮಚರ್ಯ, ಪರಿಗ್ರಹಾ, ಶೌಚಂ, ತುಷ್ಟಿ, ಸರ್ವ ಸಮರ್ಪಣ ಮಿತ್ಯಷ್ಟಭಾವ ಪುಷ್ಪಾಣಿ ಎಂದು ಭಾವ ಪ್ರಕಾಶಿಕೆ. ೧ ಅಹಿಂಸಾ= ಪರರನ್ನು ಹಿಂಸೆಗೊಳಿಸದಿರುವಿಕೆ, ೨ ಸತ್ಯ= ನಿಜವಾಗಿ ಮಾತಾಡುವದು. ೩ ಕಾಯಾ ವಾಚಾ ಮನದಿಂದ ಪರ ವಸ್ತು ಕದಿಯದಿರುವಿಕೆ, ೪ ಬ್ರಹ್ಮಚರ್ಯ= ಇಂದ್ರಿಯ ನಿಗ್ರಹ, ೫ ಪರಿಗ್ರಹಾ= ಶಿಟ್ಟಿನಿಂದ ಪರರಿಗೆ ಶಾಪ ಕೊಡದಿರುವಿಕೆ ೬ ಶೌಚ=ಸದಾಚಾರ, ೭ ತುಷ್ಟಿ= ವಿಷಯಾಲಂಬುದ್ಧಿ, ೮ ಸರ್ವ ಸಮರ್ಪಣ=ದೇಹೇಂದ್ರಿಯಾದಿ ಸಕಲವೂ ಶ್ರೀ ಹರಿಗೆ ಅರ್ಪಿಸುವಿಕೆ. ಮತ್ತು ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ | ಸರ್ವ ಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ವಿಶಿಷ್ಯತೇ ‖ ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನ ಪುಷ್ಪಂ ತು ಸಪ್ತಮ್ | ಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯತಿ ಕೇಶವ ಇತಿ ಚ ‖ ಪ್ರಮಾಣಾಂತರ.

‖ ಶ್ರೀಗುರುರಾಜೋ ವಿಜಯತೇ ‖

ಭಾವಾಷ್ಟಪುಷ್ಪಗುಣಗಳೇ ಶ್ರೀ ಹರಿಯಲ್ಲಿವೆ ಎಂಬ

## ಶ್ರೀ ಗೋಪಾಲ ವಿಠ್ಠಲರ ಸುಳಾದಿ

---

( ಸರ್ಗ ೧೪ ಶ್ಲೋಕ ೩೭ ರಲ್ಲಿ ಹೇಳಿರುವಂತೆ ಧ್ಯಾನಕ್ರಮ. )

### ತಾಳ ಧ್ರುವ

ಭಾವಾಷ್ಟ ಪುಷ್ಪಂಗಳು ದೇವಗೆ ಅರ್ಪಿಸುವಾ |
ಭಾವನೆ ಯಾನು ಕೇಳಿ ಭಕ್ತ ಜನರೂ |
ಜೀವಾರಿಂದಾ ಈ ಧರ್ಮ ಎಂದಿಗೆ ಆದದ್ದಲ್ಲಾ |
ದೇವಾನಲ್ಲೇವೆ ಇಂಥಾ ಗುಣಗಳುಂಟು |

ಭಾವಾಷ್ಟಾ ಪುಷ್ಪಾ ಗುಣವಾ, ದೇವಾನಲ್ಲಿಪ್ಪವೆಂದು ।
ಜೀವಾ ತಿಳಿದರೆ ಉದ್ಧಾರುಂಟು ।
ಜೀವಾರೆಂಬುವರು, ಕರ್ಮಬದ್ಧರು ಇನ್ನು ।
ದೇವಾನು ಕರ್ಮಣಾ, ತ್ರಿಗುಣಾರಹಿತಾ ।
ಜೀವಾರಿಂದಲಿ ಅತ್ಯಂತ ಬೇಧಾ ಸಾಕಾರಹರಿ ।
ಯಾವತ್ತಾರದಿ ವ್ಯಾಪ್ತಾ ಎಣೆಯಿಲ್ಲದಾ ಮೂರ್ತಿ ।
ಪಾವನಾಂಗಾ ಪಾಪನಾಶಾ ನಿತ್ಯತೃಪ್ತಾ ।
ಜೀವಜಡದಿ ಎಂದಿಗೆ ಅಗಲದೇಯಿಪ್ಪಾ ।
ಈ ವಿಧ ಶಕುತಿಯಾ ಈಶಾ ಗೋಪಾಲ ವಿಠಲಾ ।
ದೇವಾರಿಗುಂಟೆಂದು, ಅರಿವಾ ಜೀವನೆ ಬಲು ಧನ್ಯಾ ॥ ೧ ॥

## ( ಅಹಿಂಸಾ ಪುಷ್ಪ ) ಮಟ್ಟತಾಳ

ಬೊಮ್ಮಾಂಡ ಪಸೃಜಿಸಿ—ಬೊಮ್ಮನೊಳಗೆ ನಿಂತು ।
ಸುಮ್ಮನಸರನೆಲ್ಲಾ, ನಿರ್ಮಿಸಿ ಪಾಲಿಸಿ ।
ಬೊಮ್ಮಾಂಡಾ ಅಳಿಸಿ, ಬೊಮ್ಮನ ಕೊಲ್ಲುವಾ ।
ಬೊಮ್ಮಹತಿ ದೋಷಾವು ಎಮ್ಮಯ್ಯಾಗಿಲ್ಲಾ ।
ಹಮ್ಮಿನಾ ಕಂಸಾ ಡಿಬಿಕಾರಾ ।
ನಿರ್ಮಳದಿ ಕೊಂದಾ ನಿರ್ಮತ್ಸರದಿಂದಾ ।
ಧರ್ಮಾದಿ ಪುಷ್ಪಾ ನಮ್ಮಯ್ಯಾಗೆಂದೂ ।
ಘಮ್ಮನೆ ಅರ್ಪಿಸು ಘನ ಭಕುತಿಯಲ್ಲಿ ।
ಗಮ್ಮರಮಣಾನೆ ಗೋಪಾಲ ವಿಠ್ಠಲ ಪರಾ ।
ಬೊಮ್ಮ ಒಲಿವ ಹೀಗೆ ಧರ್ಮ ಅರಿದವರಿಗೆ ॥ ೨ ॥

## ( ಇಂದ್ರಿಯ ನಿಗ್ರಹ ) ರೂಪಕ

ಎರಡೆಂಟು ಸಾಸಿರಾ ಅರಸಿಯರ ಕೂಡಾ ।
ಪರಿಪರಿ ಕ್ರೀಡೆಯು ಮಾಡಿ ನೋಡಿ ಚಲ್ವ ।
ತರುಳತನದಿ ಹನ್ನೆರಡು ಸಾಸಿರ ಮಂದಿ ।
ತರುಳಾರ ಪಡೆದು ತಾ ಪರಿಕ್ಷಿತನಾಗಿನ್ನು ।
ಪರಿಣಾಮಾ ಮಾಡಿದವರಾ, ಬ್ರಹ್ಮಚಾರಿ ಎಂದು ।
ಸರಿ ಹೋಗುವದೆ ಇಂಥಾ, ಚರಿಯಾ ಮನುಜಾರಿಂದ ।
ಹರಿಗೆ ಇಂದ್ರಿಯ ನಿಗ್ರಹಾ ಸ್ಥಿರ ಪುಷ್ಪವೆಂತೆಂದು ।
ಅರಿದು ಅರ್ಪಿಸುವಾ ಜೀವರೀಗೆ ಲೇಪಿಸಾದೂ ।
ಪರಮ ದಯಾಳು ಗೋಪಾಲ ವಿಠ್ಠಲ ತನ್ನಾ ।
ಅರಿದಂತೆ ಫಲವೀವಾ ಶರಣಾ ಜನಕೆ ॥ ೩ ॥

## ( ಭೂತದಯಾ ಪುಷ್ಪ ) ಝಂಪಿ ತಾಳ

ಭೂತದಯಾ ಪುಷ್ಪ ಭೂತೇಶಗಲ್ಲದೇ ।
ಭೂತಾಧಾರದಿಯಿಪ್ಪ ಭೂತರಿಗೆ ಥರವೇ ।
ನೀತಿಯಲಿ ತ್ರಿವಿಧ ಜೀವರಿಗೆ ತಾ ತಪ್ಪದೇ ।
ಪ್ರೀತಿಲಿ ಉಣಿಸಿ, ಅಜಾತನಾಗಿಯಿಪ್ಪಾ ।
ಮಾತುಮಾತಿಗೆ ಅನಂತ ಕರ್ಮಂಗಳು ।
ಜ್ಞಾತವಿಲ್ಲದೆ ಮಾಳ್ಪ ಜೀವರಿಗೆ ಇದು ಸಲ್ಲಾ ।
ಭೂತರುಗಳ ಗತಿ ತಾ ತಿಳಿದು ತ್ರಿವಿಧರಿಗೆ ।
ನೋತ ಫಲವಿತ್ತು ಸಮನಾಗಿ ಇಪ್ಪವಾನೆಂದು ।
ಈ ತೆರದಿ ತಿಳಿದು ನೀ ಭೂತದಯಾ ಪುಷ್ಪ ।
ಪ್ರೀತಿಯಲರ್ಪಿಸು ಅನ್ಯಥಾ ಚಿಂತಿಸದೆ ।
ದಾತ ನಮ್ಮ ಸ್ವಾಮಿ ಗೋಪಾಲ ವಿಠ್ಠಲ ।
ಸೋತೆನೆಂದಾ ಬಳಿಕ ಸಲಹದೇ ಬಿಡನು ॥ ೪

## ( ಕ್ಷಮಾಪುಷ್ಪ ) ತ್ರಿವಿಡಿ ತಾಳ

ಸರ್ವದಾ ಕ್ಷಮಪುಷ್ಪ ಸರ್ವೇಶಗಲ್ಲದೇ ।
ಗರ್ವ ತತ್ವದಿ ಬದ್ಧ ಜೀವರಿಗೆ ಸಲ್ಲಾ ।
ಶರ್ವನಲ್ಲಾದರು ಸಹಿಸಿಲ್ಲ ಈ ಕರ್ಮ ।
ಪೂರ್ವದಾ ಆಖ್ಯಾನ ಇದಕೆ ಉಂಟೂ ।
ಸರ್ವ ಉತ್ತಮ ದೇವನಾರೆಂದು ಭೃಗುಮುನಿ ।
ಸರ್ವ ಪೂರ್ಣ ಹರಿಯ ಎದಿಯ ಒದ್ದಾ ।
ಪರ್ವತಾದೋಪಾದಿಯಿದ್ದ ಕಾರಣವಾಗಿ ।
ಸರ್ವೋತ್ತಮನೆ ಎಂದು ತುತಿಸಿ ನಲಿದಾ ।
ನಿರ್ವ್ಯಾಜದಿಂದಲಿ ನಿತ್ಯ ಕೋಪದಿ ಖೇದಾ ।
ಗರ್ವ ತತ್ವದಿ ಬದ್ಧ ಜನರಿಗೆ ಕೂಡದು ।
ಸರ್ವಾನಂದ ಪೂರ್ಣ ಗೋಪಾಲ ವಿಠ್ಠಲ ।
ಸರ್ವೇಶಗೀ ಪುಷ್ಪ ಅರಿವ ಜೀವನೆ ಧನ್ಯ ॥ ೫

## ಅಟ್ಟ ತಾಳ

ದಮ ಜ್ಞಾನ ಧ್ಯಾನವು ಸಮೀಚೀನ ಪುಷ್ಪವು ।
ರಮೆ ಈಶಾಗಲ್ಲದೆ ಶ್ರಮಿಸೋ ಜೀವರಿಗಿಲ್ಲಾ ।
ಮಮನ ಕಂಡರೆ ಅಂಜೋ ಭ್ರಮಣ ಜೀವರಿಗೆ ।
ದಮ ಎಂಬೊ ಪುಷ್ಪವು ಎಂತು ದೊರೆಕದಯ್ಯಾ ।
ಮಮತೆ ಜಡದಲ್ಲಿ ನಿಮಿಷ ಬಿಡದೆಯಿದ್ದ ।

ಹಮತಿ ಜೀವಂಗೆ ಜ್ಞಾನ ಪುಷ್ಪವು ಎಂತೊ ।
ಕ್ಷಮಿಸಿ ನೋಡಲು ಧ್ಯಾನಾ-ಪುಷ್ಪನಿಂಬೊದು ಅಂತು ।
ನಿಮಿತ್ತ ಮಾತ್ರವು ಇದು ನೀಚ ಜೀವರಿಗಿಲ್ಲಾ ।
ಸುಮ್ಮತಿಸಿ ನೋಡಿವು ಸರ್ವೋತ್ತುಮನಲ್ಲಿವೆ ।
ನಿಮಿಷ ಬಿಡದೆಯಿಪ್ಪಾವೆಂದು ಚಿಂತನೆ ಮಾಡೊ ।
ದಮ ಜ್ಞಾನಾ ಧ್ಯಾನಾವುಳ್ಳವನಾಗುವ ನಾ ಜೀವಾ ।
ಸುಮನಸರೊಡಿಯಾ ಗೋಪಾಲ ವಿಠ್ಠಲನು ।
ನಮಿಸಿ ನೆಚ್ಚಿದಂಗೇ ನರಿಸುವಾನಿದರಾ ॥ ೬ ॥

## ಆದಿ ತಾಳ

ಸತ್ಯವೆಂಬುವ ಪುಷ್ಪ ಸರ್ವೇಶಗೆ ಇದು ।
ನಿತ್ಯ ಅನೃತ ನಡೆವ ಜೀವಗೆ ಸಲ್ಲಾ ।
ಕತ್ತಲೇ ಒಳಗಿದ್ದ ಮತ್ತೆ ಉದಯವೆಂಬೊ ।
ಮಿಥ್ಯ ವಚನವಾಡಿ ಸುತ್ತುವಾ ಸಂಸಾರ ।
ಮತ್ತಿವರಿಗೀ ಪುಷ್ಪ ಎಂತು ದೊರವುದಯ್ಯಾ ।
ಸತ್ಯಸಂಕಲ್ಪ ನಮ್ಮ ಗೋಪಾಲ ವಿಠಲಗೇ ।
ಮತ್ತೆ ನೀ ಉಂಟೆಂದು ಮನಮುಟ್ಟ ತಿಳಿಯೋ ॥ ೭ ॥

## ಜತೆ

ಭೇದಾವಿಲ್ಲಾದಿ ಪುಷ್ಪಾ ಇಪ್ಪಾವು ಹರಿಯಲ್ಲೀ ।
ಸಾಧಿಸರ್ಪಿಸು ಗೋಪಾಲ ವಿಠಲ ಒಲಿವಾ ॥ ೮ ॥

ಶ್ರೀಗುರುಮಧ್ವೇಶಶ್ರೀಕೃಷ್ಣಾರ್ಪಿತವು.

ಶ್ಲೋಕ ॥ ಕೃಶಪರಮಸಪರ್ಯಃ ಸಾಂದ್ರಸಚ್ಚಂದನಾಂಭಃ ।
ಪರಿಮಲಿತ ಭುಜೋರೋ ಮಂಡಲಾಂಸೋ ಮನೀಷೀ ॥
ಸ್ಮಿತರುಚಿರಮುಖೇಂದುಃ ಸ್ನಿಗ್ಧಕೌಶೇಯವಾಸಾಃ ।
ಸಮುನಿಸುರ (ಸುರಮುನಿ) ನರಾಣಾಂ ಚಕ್ಷುಷಾ-
ಮುತ್ಸವೋಽಭೂತ್ ॥ ೩೮ ॥

ವಾರ್ಧಿಕ ॥ ಹೃತ್ಸರೋಜಮ್ಮರುಣವರ್ಣಮಣಿಯೇ ಪೀಠ ।
ಸ್ತುತ್ಯಹರಿ ಬಿಂಬವನು ಭಾವಾಷ್ಟ ಪುಷ್ಪದಿಂ ।
ನಿತ್ಯ ಪೂಜಿಪ ಬಾಹ್ಯ ಪೂಜಾಂತ್ಯ ಬುಧಮಧ್ವ
ಹರಿಯ ಪ್ರಸಾದ ಸಾಂದ್ರ ॥

ಸತ್ಸಮೀಚೀನ ಚಂದನ ಗಂಧ ತೋಳ್ ಹೃದಿಲಿ ।
ಬಿತ್ತರಿಪ ಪರಿಮಳದಿ ಸ್ಮಿತರುಚಿರ ಮುಖಚಂದ್ರ ।
ಮತ್ತೆ ಮೃದು ಕೌಶೇಯ ವಸ್ತ್ರಧರ ದೇವಮುನಿ
ನರನಯನ ಹರ್ಷಕರನೊ ॥ ೩೮ ॥ ೭೯೨ ॥

ಭಾವಾರ್ಥ:—ಈ ಪ್ರಕಾರ ನಿತ್ಯದಲ್ಲಿಯೂ ಧ್ಯಾನೋಪಾಸನೆ ಮತ್ತು ಬಾಹ್ಯ ಪೂಜಾ ನಂತರ, ಮಹಾ ಜ್ಞಾನಿಗಳಾದ ಶ್ರೀ ಮಧ್ವರು ಶ್ರೀ ಹರಿಯ ಪ್ರಸಾದರೂಪವಾದ, ಸಾಂದ್ರ=ಘನೀ ಭೂತವಾದ, ಸುಸಮೀಚೀನ=ಒಳ್ಳೇ ಯೋಗ್ಯವಾದ ಮತ್ತು ವಿಸ್ತಾರವಾಗಿ ನಾಲ್ಕೂ ದಿಕ್ಕಿಗೆ, ಪರಿಮಳಿಪ=ಸುವಾಸನೆಯಿಂದ ವ್ಯಾಪಿಸಿರುವ, ಶ್ರೀ ಗಂಧವನ್ನು ಭುಜದಲ್ಲಿಯೂ ಹೃದಯದಲ್ಲಿಯೂ ಹಚ್ಚಿಕೊಂಡರು. ಸ್ಮಿತರುಚಿರ ಮುಖಚಂದ್ರ=ಸುಂದರನಾದ ಚಂದ್ರನಂತೆ ಮಂದಹಾಸಯುಕ್ತ ಮುಖವುಳ್ಳವರು; ಮೆತ್ತಗಾದ ತೆಳ್ಳನ ಕಾವಿ ಶಾಟಿಯ ರೇಶ್ಮೆಯ ಪಟ್ಟವಸ್ತ್ರವನ್ನುಟ್ಟುಕೊಂಡವರಾಗಿ, ದೇವತೆಗಳ ಮುನಿಗಳ ಮನುಷ್ಯರ ಕಣ್ಣುಗಳಿಗೆ ಆನಂದವನ್ನು ಕೊಡುವರಾದರು. ಶ್ರೀ ಹರಿಯ ಪೂಜಾ ನಂತರ ನಿರ್ಮಾಲ್ಯ ಗಂಧದಿಂದ ತಮ್ಮ ದೇಹವನ್ನಲಂಕರಿಸಿಕೊಂಡು ರೇಶ್ಮೆಯ ವಸ್ತ್ರವನ್ನುಟ್ಟು, ಮಂದಹಾಸ ಮುಖದಿಂದ ಕುಳಿತ ಶ್ರೀಮದಾಚಾರ್ಯರನ್ನು ನೋಡಿ ಸುರನರ ಮುನಿಗಳ ನೇತ್ರಕ್ಕೆ ಪರಮ ಉತ್ಸಾಹವುಂಟಾಗಿ ಮಹಾ ಆನಂದಕರವಾಯಿತು.

ತೀರ್ಥ ತೀರ್ಥ ಪ್ರಾಶನ ಮಹಿಮೆ ಹಿಂದೆ ಹೇಳಿದ ಕಾರಣ ಇಲ್ಲಿ ವಿಶದವಾಗಿ ಹೇಳಿಲ್ಲ. ಪೂಜಾ ನಂತರ ತೀರ್ಥವನ್ನೇ ತೆಗೆದುಕೊಂಡು ಗಂಧವನ್ನು ಹಚ್ಚಿಕೊಂಡರೆಂತ ಭಾವ.

**ಶ್ಲೋಕ ॥ ಪರಮಥ ಪರಮಾನ್ನಂ ಪ್ರಾಪ್ತಮೇನಾಪ್ರಯಾಸಂ ।**
**ಪ್ರಭುರಿಹ ಬುಭುಜೇಽಸೌ ವೇದವಾದಪ್ರವೀಣಃ ॥**
**ಅಜಿತಪರಮಭಕ್ತಃ ಸಂತತಂ ಮನ್ಯಮಾನಃ ।**
**ಸಕಲಜಗದಧೀಶಃ ಪ್ರಿಯತಾಂ ಶೌರಿರಿತ್ಥಮ್ ॥ ೩೯ ॥**

ವಾರ್ಧಿಕ ॥ ಮಧುಹರಂ ಶ್ರೀಕೃಷ್ಣ ಪ್ರಭು ಸಕಲ ಜಗತಿಗಂ ।
ಗಧಿಪನುಂ ಸುಪ್ರೀತನಾಗಲೆನೆ ಸಂತತಂ ।
ಇದನರಿದ ಬುಧವೇದವಾದ ಪ್ರವೀಣನುಂ ಅಜಿತಹರಿ
ಪರಮ ಭಕುತ ॥
ಮುದ ಮಧ್ವರಿಹ ಮಠದಿ ಅಪ್ರಯತ್ನದಿ ತಾನೆ ।
ಒದಗಿದುತ್ತಮ ಸುಪರಮಾನ್ನ ಹರಿಗರ್ಪಿಸುತ ।
ಉಪಲಕ್ಷಿಣೆಗಳಲ್ಲದೆಯೆ ಭಗವನ್ಮುದಕೆ ಭುಂಜಿಸಿದ
(ಹರಿಗನ್ನನುಂ) ನನ್ನಾಧಿಪಂ ॥ ೩೯ ॥ ೭೯೩ ॥

ಭಾವಾರ್ಥ: — ಆ ಮೇಲೆ ಶ್ರೀಮದಾಚಾರ್ಯರು ಶ್ರೀ ಹರಿಗರ್ಪಿಸಿದ ನೈವೇದ್ಯ ಪರಮಾನ್ನ ಭಿಕ್ಷಾ ಸ್ವೀಕರಿಸಿದರೆಂದು ಹೇಳುತ್ತಾರೆ. ಅನಂತರದಲ್ಲಿ ಸಕಲ ಜಗತ್ತಿಗೆ ಒಡೆಯನಾದ ಮಧುನಾಮಕ ದೈತ್ಯನನ್ನು ಸಂಹರಿಸಿದ ಶ್ರೀಕೃಷ್ಣನು "ಪ್ರೀಯತಾಂ ಮಮ ಪ್ರೀತೋ ಭವತು" ಸುಪ್ರಸನ್ನನಾಗಲೆಂದು ಸರ್ವದಾ ತಿಳಿದವರೂ, ವೇದಗಳ ಪ್ರವಚನದಲ್ಲಿ ಬಹು ನಿಪುಣರೂ ಅಜಿತ=ಶ್ರೀ ನಾರಾಯಣ ಭಕ್ತೋತ್ತಮರಲ್ಲಿ ಶ್ರೇಷ್ಠರೂ ಆದ ಶ್ರೀ ಸರ್ವಜ್ಞರು ತಾವು ಇರುವ ಮಠದಲ್ಲಿ ಪ್ರಯತ್ನವಿಲ್ಲದೇ ಒದಗಿದ= ಶ್ರೀಹರಿ ಇಚ್ಛಾನುಸಾರವಾಗಿ ಮಹಾತ್ಮರ ಸೇವಾರೂಪವಾದ ದೇವರ ನೈವೇದ್ಯಕ್ಕೆ ಒಬ್ಬ ಭಕ್ತನು ಶುದ್ಧಾಂತಃಕರಣದಿಂದ ತಂದುಕೊಟ್ಟ ಪರಮಾನ್ನ=ಉತ್ತಮವಾದ ಅನ್ನವನ್ನು ಶ್ರೀ ಹರಿಗೆ ಸಮರ್ಪಣೆ ಮಾಡಿದ ನೈವೇದ್ಯಶೇಷವನ್ನು, ಕೇವಲ ತಮ್ಮ ಹೊಟ್ಟೆ ತುಂಬಿಕೊಳ್ಳಲಿಕ್ಕಲ್ಲದೇ ಶ್ರೀ ಹರಿಯ ಸಂತೋಷಾರ್ಥವಾಗಿ ಶ್ರೀ ಹರಿಗೆ ಅನ್ನರೂಪರೂ ಅನ್ನಕ್ಕೆ ಅಭಿಮಾನಿಗಳಾದ ಸರಸ್ವತೀ ಚಂದ್ರರಿಗೆ ಅಧಿಪರಾದ ಶ್ರೀ ಸರ್ವಜ್ಞರು ಈ ಉತ್ತಮ ಪಾಯಸವನ್ನು, ಅಥವಾ ಸನ್ಯಾಸಿಗಳಿಗೆ ಯೋಗ್ಯವಾದ ಅನ್ನವನ್ನು, ಭಿಕ್ಷಾ ರೂಪದಿಂದ ಸ್ವೀಕರಿಸಿ ಶ್ರೀಹರೇ ಪ್ರೀತನಾಗೆಂದು ಪ್ರಾರ್ಥಿಸಿದರು.

ಪೂರ್ವ ಪ್ರಸಿದ್ಧವಾದ ಭಾವ ಪ್ರಕಾಶಿಕೆಯಲ್ಲಿ " ಪ್ರಾಯಃ ಸೋಯಮನಾಯಾಸಂ ಪೂಜ್ಯತೇ ಪರಮೇಶ್ವರಃ । ಪ್ರೀಯತಾಮಿತಿ ತದ್ಭಕ್ತ್ಯಾ ಸಂತತಂ ವೇದಶಾಲಿಭಿರಿತಿ । ಭಗವತಾ ಸ್ವಯಮೇವಾಭಿಹಿತ ಮನೂದಿತಂ ಪರಮಿತ್ಯಾದಿನಾ ಎಂದು ಮೇಲೆ ಉದಹರಿಸಿದ ಅರ್ಥವನ್ನೆ ಹೇಳಿರುವರು.

ಈ ಪದ್ಯ ಶ್ಲೋಕದಲ್ಲಿ ಹೇಳಿರುವ ಎಲ್ಲ ವಿಶೇಷಗಳು ಶ್ರೀಮದಾಚಾರ್ಯರು ಶ್ರೀ ಹರಿಯ ಅಚ್ಛಿನ್ನ ಭಕ್ತಾಗ್ರೇಸರರಾದ ವಾಯ್ವಂಶರೆಂದು ಮುಖ್ಯತ್ವೇನ ಶ್ರುತಿ ಪ್ರಾಮಾಣ್ಯವನ್ನು ಉದಹರಿಸಿರುವರು. ಇದು ಬಹು ಸಮಂಜಸವಾದದ್ದು.

೧. ಸಂತತ ಶ್ರೀ ಹರಿಯ ಪ್ರೀತಿಗೆ ಸಕಲ ಕಾರ್ಯ ಮಾಡುವದು. ೨. ವೇದ ವ್ಯಾಖ್ಯಾನ ಕರ್ತೃಗಳಲ್ಲಿ ಶ್ರೇಷ್ಠರೂ, ೩. ಅಜಿತ ಪರರಿಂದ ಸೋಲದ ಸರ್ವೋತ್ತಮನಾದ ಶ್ರೀ ನಾರಾಯಣನ ಅಚ್ಛಿನ್ನ ಭಕ್ತರು. ೪. ಸರ್ವದಾ ಹರಿ ಕರ್ತೃತ್ವಾನುಸಂಧಾನಪೂರ್ವಕ ಸಂತೋಷದಿಂದಿರುವಿಕೆ. ೫. ಸಕಲ ಕಾರ್ಯವೂ ಪ್ರಯತ್ನವಿಲ್ಲದೇ, ಶ್ರೀ ಹರಿ ಕರ್ತೃತ್ವ ಸಾಕ್ಷಿತ್ವ, ವ್ಯಾಪ್ತತ್ವ, ವ್ಯಕ್ತತ್ವಾನುಸಂಧಾನದಿಂದ ಮಾಡುವಿಕೆ. ೬. ಸಕಲ ಭೋಜನವು ತಮ್ಮ ದೇಹವು ಪಚಯಕ್ಕಲ್ಲದೇ ಕೇವಲ ಶ್ರೀ ಹರಿಯ ಪ್ರೀತ್ಯರ್ಥವಾಗಿ ಮಾಡುವದು. ೭. ಶ್ರೀ ಹರಿಗೆ ಅನ್ನರು ಅನ್ನಾಧಿಪರು ಇವೆಲ್ಲ ವಿಶೇಷಣಗಳು ವಾಯುದೇವರಿಗೇ ಇರುವವು.

ಬೃಹದಾರಣ್ಯ ಉಪನಿಷತ್ ಉದ್ಗೀಥ ಬ್ರಾಹ್ಮಣದಲ್ಲಿ ಹೇಳಿರುವದೇನಂದರೆ—

## ಉಗಾ ಉಭೋಗ

" ಹರಿಗೆ ಅನ್ನವು ಪ್ರಾಣ ಭಗವತ್ಕರ್ಮದಲ್ಲಿ ।
ಹರಿಗೆ ಅನ್ನ ಅಪಾನ ಅನ್ಯ ಕರ್ಮ ತ್ಯಾಗದಲ್ಲಿ ।
ಹರಿಗೆ ಅನ್ನವು ವ್ಯಾನ ನಿರೋಧ ನಿಧಾಸನದಲ್ಲಿ ।
ಹರಿಗೆ ಅನ್ನವು ಉದಾನ ಯೋಗ ಧಾರಣದಲ್ಲಿ ।
ಹರಿಗೆ ಅನ್ನವು ಸಮಾನ ವಾಗಿಂದ್ರಿಯ ನಿಯಾಮದಲಿ ।
ಹರಿಗೆ ಈ ಪರಿ ಅನ್ನತ್ವ ಗುರುತಂದೆ ಗೋಪಾಲ ವಿಠಲ
ದೂತ ಪ್ರಾಣನ ಲೀಲಾ ।"

ಈ ತೆರದಿ ಹರಿಗೆ ಅನ್ನವು ಪಂಚಪ್ರಾಣ ರೂಪಗಳು, ಜಡಾನ್ನಕ್ಕೆ ಈ ರೂಪಗಳೇ ಅಧಿಪರಾಗಿರುವದು ಸುಪ್ರಸಿದ್ಧ.

ಶ್ಲೋಕ ॥ ಸಹಚರಪರಿಕ್ಲೃಪ್ತೇ ಸೂಕ್ಷ್ಮವಸ್ತ್ರಾಸ್ತೃ (ವೃ) ತೇऽಸೌ ।
ವವಿತನರುಹರೂಪೌ ಶೀರವರ್ಯೇ ನಿಷಣ್ಣಃ ॥
ಅರಮಯದಿಹ ನಾನಾ ಹೃದ್ಯವಿದ್ಯಾವಿಲಾಸೈಃ ।
ಕವಿಜನಪರಿವಾರಂ ಮಂಡಯನ್ ಮಂಟಪಾಗ್ರ್ಯಮ್ ॥ ೪೦ ॥

ವಾರ್ಧಿಕ ॥ ಪರಮಸಹಚರರಿಂದ ಪರಿಕ್ಲೃಪ್ತ ಸೂಕ್ಷ್ಮವಾ ।
ಗಿರುವ ವಸ್ತ್ರಾಚ್ಛಾದ ಮೇಷರೋಮಾಸನಂ ।
ವರ ರತ್ನಗಂಬಳಿಯ ಮೇಲ್ಕುಳಿತು ಮಧ್ವಾರ್ಯ
ಮಂಟಪಾಗ್ರ್ಯಂ ಮಂಡಿಸೆ ॥

ವರಕವಿಯ ಜನರ ಪರಿವಾರದ ಸಮೂಹಕಂ ।
ಸುರುಚಿ ನಾನಾ ಹೃದ್ಯ ವಿದ್ಯಾವಿಲಾಸದಿಂ ।
ಕರುಣಾಮೃತವಗರೆದು ಅವರನುಂ ಪರಮ ಸಂತೋಷ
ಪಡಿಸಿದುದು ಅಚ್ಚರಿ? ॥ ೪೦ ॥ ೭೯೪ ।

ಭಾವಾರ್ಥ:— ಯತಿಗಳ ನಿಯಮದಂತೆ ಭಿಕ್ಷಾನ್ನ ಸ್ವೀಕರಿಸಿದ ಮೇಲೆ ಶ್ರೀ ಮಧ್ವರು ಕೈ ತೊಳೆದುಕೊಂಡು ಆಚಮನ ಮಾಡಿ ತೀರ್ಥ ತುಳಸೀ ದಳಗಳನ್ನು ಸ್ವೀಕರಿಸಿ, ಯಾವ ರೀತಿಯ ವಿರಾಮ ವಿಲ್ಲದೆಯೇ ಶಾಸ್ತ್ರ ಸುವಿಚಾರ ಮಾಡಿದ ಕ್ರಮ ಹೇಳುತ್ತಾರೆ.

ಪರಮ= ಸದ್ಭಕ್ತರಾದ, ಸಹಚರ= ಅನುಚರ ಶಿಷ್ಯರಿಂದ ಪರಿಕ್ಲೃಪ್ತ=ನಿರ್ಮಿತವಾದ, ಮೇಷ ರೋಮ= ಕುರಿಯ ಉಣ್ಣೆಯಿಂದ ಮಾಡಿದ ರತ್ನಗಂಬಳಿಯ ಮೇಲೆ ಬಹು ತೆಳ್ಳನ ರೇಶ್ಮೆ-ವಸ್ತ್ರವನ್ನು ಮುಚ್ಚಿ ಹಾಸಿದ, ಇಂಥ ಶ್ರೇಷ್ಠವಾದ ಆಸನ= ಗದ್ದುಗೆಯ ಮೇಲೆ ಕುಳಿತವರಾಗಿ ಜನಾಶ್ರಯವಾದ ಮಂಟಪ ಶ್ರೇಷ್ಠವನ್ನು ಅಲಂಕರಿಸಿದರು ಅಂದರೆ ಶ್ರೀ ಸರ್ವಜ್ಞರು ಜನಗಳಿರುವ ಸಭಾ ಮಂಟಪಕ್ಕೆ ಬಂದು ರತ್ನಗಂಬಳಿಯ ಆಸನದ ಮೇಲೆ ಕುಳಿತದ್ದು ಆ ಮಂಟಪಕ್ಕೆ ಅತಿ ಶೋಭೆಯುಂಟಾಯಿತು ಆಗ್ಗೆ ಮಂಟಪದಲ್ಲಿ ಸಜ್ಜಾಗಿ ಕುಳಿತಿರುವ, ಕವಿಜನ ಪರಿವಾರ= ಸುತ್ತಲೂ ಕುಳಿತ ಪಂಡಿತ ಜನಸಮೂಹಕ್ಕೆ; ಅಥವಾ ' ಕವಿಜನಾನಾಂ ಪರಿತಃ ಸ್ಥಿತಂ ವಾರಂ,= ಪಂಡಿತರ ಸುತ್ತುಮುತ್ತು ಕುಳಿತ ಇತರ ಜನ ಸಮುದಾಯವನ್ನು, ಅಂದರೆ ಆಚಾರ್ಯರ ಸುತ್ತಲೂ ಕವಿ ಜನರು, ಆ ಪಂಡಿತರ ಸುತ್ತಲೂ ಕುಳಿತ ಇತರ ಜನಸಮುದಾಯವನ್ನು ಸಹಿತ ಸುರುಚಿ ಕೇಳಲಿಕ್ಕೆ ಯೋಗ್ಯವಾದ, ನಾನಾಹೃದ್ಯ ವಿದ್ಯಾವಿಲಾಸ ದಲಿ= ನಾನಾವಿಧವಾದ ಅತಿ ಮನೋಹರವಾದ ಅನೇಕ ಶಾಸ್ತ್ರ-ವಿಚಾರರೂಪ ಭಗವನ್ ಮಹಿಮೆ ಯುಕ್ತ ಲೀಲೆಗಳಿಂದ, ಭಗವದನುಗ್ರಹರೂಪ ಕರುಣಾಮೃತವನ್ನು ಕುಡಿಸಿದಂತೆ ಶ್ರೀ ಹರಿಯ ಮಹಿಮೆ ಯನು ಪೇಳಿ ಆ ಸಭೆಯ ಸಜ್ಜನರನ್ನು ಹೆಚ್ಚಾಗಿ ಆನಂದಪಡಿಸಿದ್ದು ಏನಾಶ್ಚರ್ಯ. ರುದ್ರಾದಿಗಳ ಗುರುಗಳು ನರರನ್ನು ಸಂತೋಷಗೊಳಿಸಿದ್ದು ಆಶ್ಚರ್ಯವೇ ?

**ಶ್ಲೋಕ ॥ ಅವಸರಮಧಿಗಮ್ಯ ಭ್ರೂವಿಜೃಂಭಾದಭೀಷ್ಟೋ ।**
**ಮುಖಸತತಗಲಶ್ವೀ (ಶ್ವೀ) ಭೂತಪಾಣಿಪ್ರವಾಲಃ ॥**
**ಸ್ಮಿತನಯನವಿಕಾಸೈ—ಸ್ತಸ್ಯವಿಜ್ಞಾತಭಾವಃ ।**
**ಶ್ರವಸಿ ಕಿಮಪಿ ಕಾರ್ಯಂ ಮಂತ್ರಯಾಮಾಸ ಮಂಕ್ಷು ॥೪೧॥**

ವಾರ್ಧಿಕ ॥ ಪ್ರಥುಲ ಪ್ರಬೋಧಗತಿ ಪ್ರಿಯಶಿಷ್ಯ ನೋರ್ವನು ಅ ।
ಮಿತಮತಿಯ ಭ್ರೂಚಲನೆಯಿಂ ಸಮಯವಂ ಪಡೆದು ।
ಅತಿ ಮಂದಹಾಸ ನಯನ ವಿಕಾಸದಿಂದವರ ಭಾವವಂ
ತಿಳಿದು ಮುಖದ ॥
ಸತತ ಚಲಿಸುವ ವಾಯು ವ್ಯವಧಾನಿಸೇಂ ಸ್ವಕ- ।
ರತಲ ಪ್ರವಾಲ ಪಲ್ಲವ ಪಿಡಿದು ಆಚಾರ್ಯ ।
ಶ್ರುತಿಯಲ್ಲಿ ಜವವೊಂದು ಗೌಪ್ಯಕಾರ್ಯಂ ಮೆಲ್ಲಗೆ
ವಿಚಾರಿಸಿದ ಗೌರವಂ ॥ ೪೧ ॥ ೭೯೫ ॥

ಭಾವಾರ್ಥ:— ಸಭೆಯ ಮಂಟಪದಲ್ಲಿ ಶ್ರೀಮದಾಚಾರ್ಯರು ಕುಳಿತಿರಲಾಗಿ ಸೇವೆಯ ಮಾಡತಕ್ಕ ಸದ್ಗೃಹಸ್ಥರು ಕಾಣಿಕೆ ಸಲ್ಲಿಸಲು ಆಜ್ಞೆಯನ್ನು ಕೇಳುವರೆಂದು ಗೌಪ್ಯವಾಗಿ ಪೇಳಿದ ಗೌರವವನ್ನು ಬಣ್ಣಿಸುವರು

ಪ್ರಥುಲ ಪ್ರಬೋಧ=ಶ್ರೀ ಪೂರ್ಣ ಪ್ರಜ್ಞಾಚಾರ್ಯರಿಗೆ ಬಹು ಪ್ರೀತಿಯುಳ್ಳ ಒಬ್ಬ ಶಿಷ್ಯನು, ಅಮಿತಮತಿಯ,=ಶ್ರೀ ಮಧ್ವರ, ಹುಬ್ಬಿನ ಚಲನೆಯಿಂದಲೂ, ಅವರ ಮುಗುಳುನಗೆಯಿಂದಲೂ ಕಣ್ಣುಗಳ ವಿಕಾಸ ಕೃಪಾವೃಷ್ಟಿಯ ನೋಟದಿಂದಲೂ ಅವರ ಮನೋಭಾವವನ್ನು ತಿಳಿದು ಕಾಲ ಸಾಧಿಸಿ, ಶ್ರೀಮದಾಚಾರ್ಯರ ಹತ್ತಿರಕ್ಕೆ ಬಂದು, ತನ್ನ ಬಾಯಿಯ ಉಸಿರು. ಆಚಾರ್ಯರಿಗೆ ತಗಲುವದೆಂಬ ಭಯದಿಂದ ಮುಖವಾಯು ತಡೆಯಲು ತನ್ನ ಮುಖಕ್ಕೆ; ಸ್ವಕರತಲ ಪ್ರವಾಲ ಪಲ್ಲವ=ತನ್ನ ಕೆಂಪಾದ ಎಳೆ ಚಿಗುರಿನಂತಿರುವ ಕೈಯನ್ನು ಪಿಡಿದು ಶ್ರೀ ಸರ್ವಜ್ಞರ ಶ್ರುತಿಯಲ್ಲಿ=ಕಿವಿಯಲ್ಲಿ ತ್ವರದಿಂದ ಒಂದು ರಹಸ್ಯವಾದ ಕಾರ್ಯವನ್ನು ವಿಜ್ಞಾಪಿಸಿದನು.

ಇಂತು ದೊಡ್ಡವರಲ್ಲಿ ಗೌಪ್ಯ ಕಾರ್ಯ ಸೂಚಿಸಿ ವಿಜ್ಞಾಪನೆ ಮಾಡುವ ಮರ್ಯಾದೆಯು ಈಗಲೂ ಮಠಾಧೀಶರಲ್ಲಿ ಜರುಗುತ್ತ ಬಂದಿದೆ.

**ಶ್ಲೋಕ ॥ ಪ್ರಣತಿಪರಮುಕ್ತ್ಯಾಃ ಸನ್ನತೇರ್ಯೇ ಜನೌಘಾ ।**
**ವಿಬಭುರನತಿದೂರೇ ಸಂಹತಾಸ್ತಾನತೀತ್ಯ ॥**
**ಅಹುವಹಮಿಕಯಾಶು ಪ್ರಾಪ್ಯ ಪಾರ್ಶ್ವಂ ಪ್ರಣೇಮು- ।**
**ರ್ಭವ ಇಹ ಗೃಹಸ್ಥಾಃ ಪೂರ್ವಸೇವಾಂ ವಿಧಾತುಮ್ ॥೪೨॥**

ವಾರ್ಧಿಕ || ಈ ಸಭೆಯ ಮಂಟಪದಿ ಬಹು ಸದ್ಗೃಹಸ್ಥರುಂ |
ಸೂಸಿ ಸರ್ವರ ಮೊದಲಿ ಸೇವೆ ಅರ್ಪಿಪೆವೆನುತ |
ತಾಸು ಶೀಘ್ರದಲಿಂದ ನಾ ಮುಂಚೆ ನಾ ಮುಂಚೆ
ಎನುತ ಮಧ್ವರಸಮೀಪ ||

ಸೋಸಿನಲಿ ಪೊಂದಿ ನಮನವೆನೊ ಉತ್ತಮಕೃತ್ಯ |
ಗೈಸಲುಂ ಕೂಡಿರ್ದ ಜನಸಮೂಹವ ದಾಟಿ |
ಆಸುಸನ್ಮತಿಗಳತಿ ಹತ್ತಿರಕೆ ಬಂದು ಅವಿರಳ ನಮನ |
ಗೈದ ಶೋಭೇಂ || ೪೨ || ೭೯೬ ||

ಭಾವಾರ್ಥ:- ಗೌಪ್ಯದಿಂದ ಪೇಳಿದ ಆ ಶಿಷ್ಯನ ಬಿನ್ನಹದಂತೆ ಶ್ರೀಮದಾಚಾರ್ಯರು ತಮ್ಮನ್ನು ಸಂದರ್ಶನ ಮಾಡಬಂದ ಭಕ್ತ ಜನರಿಗೆ ದರ್ಶನಾವಕಾಶವನ್ನು ಕೊಟ್ಟ ವರ್ಣನೆ.

ಈ ನೆರೆದ ಸಭಾ ಮಂಟಪದಲ್ಲಿ ಅನೇಕ ಜನರು ಸೇರಿದ್ದರು. ಅದರಲ್ಲಿ ಅನೇಕ ಸದ್ಗೃಹಸ್ಥರು ಸೂಸಿ= ಹೆಚ್ಚಾದ ಆತ್ಮಾನಂದದಿಂದ ಎಲ್ಲರಕಿಂತಲೂ ಮೊದಲಿಗೆ ನಾವೇ ಶ್ರೀ ಗುರುಗಳ ಸೇವಾರೂಪವಾದ (ದ್ರವ್ಯ) ಪಾದಗಾಣಿಕೆ ಅರ್ಪಿಸಿ ಅವರ ಅನುಗ್ರಹ ಸಂಪಾದಿಸಬೇಕೆಂದು, ಅವರೆಲ್ಲರೂ ಬಹು ತ್ವರೆಯಿಂದ ನಾ ಮುಂದೆ ನಾ ಮುಂದೆ ಎನ್ನುತ್ತ, ಶ್ರೀಮದಾಚಾರ್ಯರ ಸಮೀಪವನ್ನು ಯಾವಾಗ್ಗೆ ಪೊಂದುವೆವೆಂಬೋ ಸೋಸಿನಲಿ= ಅತಿ ಉತ್ಸಾಹದಿಂದ ನಮಸ್ಕಾರವೆಂಬ ಉತ್ತಮ ಕಾರ್ಯವನ್ನು ಮಾಡಲು; ಅಲ್ಲಿ ಕೂಡಿದ ಇತರ ಜನರ ಗುಂಪನ್ನು ದಾಟುತ್ತ, ಸನ್ಮತಿ= ಸಮೀಚೀನ ಮತಿಗಳಾದ ಶ್ರೀ ಸರ್ವಜ್ಞರ ಅತಿ ಸಮೀಪಕ್ಕೆ ಬಂದು ಅವಿರಳ = ಜನರ ಗದ್ದಲದಿಂದ ಬಿಡುವುಯಿಲ್ಲದೇ ಆ ಸಂಕುಚಿತ ಸ್ಥಳದಲ್ಲಿ ಸಂಕುಚಿತವಾಗಿ ನಮಸ್ಕಾರ ಮಾಡಿದ ಶೋಭೆಯನ್ನು ಏನೆಂತು ವರ್ಣಿಸುವದು.

ಶ್ಲೋಕ || ವಿವಿಧಜನಪದಸ್ಥಾಃ ಪ್ರಾಕ್ ಶ್ರುತೇಭ್ಯೋ ಗುಣೇಭ್ಯಃ |
ಶತಗುಣಗುಣಮೇನಂ ವಿಸ್ಮಿತಾ ವೀಕ್ಷಮಾಣಾಃ ||
ಮುಕುಲಿತಕರಪದ್ಮಾ ಆಸ್ಯತಾಮಿತ್ಯವಾಪ್ತಾಃ |
ಪ್ರಚುರತರಹೃದಾಸಂ ಭಾವಯಾಂ ಚಕ್ರಿರೇಽನ್ಯೇ || ೪೩ ||

ವಾರ್ಧಿಕ || ಅಮಿತಮಾತಿ ಮಹಮಹಿಮೆ ಕೇಳಿ ಕೌತೂಹಲದಿ |
ಸಮಿತಿಯಲಿ ನೋಡಬಂದಿರೆ ವಿವಿಧ ಜನಪವರು |
ನಮಿಸುತಂ ಇವರ ದರ್ಶನ ಪೂರ್ವ ಕೇಳಿರ್ದ
ಗುಣಗಳಿಂ ಶತಗುಣಧಿಕ ||

ಅಮಲಗುಣಪೂರ್ಣರಂ ಪ್ರತ್ಯಕ್ಷ ನೋಡಿ ಕರ- |
ಕಮಲ ಮುಗಿಯುತ ವಿಸ್ಮಿತದಿ ನಿಂತಿಹ ಜನರು |
ಕ್ರಮವನ್ಯಜನಕೆ ಪ್ರಚುರತರ ಹೃದಯ ಕುಳ್ಳಿರೆನುತ
ಸನ್ಮಾನಿಸಿದರು || ೪೩ || ೭೯೬ ||

ಭಾವಾರ್ಥ:— ಅಮಿತಮತಿ = ಪೂರ್ಣಮನರಾದ ಶ್ರೀ ಪೂರ್ಣಪ್ರಜ್ಞಾಚಾರ್ಯರ ಮಹಾ ಮಹಾತ್ಮೆಯನ್ನು ಕೇಳಿ, ಬಹು ಸೋಜಿಗದಿಂದ, ಸಮಿತಿಯಲಿ= ಸಭೆಯಲಿ, ವಿವಿಧ ಜನಪದರು=ನಾನಾ ದೇಶದಲ್ಲಿರುವ, ಶ್ರೀಮದಾಚಾರ್ಯರನ್ನು ನೋಡಲಿಕ್ಕೆ ಬಂದ ಜನಗಳು, ಈ ಮಹಾತ್ಮರನ್ನು ನೋಡದೆ ಕಿಂತಲೂ ಮೊದಲಿಗೆ ಇವರಲ್ಲಿರುವ ಗುಣಗಳನ್ನು ಕೇಳಿದಕಿಂತಲೂ ನೂರು ಪಟ್ಟು ಹೆಚ್ಚಿನ ಗುಣಗಳಿಂದ ಗುಣ ಪೂರ್ಣರಾದ ಶ್ರೀ ಮಧ್ವರನ್ನು, ಪ್ರತ್ಯಕ್ಷ ಕಣ್ಣಾರೆ ನೋಡಿ, ಕೈಗಳನ್ನು ಜೋಡಿಸಿ, ನಮನಗೈಯ್ಯುತ್ತ ಬಹು ಆಶ್ಚರ್ಯ ಚಕಿತರಾಗಿ ನಿಂತಿರುವ ಜನಕ್ಕೂ, ಮತ್ತು (ಅನ್ಯ) ಬೇರೆ ಜನರಿಗೂ, ಪ್ರಚುರತರ ಹೃದಯ= ಅತ್ಯಂತ ಪೂರ್ಣ ಹೃದಯರಾದ ಶ್ರೀ ಸರ್ವಜ್ಞರು ಹೇ ಜನಗಳೇ, ನೀವು ಕುಳಿತುಕೊಳ್ಳಿರಿ, ಕುಳಿತುಕೊಳ್ಳಿರಿ ಎಂದು ಎಲ್ಲ ಜನರನ್ನು ಸನ್ಮಾನಿಸಿ ಆದರಿಸಿದರು.

ಇದೇ ಭಕ್ತ ಜನರ ಮೇಲಿರುವ ಗುರುಗಳ ಮಹಾ ದಯೆಯು.

ಶ್ಲೋಕ || ಅಲಮಲಮನುವಾದೇ ನಾನುವಾಚ್ಯೇತ ಪಶ್ಚಾ |
ನ್ನನು ಗುರವ ಇದಾನೀಮುದ್ಯತಾಹಿ ಪ್ರವಕ್ತುಮ್ ||
ನ ಮನನ ಮಧುನಾ ದ್ರಾಗಾವ್ರಜೇತ್ಯಾಹ್ವಯತ್ತಾಂ |
ಛ್ರುತ ಪರಿಚಯಸಕ್ತಾಂ ಛ್ರಾವಕಾಂ ಛ್ರಾವಕಾಗ್ರ್ಯಃ ||೪೪||

ವಾರ್ಧಿಕ || ಹೇ ಸಹಸ್ರಶ್ರೋತ ಅನುವಾದ ನಿಲಿ ನಿಲಿಸು |
ಗೈಸು ನೀಂ ಪಾಠ ಪಶ್ಚಾತ್ತದಲಿ ಚಿಂತನಿಗೆ |
ಸೂಸೆ ಸಮಯವಿದಲ್ಲ ಗುರುಗಳೀಗಲೆ ಪಾಠಪೇಳಲು-
ದ್ಯೋಗಿಸಿಹರು ||
ಆಶು ಬಾರೆನುತ ಶ್ರುತ ಪರಿಯಾಸಕ್ತರಂ |
ಐಸೆ ಪ್ರತ್ಪ್ರತ್ಯೇಕ ಶ್ರಾವಕರ ಕರೆಕರೆದ |
ಮೊಸಲಂ ಮತಿಯುಳ್ಳ ಮುಖ್ಯ ಶ್ರೋತ್ರಿಯ ಶಿಷ್ಯತಮ
ಗೆಳೆಯರಂ ಪಾಠಕೆ || ೪೪ || ೭೯೮ ||

ಭಾವಾರ್ಥ:— ಪಾಠ ಪ್ರಾರಂಭ ಕಾಲ ಒದಗಿತೆಂದು ಶ್ರೀ ಸರ್ವಜ್ಞರ ಮುಖ್ಯ ಶಿಷ್ಯನು ಎಲ್ಲ ಶಿಷ್ಯರನ್ನು ಪಾಠಕ್ಕೆ ಕರೆದ ವರ್ಣನೆ.

**ಅಲಮಲಮನುವಾದೇ;** ಎಂಬುವ ಪದಕ್ಕೆ ಹೇ ಸಹಸ್ರ ಶ್ರೋತ್ರ= ಎಲೈ ಅನುವಾದಕನೆ ಶ್ರುತಂ ಅನುವಾದಂ=ಕೇಳಿದ್ದನ್ನು ಅನುವಾದ ಮಾಡುವದು ಸಾಕು, ಸಾಕು, ನಿಲ್ಲಿಸು ನಿಲ್ಲಿಸು; ಮುಂ: ಪಾಠವಾದ ಮೇಲೆ ಬೇಕಾದಷ್ಟು ಹೊತ್ತಿನವರೆಗೆ ಚಿಂತನೆ ಮಾಡು. ಈಗ ಹೆಚ್ಚಾಗಿ ಚಿಂತನೆ ಮಾಡು: ಕಾಲವಲ್ಲ. ಇಕೋ ಶ್ರೀ ಸರ್ವಜ್ಞಾಚಾರ್ಯ ಗುರುಗಳು ಈಗಲೇ ಪಾಠ ಹೇಳಲಿಕ್ಕೆ ಪ್ರಾರಂಭ ಮಾ: ಹತ್ತಿರುವರು. ಕಾರಣ ನೀನು ಆಶು=ಬೇಗನೆ ಬಾ ಬಾ ಎಂದು ಕರೆದನು. ಮತ್ತು ಐಸೆ= ಇ: ರಂತೆಯೇ, ಶ್ರುತ ಪರಿಚಯಾಸಕ್ತರಂ= ಚಿಂತನೆ ಮಾಡುತ್ತಿರುವ ಎಲ್ಲ ಶಿಷ್ಯರನ್ನು ಪ್ರತಪ್ರತ್ಯೇಕವಾಗಿ ಶ್ರಾವಕರ= ಪಾಠ ಕೇಳತಕ್ಕ ಎಲ್ಲ ಶಿಷ್ಯರನ್ನು, ಮುಖ್ಯ ಶಿಷ್ಯನೊಬ್ಬನು ತನ್ನ ಎಲ್ಲ ಗೆಳೆಯರನ್ನು ಪಾಠಕ್ಕೆ ಕರೆದನು.

ಛಲಾರಿಕಾರರಾದರೂ "ಹೇ ಸಹಸ್ರ ಶ್ರೋತಾ'' ಎಂದು ಮಿತ್ರನಿಗೆ ಸಂಬೋಧನ ಮಾಡಿದ್ದು ಆ ಗೆಳೆಯನ ಹೆಸರೆಂದು ತಿಳಿಯಬಾರದು. ಬಹುಸಾರೆ ಪಾಠಗಟ್ಟು ಮಾಡುವ ಮಿತ್ರನೆಂದು ಸಂಬೋಧಿ ಸಿದರೆಂದು ಅರ್ಥ ಮಾಡಬೇಕು.

**ಶ್ಲೋಕ ॥ ಅಧಿಕಧಿಷಣಮೇನಂ ವ್ಯಾಖ್ಯಯಾ ಶೋಭಮಾನಂ |**
**ಹರಿಮಿವ ಕವಿವರ್ಯಂ ಸತ್ಯವತ್ಯಾಸ್ತನೂಜಮ್**
**ಸತತಮನಿಮಿಷಂ ಸಂದೃಶ್ಯ ಸಾನಂದಚಿತ್ತಾಃ ।**
**ಸಮಯಮಪಿ ಗತಂ ಸಂವಿದ್ರ(ಂದ್ರ)ತೇನ ಸ್ಮ ಲೋಕಾಃ॥೪೫॥**

ವಾರ್ಧಿಕ ॥ ಲೋಕ ಜನಗಳು ವ್ಯಾಖ್ಯೆಯಿಂದ ತಾಂ ಶೋಭಿಸುವ |
ಈ ಕವಿವರಂ ಜ್ಞಾನಿಶ್ರೇಷ್ಠ ಮಧ್ವಾರ್ಯಂ ।
ಶ್ರೀ ಕುವರಿ ಸತ್ಯವತಿ ದೇವಿಯಲ್ಯೆವತರಿಸಿದಂ
ಹರಿಯು ವೇದವ್ಯಾಸೇಂ ॥

ದೀಕಿಸುತ ಅಧಿಕ ಧಿಷಣರ ಸತತ ಎಡೆಬಿಡದೆ |
ತಾಕಿಸದೆ ನಿಮಿಷವಂ ಅತಿಪ್ರೀತಿಯಲಿ ನೋಡು- |
ತೇಕಮನ ಸಾನಂದ ಚಿತ್ತದಿರೆ ಗತಕಾಲವರಿದಾಯ್ತು
ಮಧ್ವಮಹಿಮೇಂ || ೪೫ || ೭೯ ||

**ಭಾವಾರ್ಥ:**— ಶ್ರೀ ಸರ್ವಜ್ಞ ಗುರುಗಳು ಸರ್ವ ಶಿಷ್ಯರಿಗೆ ಪಾಠವನ್ನು ಬಹು ಕಾಲವರಿಗೆ= ಸೂರ್ಯಾಸ್ತವರೆಗೆ ಪಾಠ ಹೇಳುವದನ್ನು ಲೋಕ ಜನಗಳು; ಹೀಗೆ ಸರಸವಾಗಿಯೂ, ಅತಿ ಗೂಢಾರ್ಥ ಬೋಧಕವಾಗಿಯೂ ಪಾಠ ಹೇಳತಕ್ಕವರಾಗಿ ಈ ಮಹಾ ವ್ಯಾಖ್ಯಾನದಿಂದ ಶೋಭಿಸುವ ಜ್ಞಾನಿಶ್ರೇಷ್ಠ ಶ್ರೀಮದಾಚಾರ್ಯರು ಶ್ರೀ ಕುವರಿ = ಸಂಪತ್ತಿಗೆ ಕಾರಣಳಾದ ಸತ್ಯವತೀದೇವಿಯು ಬಾಲ್ಯಾವಸ್ಥೆಯಲ್ಲಿ ಗಂಗಾ ಪ್ರವಾಹ ದಾಟುವ ಸಮಯ, ಮಂಜು ಮುಸುಕಿದ ನಾವೆಯಲ್ಲಿ ಶುಕ್ಲ ಶೋಣಿತ ಸಮ್ಬಂಧ ವಿಲ್ಲದೇ ಅವತಾರ ಮಾಡಿದ ಶ್ರೀ ಹರಿ ಭಗವಾನ್ ವೇದವ್ಯಾಸದೇವರೇ ಇವರೆಂದು, ಈಕಿಸುತ=

ಕೋಡುತ್ತ ಅಧಿಕ ಧಿಷಣ=ಪೂರ್ಣ ಬುದ್ಧಿಯುಳ್ಳ ಶ್ರೀ ಪೂರ್ಣಪ್ರಜ್ಞರನ್ನು ಹಾಕಿಸದೆ ನಿಮಿಷ ವನು=ಕಣ್ಣು ರೆಪ್ಪೆಗಳನ್ನು ಹಾಕದೇ ಸತತ ಎಡೆಬಿಡದೇ ಒಂದೇ ಸಮಾನವಾಗಿ ಏಕ ಮನಸ್ಸಿನಿಂದ ಬಹು ಸಂತೋಷದಿಂದ ನೋಡುತ್ತ ಆನಂದ ಮನಸ್ಕರಾಗಿರಲು; ಪಾಠ ಕೇಳುವಲ್ಲಿ ಎಷ್ಟು ಹೊತ್ತಾದರೂ ಬೇಸರಗೊಳ್ಳದೇ, ಗತಕಾಲ=ಕಳೆದ ಹೊತ್ತು ತಿಳಿಯದಂತೇ ಆಯಿತು. ಇದು ಶ್ರೀಮದಾಚಾರ್ಯರ ಮಹಾ ಮಹಿಮೆಯು. ಶ್ರೀ ಹರಿ ವೇದವ್ಯಾಸರಿಗೆ ಶ್ರೀ ಮಧ್ವರು ಮುಖ್ಯ ಪ್ರತಿಬಿಂಬರಾದ ಕಾರಣ ವ್ಯಾಖ್ಯಾನ ಹೇಳುವ ಕಾಲದಲ್ಲಿ ಶ್ರೀ ವೇದ ವ್ಯಾಸರಂತೆ ತೋರಿದ್ದು ಆಶ್ಚರ್ಯವಲ್ಲ

**ಶ್ಲೋಕ ||** **ಉದಯಮಿತ ಇವಾಸ್ತಂ ಯಂಶ್ಚ ಭಾನುರ್ಬಭಾಸೇ |**
**ಸ್ಫುಟಮಕಲುಷರೂಪೋ ದರ್ಶನೀಯೋನುರಾಗೀ ||**
**ಶುಚಿಹರಿಪದಪೂಪತ್ಸಂಪದೋರಾಶ್ರಿತಾನಾಂ |**
**ನ ಹಿ ಭವತಿ ವಿಶೇಷಃ ಸ್ವಪ್ರಕಾಶೋನ್ನತಾನಾಮ್ || ೪೬ ||**

ವಾರ್ಧಿಕ || ಆದಿತ್ಯ ನಸ್ತಂಗತಂ ಆಗ್ವಸಮಯ ಪ್ರಾ- |
ಭೇದವಿಲ್ಲದೆ ಸದ್ಯ ಉದಯರವಿಯೋಲ್ ಸ್ಫುಟಂ |
ದೀಧಿತನಕಲುಷರೂಪನು ದರ್ಶನನುರಾಗಿಯುಂ
ಸುಪ್ರಸನ್ನ ||

ನಾದುದಂ ಬಹುಯುಕ್ತ ನಿರ್ಮಲಂ ಶ್ರೀ ವಿಷ್ಣು-
ಪಾದವಾಕಾಶವಾಶ್ರಯಿಸ್ವಪ್ರಕಾಶೋನ್ನ
ತಾದಂ ಸುಸತ್ಪುರುಷರಿಗೆ ವಿಪದ.ಸಂಪದದಿ
ದುಃಖಸುಖ ವಿಕೃತಿಯಿಲ್ಲ || ೪೬ || ೮೦೦ ||

ಭಾವಾರ್ಥ:- ಇಷ್ಟರಲ್ಲಿಯೇ ಸೂರ್ಯಾಸ್ತ ಸಮಯವು ಪ್ರಾಪ್ತವಾಯಿತು. ಈ ಸೂರ್ಯಾಸ್ತ ವನ್ನು (೨) ಶ್ಲೋಕದಿಂದ ವರ್ಣಿಸುವರು. ಆದಿತ್ಯ=ಸೂರ್ಯನು ಅಸ್ತಂಗತ=ಮುಳುಗುವ ಸಮಯ ದಲ್ಲಿ, ಪ್ರಾಭೇದ,=ಕಿಂಚಿತ್ತಾದರೂ ಹೆಚ್ಚುಕಡಿಮೆಯಿಲ್ಲದೇ ಸರಿಯಾಗಿ, ಉದಯಕಾಲದ ಸೂರ್ಯ ನಂತೆ, ಸ್ಫುಟಂ=ಸ್ಪಷ್ಟವಾಗಿ, ಅಕಲುಷವಾಗಿ ಸ್ವಚ್ಛವಾಗಿ, ದೀಧಿತನು=ಪ್ರಕಾಶಮಾನರೂಪನೂ, ದರ್ಶನನು=ಅತಿ ನಿರ್ಮಲ ರೂಪನಾದುದರಿಂ, ಸಾಯಂಕಾಲದಲ್ಲಿ ಸುಖದಿಂದ ನೋಡಲು, ಶಕ್ಯ ವಾದಂಥಾತನು, ಅನುರಾಗಿ=ಆ ಸಂಧ್ಯಾ ಕಾಲದಲ್ಲಿ ಕೆಂಪು ವರ್ಣವುಳ್ಳವನಾಗಿ ಪ್ರಕಾಶಿಸುವನಾದುದಕೆ, ಸುಪ್ರಸನ್ನ=ನಿರ್ಮಲ ಮತ್ತು ಸಂತುಷ್ಟ ಸ್ವರೂಪನು; ಉದಯ ಸಂಪತ್ತಿನಂತೆಯೇ ತೋರಿದ್ದು ಬಹು ಯೋಗ್ಯವು. ಏಕೆಂದರೆ ಸಮಸ್ತ ದೇಶಕಾಲಗಳಲ್ಲಿ ವ್ಯಾಪಿಸಿದ ನಿರ್ಮಲವಾದ ಶ್ರೀ ವಿಷ್ಣು ಪಾದಾಖ್ಯ ಆಕಾಶವನ್ನು ಆಶ್ರಯಿಸಿಕೊಂಡು ತಮ್ಮ ಸ್ವರೂಪ ಸ್ವಪ್ರಕಾಶೋನ್ನತಿಯಿಂದ ಶೋಭಿಸುವ ಸತ್ಪುರುಷ ರಾದ ಸಜ್ಜನರಿಗೆ, ಆಪತ್ಕಾಲದಲ್ಲಿ ದುಃಖ, ಸಂಪತ್ಕಾಲದಲ್ಲಿ ಸುಖ, ಈ ಎರಡರ ವಿಕಾರವಿರದೇ ಎರಡೂ ಕಾಲವು ಸಮವಾಗಿರುವವು. ನಿರುತ ಶ್ರೀ ಹರಿ ಪಾದರತರಿಗೆ ಸುಖದುಃಖ ವಿಕಾರವಿಲ್ಲ

ಶ್ಲೋಕ || ಮರತಕ (ಕತ) ಮಣಿವರ್ಣೇ ಭೂತಧಾತ್ರೀಪುರಂಧ್ರ್ಯಾ |
ಲಸತಿ ಜಲಧಿವಾಸಸ್ಯರ್ಧಲೀನಃ ಕ್ಷಣಾರ್ಧಮ್ ||
ಅರುಣತರಣಿಬಿಂಬಚ್ಛದ್ಮನಾ ಪದ್ಮರಾಗಃ |
ಕಪಿಶಕರಕಲಾಪೋಲ್ಲಾಸ್ಯಭೂತ್ಸ್ರೀಕ್ಷಣೀಯಃ || ೪೭ ||

ವಾರ್ಧಿಕ || ಮೇದಿನಿಯೆ ಮಹಿಳಿಯೋ ಮರಕತಂ ಮಣಿವರ್ಣ |
ವಾದ ಕಾಂತಿಂ ಲಸಿತ ಜಲಧಿ ನೀಲಾಂಬರವೊ |
ವೋದ ವಸನದಿ ಅರ್ಧಕ್ಷಣವರಿಗೆ ಅರ್ಧಲೀನರುಣ
ರವಿ ಬಿಂಬನೆವದ ||

ವಾದ ಲೋಹಿತ ರಶ್ಮಿಗಳ ಗಡಣ ಕಾಂತಿಯೋ |
ಮೇದಿನೀ ತರುಣಿಟ್ಟ ಪದ್ಮರಾಗದ ಮಣಿಯೋ |
ಭೇದವಿಲ್ಲದೆ ನೋಡಲರ್ಹ ವಾದಿತು ಕೇಳಿ ಸೂರ್ಯಾಸ್ತ
ಸಮಯಂವದು || ೪೭ || ೮೦೧ ||

ಭಾವಾರ್ಥ:-- ಸೂರ್ಯಮಂಡಲವು ಅರ್ಧ ಮುಳುಗಿರಲು ಆ ಸಮಯವು ಬಹು ಚಂದ ವಾಗಿ ತೋರುವ ವರ್ಣನೆ

ಮೇದಿನಿಯೇ= ಭೂದೇವತೆ ಎಂಬ, ಮಹಿಳಿಯೋ=ಸ್ತ್ರೀಯೊ, ಮರಕತ ಮಣಿವರ್ಣ ಕಾಂತಿ ಲಸಿತ= ಇಂದ್ರ ನೀಲಮಣಿ ವರ್ಣದಂತೆ ಕಪ್ಪು ಮಿಶ್ರಿತ ನೀಲವರ್ಣ ವಿಶಿಷ್ಟವಾದ ಕಾಂತಿಯಿಂದ ಶೋಭಿಸುವ, ಜಲಧಿಯೇ = ಸಮುದ್ರವೇ; ಆ ಭೂದೇವತೆ ಎಂಬ ಸ್ತ್ರೀಯು ಇಟ್ಟ ನೀಲ ವಸ್ತ್ರವೋ, ವೋದ= ಸಂತೋಷಕರವಾಗಿ ಶೋಭಿಸುವ ಈ ನೀಲ ವಸ್ತ್ರದಲ್ಲಿ ಅರ್ಧ ಕ್ಷಣ = ಹದಿನೈದು ಕಲಾರೂಪವಾದ ಕಾಲ ಅಂದರೆ ಕಾಲು (ಪಾವು) ಘಳಿಗೆಯ ಪರಿಯಂತ, ಅರ್ಧಲೀನ=ಸರಿಯಾಗಿ ಅರ್ಧ ಮುಳುಗಿದ=ಅಡಗಿದ, ಅರುಣ= ಕೆಂಪಾದ ರವಿಬಿಂಬ=ಸೂರ್ಯ ಮಂಡಲ ಕಾಂತಿಯು, ನೆವದ= ಕಾರಣವಾದ ಅರೆ ಸೂರ್ಯನ ಕಾಂತಿಯಿಂದ, ಲೋಹಿತ=ಕೆಂಪಾದ, ರಶ್ಮಿಗಳ ಗಡಣ=ಕಿರಣ ಸಮೂಹದ ಕಾಂತಿಯಂತೇ ಸುಪ್ರಕಾಶಿಸುವ, ಮೇದಿನಿ ಎಂಬ ಸ್ತ್ರೀಯು ಇಟ್ಟ ಕೆಂಪು ವರ್ಣದಿಂದ ಶೋಭಿಸುವ ಕೆಂಪು ರತ್ನ ( ಪದ್ಮರಾಗದ ಮಣಿ ) ವೋ ? ಈ ಎಲ್ಲ ವಸ್ತುಗಳು ಪರಸ್ಪರ ಒಂದಕ್ಕೊಂದು ಭೇದ ತೋರದಂತೆ; ಸೂರ್ಯಾಸ್ತ ಸಮಯವು ನೋಡಲಿಕ್ಕೆ ಯೋಗ್ಯವಾದಿತು.

ಸುಂದರ ಸ್ತ್ರೀಯಳುಟ್ಟ ನೀಲಿಯ ಬಣ್ಣದ ಶೀರೆಯಲ್ಲಿ, ಆ ತರುಣಿಯು ಇಟ್ಟ ಕೆಂಪು ಆಭರಣವು ಅರ್ಧ ಅಡಗಿದ ಕೆಂಪು ರತ್ನದಂತೆ ಭೂದೇವತೆಯ ಮೇಲಿರುವ ಕಪ್ಪಾದ ಸಮುದ್ರದೊಳಗೆ, ಅರ್ಧ ಮುಳುಗಿದ ಸೂರ್ಯಮಂಡಲವು ಅತಿ ಕೆಂಪಾಗಿ ಶೋಭಿಸಿತು. ಭೂದೇವಿಯೇ=ಸ್ತ್ರೀ, ಸಾಗರವೇ= ನೀಲವಸ್ತ್ರ, ಅರ್ಧ ಸೂರ್ಯಮಂಡಲವೇ= ಸ್ತ್ರೀಯಳಿಟ್ಟ ಕೆಂಪಾದ ರತ್ನ. ಈ ಮೂರು ವಸ್ತುಗಳಿಗೆ ಪರಸ್ಪರ ಹೋಲಿಸಿ ರೂಪಕಾಲಂಕಾರದಿಂ ಬಣ್ಣಿಸಿದ ಕವಿ ಚಮತ್ಕೃತಿಯು.

**ಶ್ಲೋಕ ॥ ಅವನಿವನವನಧ್ರುಗ್ವ್ಯಾಯುಖಾಹಮ್ಮಹತ್ಸು ।**
**ಪ್ರಕೃತಿಗುಣಸಮೇತಾವ್ಯಾಕೃತಾಕಾಶ ಏಕಮ್ ॥**
**ತತಮತನುಮನಾಃ ಸೋಽಚಿಂತಯತ್ಸಮಾಧಾ ।**
**ವಸುರಸುರನರೇಭ್ಯಃ ಸದ್ಗುಣಂ ನಾಥಮನ್ಯಮ್ ॥ ೪೮ ॥**

ವಾರ್ಧಿಕ ॥ ಸುಖತೀರ್ಥರತನುಮುನರುಂ ಸತ್ಸಮಾಧಿಯಲಿ ।
ನಿಖಿಳ ಭೂವುದಕಾಗ್ನಿ ವಾಯುವಾಕಾಶ ಮೇಲ್ ।
ಪ್ರಕಟಿಪ ಅಹಂಕಾರ ಮಹತತ್ವ ಅವ್ಯಕುತ ತವೋರಜ
ಸತುವ ತ್ರಯಗುಣ ॥

ಪ್ರಕೃತಿ ಮೀರಲು ನೂರುಮಡಿ ವ್ಯಾಪ್ತ ವಿಷ್ಣುವಿನ ।
ವಿಕಲವಿಲ್ಲದೆ ಭೇದರಹಿತೇಕ ರೂಪ ಜಗ ।
ದಖಿಳೊಡೆಯ ಜಡಚೇತನಸುರ ಸುರನರಭಿನ್ನ
ಸದ್ಗುಣೊಡೆಯನ ಧ್ಯಾನಿಸೆ ॥ ೪೮ ॥ ೮೦೨ ॥

ಭಾವಾರ್ಥ :— ಶ್ರೀಮದಾಚಾರ್ಯರು ಸಾಯಂಕಾಲದಲ್ಲಿ ಆಚರಿಸಿದ ಧ್ಯಾನೋಪಾಸನೆಯ ಕ್ರಮವನ್ನು ವರ್ಣಿಸುವರು. ಆನಂದದಾಯಕ ಶಾಸ್ತ್ರವನ್ನು ರಚಿಸಿದ, ಅತನುಮುನರಂ=ಅಲ್ಪರಾಗದೇ ಇರುವ ಮಹಾಮುನರಾದ ಶ್ರೀ ಪೂರ್ಣ ಪ್ರಜ್ಞಾಚಾರ್ಯರು, ಸತ್ಸಮಾಧಿಯಲಿ=ಏಕಾಗ್ರ ಚಿತ್ತದಿಂದ ಬಿಂಬನಾದ ಶ್ರೀ ಹರಿಯ ಮಂಗಳ ರೂಪಗಳ ಧ್ಯಾನ ಮಾಡುವ ಶೋಭನ ಕಾಲದಲ್ಲಿ, ನಿಖಿಳ=ಸಮಸ್ತ ಭೂ=ಭೂಮಿಭಾಗ ಬ್ರಹ್ಮಾಂಡಗತ, ಬ್ರಹ್ಮಾಂಡ ಖರ್ಪರ, ಬಹಿ ಬ್ರಹ್ಮಾಂಡದ, ಉದಕಾವರಣ, ಅದರ ಮೇಲಿರುವ ತೇಜೋ ಆವರಣ, ಅಲ್ಲಿಂದ ವಾಯು ಆವರಣ, ಅಲ್ಲಿಂದ ಆಕಾಶಾವರ್ಣ, ಈ ನಿರ್ದಿಷ್ಟ ವಾದ ಪಂಚಭೂತಾ ವರ್ಣಗಳ ಮೇಲೆ, ಪ್ರಕಟಿಪ=ವ್ಯಕ್ತವಾಗಿ ತೋರುವ, ಅಹಂಕಾರತತ್ವಾವರ್ಣ, ಅಲ್ಲಿಂದ ಮಹತ್ತತ್ವಾವರ್ಣ, ತಮೋ, ರಜ, ಸತ್ವಾವರಣಗಳಿಂದ ಕೂಡಿದ ಅವ್ಯಕುತತತ್ವಾವರಣ, ಇಂಥ ಜಡ ಪ್ರಕೃತಿ ಆವರಣ ಮೇಲೆ ಮಹಾ ಘನತೆಯಿಂದ ವ್ಯಾಪಿಸಿರುವ ನಿತ್ಯವಾದ ಅವ್ಯಾಕೃತಾಕಾಶದಲ್ಲಿ ನೂರು ಮಡಿ=ಶತ, ಸಾವಿರ ಅನಂತ ಪಾಲು ಹೆಚ್ಚಾಗಿ ಅನಿರುದ್ಧ, ಪ್ರದ್ಯುಮ್ನ ಸಂಕರುಷಣ, ವಾಸುದೇವಾವರಣಗಳಲ್ಲಿ ವ್ಯಾಪಿಸಿರುವ, ಶ್ರೀ ವಿಷ್ಣುನಾಮಕ ಶ್ರೀ ಹರಿಯ ರೂಪವನ್ನು ವಿಕಲ=ಸ್ವಲ್ಪವಾದರೂ ಕಡಿಮೆಯಿಲ್ಲದೇ ಕಿಂಚಿತ್ತಾದರೂ ಭೇದವಿಲ್ಲದೇ, ಒಂದೇ ರೂಪನಾದ, ಸಮಸ್ತ ಜಗತ್ತಿಗೆ ಸ್ವಾಮಿಯು ಮತ್ತು ಜಡ ವಸ್ತುಗಳಿಂದಲೂ, ಚೇತನರಾದ ಜೀವರಿಂದಲೂ, ಶ್ರೀ ಲಕ್ಷ್ಮೀದೇವಿಯರಿಂದಲೂ, ಅಸುರ=ದೈತ್ಯರಿಂದಲೂ, ಸುರ=ದೇವತೆಗಳಿಂದಲೂ, ನರ=ಮನುಷ್ಯರಿಂದಲೂ ಬೇರೆ ಇರುವ ಸದ್ಗುಣ=ನಿರ್ದುಷ್ಟವಾದ ಜ್ಞಾನಾನಂದಾದಿ ಗುಣಪೂರ್ಣವುಳ್ಳ ಸರ್ವ ಸ್ವಾಮಿಯನ್ನು ಧ್ಯಾನ ಮಾಡಿದರು. ಸಮಸ್ತ ಬ್ರಹ್ಮಾಂಡದಲ್ಲಿಯೂ ಬ್ರಹ್ಮಾಂಡ ಬಹಿಯಲ್ಲಿಯೂ, ವ್ಯಾಪಿಸಿರುವ ವ್ಯಕ್ತರೂಪನಾದ ತಮ್ಮ ಬಿಂಬನನ್ನು ಮತ್ತು ವಾಸುದೇವಾವರಣವರಿಗೆ ನಿತ್ಯ ಸನ್ನಿಹಿತನಾದ ಶ್ರೀ ವಿಷ್ಣುವನ್ನು ಅಂತಃಕರಣ ಜನ್ಯ

ಅನುಮಾನದಿಂದಲೂ ಧ್ಯಾನಿಸುವದು ಬ್ರಹ್ಮವಾಯುಗಳ ಯೋಗ್ಯ ಉಪಾಸನೆಯು ಹೊರ್ತಾಗಿ ಅನ್ಯರ ಅಧಿಕಾರವಲ್ಲ.

"ಪ್ರಕೃತಿ ವಿಹರಲು ನೂರು ಮಡಿ ವ್ಯಾಪ್ತ"ವೆಂದು ಈ ಹೆಚ್ಚಿನ ಪದವನ್ನು ಶ್ರೀ ದಾಸಾರ್ಯರು ಉಪಯೋಗಿಸಿರುವರು. ಇದು ಮಾರ್ಮಿಕವಾದ ಬಹು ಸೂಕ್ಷ್ಮ ಪ್ರಮೇಯವು. ಶ್ರೀ ವಿಜಯ ರಾಯರ ಸುಳಾದಿಗಳ ನಿಜಾರ್ಥವನ್ನು ತಿಳಿದ ಜ್ಞಾನಿಗಳೆಂದು ಗೊತ್ತಾಗುತ್ತದೆ.

ಪ್ರತಿಯೊಬ್ಬ ಮೋಕ್ಷ ಯೋಗ್ಯ ಜೀವಿಗಳು, ದುಷ್ಟ ಕರ್ಮಾಚರಣೆಯನ್ನು ಬಿಟ್ಟು ಸತ್ಕರ್ಮಾಚರಣೆಯ ನೆಸಗುತ್ತ, ಸಕಲ ಸಾಸ್ತ್ರಸಾರವನ್ನು ತಿಳಿಯುತ್ತ, ಶ್ರೀ ಗುರುಗಳ ಅನುಗ್ರಹ ಸಂಪಾದಿಸಿ, ಸಾಯಂಪ್ರಾತಃಕಾಲದಲ್ಲಿ ತಮ್ಮ ಯೋಗ್ಯತಾನುಗುಣವಾಗಿ ಧ್ಯಾನೋಪಾಸನೆಯನ್ನು ಅವಶ್ಯ ಮಾಡುವದೆಂದು ಶ್ರೀಮದಾಚಾರ್ಯರೇ ಲೋಕ ಶಿಕ್ಷಾರ್ಥವಾಗಿ ತೋರಿಸಿದವರೇ ಹೊರ್ತಾಗಿ, ನಿತ್ಯ ಪ್ರತ್ಯಕ್ಷ ಅನಂತ ರೂಪವನ್ನು ಧ್ಯಾನಗೈಯುವ ಭಕ್ತಿಯೋಗಿಗಳಲ್ಲಿ ಶ್ರೇಷ್ಠರಾದವರಿಗೆ ಸಹ ಧ್ಯಾನ ಮಾಡುವದು ಮುಖ್ಯವಾದುದೆಂದು ತೋರಿದ್ದು.

**ಶ್ಲೋಕ ॥ ವ್ಯದಧತ ಪರಿಹೃಷ್ಟ ಜ್ಯೋತಿಷಃ ಸಾಧುಸಾಂಧ್ಯಂ ।**
**ನಿಯಮಮವನಿದೇವಾ ಜ್ಯೋತಿಷೋಽಸ್ಯಾವಲೋಕಾತ್ ॥**
**ವಿಹಿತಮನುಸರಂತೋ ಧರ್ಮಶಾಸ್ತ್ರಪ್ರವೀಣಾಃ ।**
**ಸವಿತರಿ ಸವಿತಾರಂ ಚಿಂತಯಂತಸ್ತ್ರಿಲೋಕ್ಯಾಃ ॥ ೪೯ ॥**

ವಾರ್ಧಿಕ ॥ ಸದಮಲಂ ಅಸ್ತಾದ್ರಿ ರವಿರಶ್ಮಿ ಈಕ್ಷಿಸುತ ।
ಬುಧರವನಿ ದೇವರುಂ ಧರ್ಮಶಾಸ್ತ್ರದಿ ನಿಪುಣ ।
ವಿಧಿವತು ಸದಾಚಾರದಲ್ಲಿ ಅನುವೃತರು ತಾಂ
ಸೂರ್ಯನಲಿ ಮೂರುಲೋಕ ॥

ಹದುಳದಿಂ ಸೃಷ್ಟಿಯನು ಮಾಡ್ದ ನಾರಾಯಣನ ।
ಮುದದಿಂದ ಧ್ಯಾನಿಸುತ ನಕ್ಷತ್ರ ಕಾಣ್ವನಕ ।
ಕದಲದಲೆ ನಿಯಮ ಸಂಧ್ಯಾಕಾಲ ಜಪಲೋಪಿಸದೆ
ಭಕುತಿಯಿಂ ಮಾಡ್ದರೊ ॥ ೪೯ ॥ ೮೦೩ ॥

ಭಾವಾರ್ಥ :– ಧರ್ಮಶಾಸ್ತ್ರದಲ್ಲಿ ನಿಪುಣರಾದ ಬ್ರಾಹ್ಮಣೋತ್ತಮರು ಸಾಯಂ ಸಂಧ್ಯಾ ಮಾಡಿದ ವರ್ಣನೆ.

ಸದಮಲಂ= ನಿರ್ಮಲವಾದ, ಅಸ್ತಾದ್ರಿ= ಅಸ್ತಮಯವೆಂಬುವ ಪರ್ವತದಲ್ಲಿ, ಸೂರ್ಯನ ಕಿರಣಗಳನ್ನು ನೋಡಿದವರಾಗಿ, ಬುಧರವನಿ ದೇವರುಂ= ಪಂಡಿತರಾದ -ಬ್ರಾಹ್ಮಣ ಶ್ರೇಷ್ಠರು, ಶ್ರುತಿ ಸ್ಮೃತ್ಯಾದಿಗಳಲ್ಲಿ ಹೇಳಿದಂತೆ ವಿಧಿವತು= ನಿಯಮದಂತೆ ಒಳ್ಳೆ ಶುಭ ಕರ್ಮಾಚಾರಗಳಲ್ಲೆ ಅನುವೃತರು= ನಿರತರಾಗಿ ಆಚರಿಸುವ, ಧರ್ಮಶಾಸ್ತ್ರದಲ್ಲಿ ಕುಶಲರು, ಸೂರ್ಯದೇವನಲ್ಲಿ, ಹದುಳ=

ಸಂತೋಷದಿಂದ ಅಥವಾ ಜಗತ್ತಿಗೆ ಸೌಖ್ಯವನ್ನು ಕೊಡಲು, ಮೂರು ಲೋಕವನ್ನು ಸೃಷ್ಟಿ ಮಾಡಿದ ನಾರಾಯಣನನ್ನು, ಬಹು ಸಂತೋಷದಿಂದ ಧ್ಯಾನಿಸುತ್ತ, ಸಂಧ್ಯಾಕಾಲದ ನಿಯಮವನ್ನು, ಕದಲದಲೇ ಮೀರದಲೇ, ನಕ್ಷತ್ರ ಕಾಣುವ ಪರಿಯಂತ, ಸಂಧ್ಯಾಕಾಲದ ಜಪಾದಿಗಳನ್ನು ಲೋಪ ಮಾಡದೇ, ಬಹು ಭಕ್ತಿವಂತರಾಗಿ ಮಾಡಿದರು. " ಆಜ್ಯೋತಿಷೋ ದರ್ಶನಾತ್ ಪೂರ್ವಾ ಸಂಧ್ಯಾಂ ಜಪಂಸ್ತಿಷ್ಠೇ ತ್ಸಾವಿತ್ರೀಮಾರ್ಕದರ್ಶನಾತ್। ಉತ್ತರಾಂತು ಸಮಾಸೀತ ಸಮ್ಯಗ್‌ರುಕ್ಷವಿಭಾವನಾದಿತಿ ವಿಹಿತಮ್" ಎಂದು ಭಾವಪ್ರಕಾಶಿಕೆಯಲ್ಲಿ ಹೇಳಿದ್ದಾರೆ. ಇದರ ತಾತ್ಪರ್ಯವೇನಂದರೆ, ಪ್ರಾತಃಕಾಲದ ಸಂಧ್ಯಾ ಗಾಯತ್ರಿ ಜಪವು ಸೂರ್ಯನನ್ನು ನೋಡುವವರೆಗೆ (ನಕ್ಷತ್ರ ಇರುವಾಗ) ಪೂರ್ವಾಭಿಮುಖವಾಗಿ ಎದ್ದು ನಿಂತು ಗ್ರಾಯತ್ರೀ ಜಪವನ್ನು ಮಾಡಬೇಕು ಸಾಯಂಕಾಲ ಸಂಧ್ಯಾ ನಕ್ಷತ್ರ ಕಾಣುವ ಪರಿಯಂತ ವಾಗಿ ಕುಳಿತುಕೊಂಡು ಜಪ ಮಾಡಬೇಕು.

**ಶ್ಲೋಕ ॥ ವಿವಿದುರತಿತರಾಂ ಯೇ ದೇವತಾಃ ಷೋಡಶೋಕ್ತಾ ।**
**ಹರಹರಿಹಯ ಪೂರ್ವಾಂತ್ಯಾಃಕಲಾ ಭೇದತೋಽಸ್ಯ ॥**
**ಸುಹುತಮತಿಸೃಜಂತೋಽಗ್ನ್ಯಾಹಿತಾಸ್ತೇಽಗ್ನಿಹೋತ್ರಂ ।**
**ವ್ಯಧುರುಚಿತಮಪೂರ್ವಂ ಯೇನ ಗಾಯತ್ರಲೋಕಃ ॥ ೫೦ ॥**

ವಾರ್ಧಿಕ ॥ ಆಹಿತಾಗ್ನಿಯ ಹೋತ್ರ ಕರ್ಮ ಒಳಭೇದ ಕಲೆ ।
ಯಾಹ ಶ್ರುತ್ಯುಕ್ತ ಅಭಿಮಾನಿ ಷೋಡಶದೇವ ।
ರೀಹ ಹರನಾದಿ ಅಂತಿಮದಿಂದ್ರನೆಂದು ಚನ್ನಾಗರಿತ
ಅಗ್ನಿಹೋತ್ರೇಂ ॥

ಆಹಂ ಮತಿಯ ಬಿಟ್ಟು ಭಗವದರ್ಪಿತ ವಿಧಿಯಲಿ ।
ಸ್ವಾಹ ಎಂಬುಚಿತ ಪೂರ್ವಾಗ್ನಿ ಹೋಮಂ ಗೈದ ।
ರೀಹೋತ್ರಕಂ ಸ್ವಗಾಯತ್ರ ಮೋಕ್ಷನೊ ವಿಷ್ಣು
ಲೋಕವೇಂ ಪ್ರಾಪ್ತಿದಿಟವೇಂ ॥ ೫೦ ॥ ೮೦೪ ॥

ಭಾವಾರ್ಥ :— ಸಂಧ್ಯಾ ಮುಗಿದಮೇಲೆ ಅಗ್ನಿಹೋತ್ರವನ್ನಿಟ್ಟ ಬ್ರಾಹ್ಮಣರು ಅಗ್ನಿಹೋತ್ರ ವನ್ನು ಮಾಡಿದ ವಿವರಣೆ.

ಅಗ್ನಿಹೋತ್ರಗಳಲ್ಲಿ ಯಾರು ಆಹಿತಾಗ್ನಿಯಿಟ್ಟವರು, ಅಗ್ನಿಹೋತ್ರ ಕರ್ಮಕ್ಕೆ ಒಳಗಾದ ವೇದೋಕ್ತವಾಗಿರುವ ಕಲಾಭೇದದಿಂದ ಆ ಕಲೆಗಳಿಗೆ ಅವಾಂತರಾಭಿಮಾನಿ ಹದಿನಾರು ದೇವತೆಗಳಲ್ಲಿ ಹರ=ರುದ್ರ ಮೊದಲಿಗೆ, ಇಂದ್ರದೇವರೆ ಕೊನೆಯಾಗಿರುವ ದೇವತೆಗಳ ಕಾರ್ಯವನ್ನು ಚನ್ನಾಗಿ ತಿಳಿದಿರುವರೊ, ಅಂಥ ಅಗ್ನಿಹೋತ್ರಿಗಳು "ನಮಮ" ಎಂದು ಸ್ವಕರ್ತೃತ್ವವಾದ ಆಹಂಭಾವ ವನ್ನು ಬಿಟ್ಟು, ಯಾವ ಫಲಾಪೇಕ್ಷೆಯಿಲ್ಲದೇ, ಶ್ರೀ ಭಗವಂತನೇ ಸಕಲ ಕರ್ತಾ ಕಾರಯಿತಾ ಎಂದು ಪರಮಾತ್ಮಗೆ ಅರ್ಪಣ ಬುದ್ಧಿಯಿಂದ "ಸ್ವಾಹಾ" ಎಂಬುವ ಸರ್ವರಿಗೆ ಅಸಾಧಾರಣವಾದ ಉಚಿತ=

ತಮ್ಮಗೆ ಯೋಗ್ಯವಾದ "ಅಗ್ನಾ ಹವಿಃ ಸ್ವಾಹೇತಿ ಹುತ್ವಾ ಅಗ್ನಯ ಇದಂ ನಮಮೇತ್ಯುಕ್ತಿಂ ಕುರ್ವಂತಃ" ಎಂದು ಅಗ್ನಿಹೋತ್ರ ಕರ್ಮವನ್ನು ಮಾಡಿದರು. ಯಾವ ಈ ಅಗ್ನಿಹೋತ್ರ ಕರ್ಮದಿಂದ ಗಾಯತ್ರ ಎಂಬುವ ಗಾಯತ್ರನಾಮಕ ಹರಿಯ ಲೋಕ(ವೈಕುಂಠ)ವೆಂಬುವ ಮೋಕ್ಷವೇ ಆಗುತ್ತದೋ, ಅಂತಹ ಅಗ್ನಿಹೋತ್ರ ಕರ್ಮ ಮಾಡಿದರು. ಅದು ಹೇಗೆಂದರೆ "ಗಾಯತೇ ತ್ರಾಯತೇ ಚೇತಿ ವ್ಯುತ್ಪತ್ಯಾ, ಗಾನ ತ್ರಾಣ ಕರ್ತೃತ್ವೇನ ಭಗವತಃ ಗಾಯತ್ರ ಶಬ್ದವಾಚ್ಯತ್ವಂ ಜ್ಞೇಯಂ" ಎಂದು ಛಲಾರಿ ಟಿಪ್ಪಣಿ. ಈ ಬಗೆಯ ಅಗ್ನಿಹೋತ್ರ ಕರ್ಮವು ಸಹಿತ ಶ್ರೀ ಭಗವದರ್ಪಣ ಬುದ್ಧಿಯಿಂದ ಮಾಡಿದರೆ ಜ್ಞಾನದ್ವಾರ ಮೋಕ್ಷಕ್ಕೆ ಕಾರಣವಾಗುತ್ತದೆ. "ಕರ್ಮಣಾ ಜ್ಞಾನಮಾತನೋತಿ ಜ್ಞಾನೇನಾಮೃತೀ ಭವತಿ" ಎಂದು ಶ್ರುತ್ಯುಕ್ತಿಯು. ಅಗ್ನಿಹೋತ್ರ ಕರ್ಮದಲ್ಲಿ ಷೋಡಶ ದೇವತಾ ಪ್ರತಿಪಾದಕ ಶ್ರುತಿಯು ಭಾವಪ್ರಕಾಶಿಕೆಯಲ್ಲೂ, ಛಲಾರಿ ಟಿಪ್ಪಣಿಯಲ್ಲೂ ಈ ಪ್ರಕಾರ ಉದಾಹರಿಸಿರುವರು.

"ರೌದ್ರಂ ಗವಿ ಸದ್ವಾಯವ್ಯ ಮುಪಾವಃ ಸೃಷ್ಟಮಾಶ್ವಿನಂ ದುಹ್ಯಮಾನಂ ಸೌಮ್ಯಂ ದುಗ್ಧಂ ವಾರುಣಮಧಿಶ್ರಿತಂ ಪೌಷ್ಣಂ ಸಮುದಯಂತಂ ಮಾರುತಂ ನಿಷ್ಪಂದಮಾನಂ ವೈಶ್ವದೇವಂ ಬಿಂದು ಮನ್ಮೈತ್ರಂ ಶರೋಗೃಹೀತಂ ದ್ಯಾವಾ ಪೃಥಿವೀಯಮುದ್ವಾಸಿತಂ ಸಾವಿತ್ರಂ ಪ್ರಕ್ರಾಂತಂ ವೈಷ್ಣವಂ ಹ್ರಿಯಮಾಣಂ ಬಾರ್ಹಸ್ಪತ್ಯ ಮುಪಾವಸನ (ಮುಪಸಂಪನ್ನ) ಮಗ್ನೇಃ ಪೂರ್ವಾಹುತಿಃ ಪ್ರಜಾಪತೇರುತ್ತರೈಂದ್ರಂ ಹುತಮಿತಿ" ಶ್ರುತ್ಯುಕ್ತಾಃ ಷೋಡಶ ದೇವತಾಃ ॥

ಶ್ಲೋಕ ॥ ವಿಧುರಯಮಕಲಂಕಃ ಸಾದ್ಯದಿ ಸ್ಯಾದವಶ್ಯಂ ।
ನನು ನಿಜಸಹಜಾಯಾಃ ಸುಂದರಾಸ್ಯೇಂದುಕಲ್ಪಃ ॥
ಇತಿ ಸುರಲಲನಾಭಿರ್ಲಾಲಿತಃ ಖೇಚರೀಭಿಃ ।
ಸಮಧಿಕ ಮಧುರಿಮ್ಣಾ ಪೂರ್ಣಚಂದ್ರಸ್ತದೋದ್ಯೈತ್ ॥ ೫೧ ॥

ವಾರ್ಧಿಕ ॥ ಸ್ವಾಮಿ ಪೂರ್ಣೇಂದುವಂ ಉದಯಿಸಿದನಾ ಕಾಲ ।
ಸೋಮನುಂ ಶಶಕಲೆಯ ದೋಷರಹಿತಾವಗಂ ।
ಶ್ರೀ ಮಹಾ ಲಕುಮಿ ನಿಜ ಸಹಜಾತೆ ಸುಂದರಾಸ್ಯೇಂಮವಿಗೆ
ಆವಶ್ಯಮಂ ॥

ಸಾಮ್ಯ ಪೊಂದುವನು ದಿಟ ಹೀಗಿಲ್ಲದಿರೆಯು ಸಹ ।
ಆ ಮಹಾ ಶ್ರೇಷ್ಠ ಸೌಂದರ್ಯದಿಂ ಮಿಳಿತೆಂದು ।
ವ್ಯೋಮ ಸಂಚರಿಪ ಸುರಭಾಮೆರಿಂದಾದೃತಾದನು
ಸಮಧಿಕ ಮಧುರಿಮ್ಣಾ ॥ ೫೧ ॥ ೮೦೫ ॥

ಭಾವಾರ್ಥ :— ಚಂದ್ರೋದಯ ವರ್ಣನೆ.

ತದಾ = ಆ ಕಾಲದಲ್ಲಿ ಲೋಕಕ್ಕೆ ಸ್ವಾಮಿಯಾದ ಪೂರ್ಣಚಂದ್ರನು ಉದಯಿಸಿದನು. ಆ ಪೌರ್ಣಮೆಯ ಪೂರ್ಣೇಂದುವು ಮೊಲದ ಚಿನ್ಹವೆಂಬ ನೀಲವರ್ಣ ದೋಷರಹಿತನಾಗಿದ್ದರೆ, ಕ್ಷೀರ ಸಮುದ್ರದಲ್ಲಿ ಆವಿರ್ಭೂತಳಾದ ತನ್ನ ಸೋದರಿಯಾದ ಶ್ರೀ ಮಹಾ ಲಕ್ಷ್ಮೀದೇವಿಯ ಸುಂದರವಾದ

ಮುಖ ಚಂದ್ರಮನಿಗೆ, ಅವಶ್ಯಮ್=ನಿಯಮೇನ ನಿಜವಾಗಿ ಸಮನಾಗುವನು. ಇಂಥ ಶಶಿಕಲಾ ದೋಷರಹಿತನಾಗದೇ ಶಶಿಕಲಾಯುಕ್ತನಾಗಿದ್ದರೂ ಸಹಿತವಾಗಿ, ಮಹಿಮೋಪೇತವಾದ, ಶ್ರೇಷ್ಠವಾದ, ಸೌಂದರ್ಯದಿಂದ ಕೂಡಿಕೊಂಡೇ ಇರುವನೆಂದು, ವ್ಯೋಮ ಸಂಚರಿಪ ಆಕಾಶದಲ್ಲಿ ಸಂಚಾರ ಮಾಡುವ ದೇವತಾ ಸ್ತ್ರೀಯರಿಂದ ಹೊಗಳಿಸಿಕೊಳ್ಳುತ್ತಾ "ಸರ್ವಾಧಿಕ ಮಧುರಿಮ್ಣಾ" ಅತ್ಯುತ್ತಮ ಸೌಂದರ್ಯದಿಂದ ಯುಕ್ತನಾದ ಪೂರ್ಣೇಂದುವು ಅಖೇಚರೀ ಸುರಭಾಮೆಯರಿಂದ ಲಾಲನೆ ಮಾಡಿಸಿಕೊಳ್ಳುವ ಚಂದ್ರನುದಯಿಸಿದನು.

ಈ ಪೂರ್ಣಚಂದ್ರನು ಶಶಿಕಲಂಕನಾದುದರಿಂದ, ಅಕಳಂಕಳಾದ ಶ್ರೀ ರಮೆಯ ಮುಖಕೆ ಸಮಾನನಾಗದಿದ್ದರೂ ಇಂಥ ಚಂದ್ರನ ಸೌಂದರ್ಯವು ಅನ್ಯತ್ರ ಇರದೇಯಿಂದ್ದ ಕಾರಣ ಅನ್ಯರಿಗೂ ಸಮಾನವಲ್ಲವಾದರೂ, ಅನ್ಯ ಜನರ ಸೌಂದರ್ಯಾಪೇಕ್ಷಯಾ ಅಧಿಕ ಸುಂದರನಾದ ಕಾರಣ ದೇವತಾ ಸ್ತ್ರೀಯರಿಂದ ಹೊಗಳಿಸಿಕೊಂಡನೆಂದು ಭಾವ.

**ಶ್ಲೋಕ ॥ ಇನವಿರಹಮಸಹ್ಯಂ ಪ್ರಾಪ್ಯ ಪದ್ಮೈಃ ಸಚಕ್ರೈಃ ।**
**ಶ್ರಿರಮಿಹ (ಮಪಿ) ಪರಿತಪ್ತಂ ಪೂರ್ವತಪ್ತೈಃ ಸುತುಷ್ಟಮ್ ॥**
**ಮೃದುಕುಮುದಚಕೋರೈಃ ಪಾದಸಂಗೇನ ರಾಜ್ಞಃ ।**
**ಕಮಪಿ ಸಕಲ ಹೃದ್ಯಂ ಕಲ್ಪಯೇನ್ನೈವ ದೈವಮ್ ॥ ೫೨ ॥**

ವಾರ್ಧಿಕ ॥ ನಿಶಿಯಲ್ಲಿ ಚಕ್ರವಾಕ್ ಪಕ್ಷಿಸಹ ತಾವರೆ ಸ- ।
ಹಿಸಲಸಾಧ್ಯ ಇನನ ವಿರಹವ ಪೊಂದೆಸುಗೆಟ್ಟು ।
ಶಶಿ ಕಿರಣ ಸಂಪರ್ಕದಿಂದ ರಾತ್ರ್ಯವಸಾನ ಪರ್ಯಂತ
ಪರಿದುಃಖಿತಂ ॥
ಬಿಸಜಮಿತ್ರೋದಯಕೆ ಪೂರ್ವ ಸಂತಪ್ತ ಮೃದು ।
ಕುಸುಮ ಕುಮುದ ಚಕೋರ ಶಶಿ ಉದಯ ಸಂತುಷ್ಟ ।
ಬೆಸಸನೆಂ ಯುಕ್ತದೈವಾವವಸ್ತೆಲ್ಲರಿಗೆ ಮನೋಹರಂ
ಮಾಡ್ವುದಿಲ್ಲ ॥ ೫೨ ॥ ೮೦೬ ॥

ಭಾವಾರ್ಥ:— ಚಂದ್ರನು ಅತ್ಯಧಿಕ ಸುಂದರನಾದರೂ, ಎಲ್ಲ ವಸ್ತುಗಳಿಗೆ ಪ್ರೇಮಕರ ನಲ್ಲೆಂದು ಪೇಳುವರು.

ನಿಶಿಯಲ್ಲಿ=ರಾತ್ರಿ ಕಾಲದಲ್ಲಿ ತಾವರೆ ಸಹ=ಕಮಲಗಳಿಂದ ಸಹಿತವಾಗಿ, ಚಕ್ರವಾಕ್ ಪಕ್ಷಿ=ಕೋಕ ಪಕ್ಷಿಗಳು ಸಹನ ಮಾಡಲಿಕ್ಕೆ ಅಸಾಧ್ಯವಾದ, ಇನನ=ಸೂರ್ಯನ, ವಿರಹಪೊಂದಿ=ಅಗಲುವಿಕೆಯಿಂದ ಆಗುವ ಕಷ್ಟವನ್ನು ಅನುಭೋಗಿಸುತ್ತ, ಅಸುಗೆಟ್ಟು=ಕಂಗೆಟ್ಟು, ಚಂದ್ರನ ಕಿರಣ, ಸಂಪರ್ಕ, ತಾಕುವದರಿಂದ, ರಾತ್ರ್ಯವಸಾನ ಪರ್ಯಂತ,=ಬೆಳಗಾಗುವವರೆಗೆ ಬಹು ದುಃಖಪಟ್ಟವು. ಪೂರ್ವ ದಿನದಲ್ಲಿ, ಬಿಸಜಮಿತ್ರೋದಯಕೆ=ಕಮಲ ಗೆಳೆಯನಾದ ಸೂರ್ಯೋದಯಕ್ಕೆ ಅಂದರೆ ಮೊದಲಿನ ದಿವಸ. ಸೂರ್ಯೋದಯಾರಭ್ಯ, ರಾತ್ರಿಯ ಕಾಲ ಪರಿಯಂತವಾಗಿ ಸೂರ್ಯ ಕಿರಣಕ್ಕೆ, ಸಂತಪ್ತ=

ಕಾಯ್ದು ಬಹು ತಪ್ತವಾಗಿ ದುಃಖಪಡುವ, ಕೋಮಲವಾದ ಕುಮುದ ಪುಷ್ಪಗಳು=ಕೆನ್ನೈದಿಲೆ, ಚೊನ್ನವಕ್ಕಿಗಳು ಸಹಿತವಾಗಿ ಈಗ ಈ ಚಂದ್ರೋದಯದಿಂದ ಆನಂದ ಹೊಂದಿದವು. ಇದು ಯುಕ್ತವು ಬೆಸಸನಂ=ಅಹೋ ಇದು ಏನು ಹೇಳಲಿ, ದೈವವು=ವಿಧಿಯು ಆವ ವಸ್ತುವನ್ನಾಗಲೀ, ಸಕಲರಿಗೆ, ಮನೋಹರ=ಚಂದವಾಗಿ ಅವರವರ ಮನಸು ತೃಪ್ತವಾಗುವಂತೆ ಮಾಡುವದಿಲ್ಲ. ಶ್ರೀ ಹರಿ ವಾಯು ಗಳ ವಿನಾ ನಿರ್ದೋಷವಾದ ವಸ್ತುವು ಜಗತ್ತಿನಲ್ಲಿ ಇಲ್ಲ ಒಂದು ವಸ್ತು ಒಂದಕ್ಕೆ ಅನುಕೂಲವಾಗಿದ್ದರೆ ಇನ್ನೊಂದಕ್ಕೆ ಪ್ರತಿಕೂಲವಾಗಿರುವುದು.

ಒಬ್ಬೊಬ್ಬ ದೇವತೆಗಳಲ್ಲಿ ಒಂದೊಂದು ವಿಶೇಷ ಗುಣಗಳಿರುವವು. ಸೂರ್ಯನಲ್ಲಿ ಅಜ್ಞಾನ ಪರಿಹಾರಕ, ಪ್ರಕಾಶಕ, ತಾಪನ ಗುಣವು; ಚಂದ್ರನಲ್ಲಿ ಶೀತಲತ್ವ, ಪ್ರಶಾಂತತ್ವ, ಆಲ್ಹಾದಕರತ್ವಾದಿ. ಎಲ್ಲ ಉತ್ತಮ ಗುಣಗಳಿಂದಲೂ ಶ್ರೇಷ್ಠವಾದ ಜ್ಞಾನ ದಾತೃತ್ವಾದಿ ಗುಣಗಳು ಸಕಲ ದೇವತೆಗಳಿಗೆ ಗುರು ಗಳಾದ ಶ್ರೀ ಮುಖ್ಯ ಪ್ರಾಣಾಂಶ ಸಂಭೂತರಾದ ಶ್ರೀ ಮಧ್ವರಲ್ಲಿರುವಕಾರಣ, ಶ್ರೀ ಮಧ್ವೇಂದೋದ ಯಕೆ, ಸಜ್ಜನರು ಆನಂದವನ್ನು ಹೊಂದಿದರು. ಅಸಜ್ಜನರು ದುಃಖಪಟ್ಟರು. ಈ ಪದಾರ್ಥಗಳು, ಮತ್ತು ಸೂರ್ಯ-ಚಂದ್ರ ದೃಷ್ಟಾಂತವು ಏಕ ದೇಶವಾದದ್ದು.

ಶ್ಲೋಕ ॥ ದಲಿತೇಂದ್ರನೀಲಮಣಿನೀಲವಿಭ್ರಮಂ ।
ನವಕುಂದಕುಡ್ಮಲಸಿತದ್ವಿಜಾವಲಿಃ ॥
ಸ್ಮಿತಯಾನಗೋತ್ತಮಶಿರಸ್ಸುಜಾತಯಾ ।
ವನಮಾಲಯಾ ಸುರಭಿತಾಶಯಾನ್ವಿತಮ್ ॥ ೫೩ ॥

( ಮಂಜುಭಾಷಿಣೀ ವೃತ್ತ )

ಭಾಮಿನಿ ॥ ದಳಿತನೀಲ್ಮಣಿ ವಿಯಮೊ ಕೃಷ್ಣನೊ ।
ಬಿಳಿಯ ನವಕುಂದದ ಸುಕುಟ್ಮಲ ।
ಸಲೆ ದ್ವಿಜಾವಳಿ ವಿಕಸಿತ ನಗೋತ್ತಮ ಶಿರಃ ಸುಜಾತ ॥

ತಳಿದ ಕುಸುಮಾಶಾ ದಿಶವ ಪರಿ- ।
ಮಳಿಪ ವನಮಾಲೆಗಳ ಭೂಷಿತ ।
ಒಲುಮೆ ವಿಷ್ಣುಪದಪ್ರಕಾಶಿಪ ಚಂದ್ರಮಾತಾ-
ರ್ಯರ್ ॥ ೫೩ ॥ ೮೦೭ ॥

ಭಾವಾರ್ಥ:— ಭಗವಾನ್ ಷಡ್ಗುಣೈಶ್ವರ್ಯ ಸಂಪನ್ನರಾದ ಪರಿಪೂರ್ಣ ಸಂವಿತ್ ಶ್ರೀ ಪೂರ್ಣ ಪ್ರಜ್ಞಾಚಾರ್ಯರು, ( ಅರ್ಥಾಂತರದಿ ) ಶ್ರೀ ಕೃಷ್ಣಾಖ್ಯ ಆಶಾಕವಸ್ತುವಿಶೇಷವನ್ನು ಸಚ್ಛಾಸ್ತ್ರ ವ್ಯಾಖ್ಯಾ ನಾದಿಗಳಿಂದ ಶ್ರೀಕೃಷ್ಣ ಪರಮಾತ್ಮನ ಸ್ವರೂಪವನ್ನು ಸ್ವಚ್ಛವಾಗಿ ಪ್ರಕಟಿಸಿದರು. ಚಂದ್ರನಾದರೂ ತನ್ನ ಉದಯದಿಂದ ( ಅರ್ಥಾಂತರ ) ಆಕಾಶವೆಂಬ ವಸ್ತುವನ್ನು ಪ್ರಕಾಶ ಮಾಡಿದನೆಂದು ಮೂರು ಶ್ಲೋಕಗಳಿಂದ ವರ್ಣಿಸುತ್ತಾರೆ

೧ ದಳಿತ=ಸೀಳಿದ, ತುಂಡಾಗಿ ದುಂಡಾಗಿರುವ, ನೀಲರತ್ನ ಮಣಿಯಂತೆ ಕಪ್ಪು ವರ್ಣ ವಿಶಿಷ್ಟವಾಗಿ ತೋರುವ ವಿಯುಮ=ಆಕಾಶವು, ಹೊಸದಾದ ಕುಂದಕುಟ್ಮಲ=ಮಲ್ಲಿಗೆಯ ಹೂವು, ತುಂಬೆ ಹೂವಿನ, ಹೊಸ ಮೊಗ್ಗಿಗಳಂತೆ, ದ್ವಿಜಾವಳಿ=ನಕ್ಷತ್ರಗಳ ಸಮೂಹಗಳಿಂದ ಚನ್ನಾಗಿ ಶೋಭಿಸುವ, ನಗೋತ್ತಮ ಸಿರಃಸುಜಾತಃ=ಪರ್ವತ ಶ್ರೇಷ್ಠಗಳ ತುದಿಯಲ್ಲಿರುವ ಪಾರಿಜಾತಾದಿ ವೃಕ್ಷಗಳಲ್ಲಿ, ತಳಿದ=ಅರಳಿದ ಹೂವುಗಳಿಂದ, ಆಶಾ=ದಿಕ್ಕುಗಳನ್ನು ಘುಮಘುಮಿಸುವ ಸುವಾಸನೆಯಿಂದ ಹಬ್ಬಿದ, ವನಮಾಲೆಗಳ=ಅರಣ್ಯಗಳ ಸಾಲುಗಳಿಂದ ಭೂಷಿತವಾದ, ಒಲುಮೆ=ಮನಮೆಚ್ಚುವಿಕೆಗೆ ಚಂದವಾದ, ವಿಷ್ಣುಪದ=ಆಕಾಶವನ್ನು ಚಂದ್ರನು ಪ್ರಕಾಶಗೊಳಿಸಿದನು.

೨ ದಳಿತ=ತುಂಡು ಮಾಡಿದ ಒಳ್ಳೇ ದುಂಡಾಗಿರುವ ಇಂದ್ರನೀಲಮಣಿಯಂತೆ ಕಪ್ಪಾದ ಕಾಂತಿಯುಳ್ಳ ಶ್ರೀಕೃಷ್ಣ ಪರಮಾತ್ಮನ, ಹೆಸಸದಾ ಕುಂಧ ಪುಷ್ಪಗಳ ಮೊಗ್ಗೆಗಳಂತೆ, ದ್ವಿಜಾವಳಿ=ಹಲ್ಲುಗಳುಳ್ಳ, ವಿಕಸಿತ=ಅರಳಿದ, ನಗೋತ್ತಮ ಶಿರಃಸುಜಾತಃ=ಪಾರಿಜಾತಾದಿ ವೃಕ್ಷಗಳ ತುದಿಯಲ್ಲಿ ಪುಟ್ಟಿ ದಿಕ್ಕುಗಳನ್ನೇ ಪರಿಮಳಿಸುವ ಹೂವುಗಳ, ವನಮಾಲೆಗಳ ಭೂಷಿತ=ಕಂಠದಿಂದ ಆರಂಭ ಮಾಡಿ ಪಾದ ಪರಿಯಂತವಾಗಿ ಪರಿಮಳಯುಕ್ತವಾದ ಹೂವುಗಳ ಮಾಲಾಗಳಿಂದ ಶೋಭಿಸುವ ಶ್ರೀಕೃಷ್ಣಾಖ್ಯ ಆಕಾಶವನ್ನು ಶ್ರೀಮದಾಚಾರ್ಯರು ಪ್ರಕಟಿಸಿದರು.

**ಶ್ಲೋಕ ||** **ಮೃದುಗಾಮಿ ವಿಮಾನಸಂಪದೋಃ |**
**ರಮಯತ್ಸುಸ್ಮಿತಗೋಪಸುಂದರೀಃ ||**
**ಪರಿತಾಪವಿಹೀನಮುಜ್ವಲಂ ।**
**ಸುತತಂ ಸೂಕ್ಷ್ಮತರಾಂಬರಂ ವರಮ್ || ೫೪ ||**

( ಸುಂದರೀ ವೃತ್ತ )

ಭಾಮಿನಿ || ಮಂದಗಮನ ವಿಮಾನ ಸಂಪದ |
ದಿಂದ ಸುಸ್ಮಿತ ಗೋಪ ಸುಂದರೆ |
ರಂದು ಕ್ರೀಡಿಪ ತಾಪ ವಿರಹಿತ ಉಜ್ವಲಂ ಸುತತಂ ||

ಛಂದ ಸೂಕ್ಷತರಾಂಬರಂ ವರ |
ಚಂದ್ರಮಾಕಾಶಂ ಪ್ರಕಾಶಿಸೆ |
ಸುಂದಲಾಚಾರ್ಯಿರಿಂದು ಕೃಷ್ಣನ ಗುಣಪ್ರಕಾಶಿಸಿ-
ದರ್ || ೫೪ || ೮೦೮ ||

ಭಾವಾರ್ಥ:— ಚಂದ್ರನು ಆಕಾಶದಲ್ಲಿ ಮಂದಗಮನ=ಮೆಲ್ಲಗೆ ನಡೆಯುವ, ವಿಮಾನ ಸಂಪದ ಆಕಾಶದಲ್ಲಿ ಸಂಚರಿಸುವ ವಿಮಾನವೆಂಬ ಸಂಪತ್ತಿನಿಂದ ಕೂಡಿದ, ಸುಸ್ಮಿತ=ಮಂದಹಾಸ ಮುಖವುಳ್ಳ, ಗೋಪಸುಂದರೆ=ಸ್ವರ್ಗದಲ್ಲಿರುವ ದೇವತಾ ಸುಂದರ ಸ್ತ್ರೀಯರನ್ನು, ಅಂದು=ಆ ಬೆಳದಿಂಗಳಲ್ಲಿ ಆಕಾಶದಲ್ಲಿ ಸಂಚರಿಸಿ ಕ್ರೀಡಿಸುವವರನ್ನು ಸಂತೋಷಬಡಿಸುವನಾದನು. ಮತ್ತು ತಾಪ

ವಿರಹಿತ = ಆಕಾಶವು ಜಡವಸ್ತುವಾದುದರಿಂದ ದುಃಖಾದಿ ತಾಪರಹಿತವಾದದ್ದು, ಉಜ್ವಲ = ಮೋಘ ರಹಿತವಾದ ಕಾರಣ ನಿರ್ಮಲವಾಗಿ ಪ್ರಕಾಶಿಸುವ, ಸುತತಂ = ಚನ್ನಾಗಿ ಎಲ್ಲ ಕಡೆಗೆ ವ್ಯಾಪ್ತವಾದದು. ಛಂದಸೂಕ್ಷ್ಮತರಾಂಬರ = ಚನ್ನಾಗಿ ಬಾಹ್ಯೇಂದ್ರಿಯಗಳಿಗೆ ಅಗೋಚರವಾದ ಕಾರಣ ಸೂಕ್ಷ್ಮವಾದ, ಅಂಬರ = ಆಕಾಶವು ವರಂ = ಪಂಚಭೂತಗಳಲ್ಲಿ ಉತ್ತಮವಾದುದು, ಇಂಥ ಆಕಾಶವನ್ನು ಚಂದ್ರನು ಪ್ರಕಾಶಿಸಿದನು.

೨ ಮಂದಗಮನ = ಮೆಲ್ಲಗೆ ನಡೆಯುವ, ವಿಮಾನ ಸಂಪದ = ವಿಗತಾಮಾನ ಸಂಪತ್, ಹೋಗಲ್ಪಟ್ಟ ಲಜ್ಜಾ = ನಾಚಿಕೆಯುಳ್ಳ, ಪ್ರಣಯಕೋಪವನ್ನು ಬಿಟ್ಟ, ಸುಸ್ಮಿತ ಗೋಪಸುಂದರೀ = ಮುಗುಳುನಗೆಯಿಂದ ಕೂಡಿದ ಗೋಪಾಲಕರ ಸುಂದರ ಸ್ತ್ರೀಯರನ್ನು ಅಂದು = ಬೆಳದಿಂಗಳಲ್ಲಿ ರಾಸಕ್ರೀಡಾದಿಗಳಲ್ಲಿ, ಕ್ರೀಡಿಪ = ಅವರೊಡನೆ ವಿಹಾರ ಮಾಡಿ, ಸಂತೋಷಬಡಿಸುವದರಿಂದ, ತಾಪ ವಿರಹಿತ = ಮನಸ್ಸಿನ ಕಳವಳಿಕೆಯಿಲ್ಲದೇ ಆನಂದದಿಂದ, ಉಜ್ವಲಂ=ನಿರ್ದೋಷವಾಗಿ ಪ್ರಕಾಶಿಸುವವ, ಸುತತಂ = ಶೋಭನವಾದ ವೀಣಾದಿ ನಾನಾ ವಾದ್ಯಗಳಿಂದ ವಿಹಾರವನ್ನು ಮಾಡುವ, ಸೂಕ್ಷ್ಮತರಾಂಬರವ=ಒಳ್ಳೇ ತೆಳ್ಳಗಾದ ಬೆಳ್ಳನ್ನ ವಸ್ತ್ರವನ್ನುಟ್ಟಿರುವ, ವರಂ = ಸರ್ವೋತ್ತಮನಾದ ಶ್ರೀಕೃಷ್ಣನ ಜ್ಞಾನಾನಂದಾದಿ ಅನಂತ ಗುಣಗಳನ್ನು ಶ್ರೀಮಧ್ವಾಚಾರ್ಯರು ಪ್ರಕಾಶಿಸಿದರು.

ಶ್ಲೋಕ ॥ ಗೋಭಿಸ್ತಮಾಂಸ್ಯಪನಯನ್ ಗತಿದಂ ಪ್ರಜಾನಾ- ।
ಮರ್ಥಾಂತರಂ ಸ ಭಗವಾನ್ ಪ್ರಕಟೀಚಕಾರ ॥
ಸ್ವಾನಂದಚಿದ್ಗುಣಗಣಂ ಪರಿಪೂರ್ಣಸಂವಿ- ।
ಚ್ಚಂದ್ರಸ್ತು ಶಬ್ದಗುಣಮಿತ್ಯಯಮೇವ ಭೇದಃ ॥ ೫೫ ॥

( ವಸಂತತಿಲಕಾವೃತ್ತಃ )

ಇತಿ ಶ್ರೀ ಮತ್ಕವಿಕುಲತಿಲಕ ಶ್ರೀ ಮತ್ತ್ರಿವಿಕ್ರಮ ಪಂಡಿತಾಚಾರ್ಯಸುತ ಶ್ರೀಮನ್ನಾರಾಯಣ ಪಂಡಿತಾಚಾರ್ಯವಿರಚಿತೇ ಶ್ರೀ ಮತ್ಸುಮಧ್ವ ವಿಜಯೇ ಮಹಾ ಕಾವ್ಯೇ ಆನಂದಾಂಕೇ

**ಚತುರ್ದಶಃ ಸ್ಸರ್ಗಃ**

॥ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

ಭಾಮಿನಿ ॥ ಕಿರಣ ವಚನದಿ ಅಜ್ಞ ತಮವಂ ।
ಪರಿಹರಿಪರಂ ಪೂಜ್ಯ ಚಂದ್ರನೊ ।
ವರ ಸುಸಂವಿದ ಪೂರ್ಣರೋ ಜನ ಮುಕುತಿ ಯೋಗ್ಯರಿಗೆ ॥
ನಿರುತ ಅವಕಾಶಂ ಗತಿದ ಸಮ ।
ಸ್ವರ ವಿಯಮಗುಣ ವೇಕಚಂದ್ರಂ ।
ಸಿರಿಯ ಕೃಷ್ಣನನಂತಗುಣ ಪ್ರಕಟಿಸಿದರಾನಂದ ॥ ೫೫ ॥ ೮೦೯ ॥

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ಶ್ರೀಮತ್ಕವಿ ಕುಲತಿಲಕ ಶ್ರೀ ಮತ್ತಿ ವಿಕ್ರಮ ಪಂಡಿತಾಚಾರ್ಯಸುತ ಶ್ರೀಮನ್ನಾರಾಯಣ ಪಂಡಿತಾಚಾರ್ಯ ವಿರಚಿತೇ— ಶ್ರೀ ಮತ್ಸುಮಧ್ವ ವಿಜಯೇ ಮಹಾ ಕಾವ್ಯೇ ಆನಂದಾಂಕೇ ಶ್ರೀ ಜಯ ವಿಜಯದಾಸ ನಿಜಗೂಢದಾಸ ವಿರಚಿತೇ ಕರ್ನಾಟಕ ಭಾಮಿನಿ ಷಟ್ಪದಿ ಪದ್ಯ (೮೮೯) ಕ್ಕೆ ಶ್ರೀ ಸರ್ವಜ್ಞಾಚಾರ್ಯ ನಿತ್ಯಾನುಷ್ಠಾನ ಕ್ರಮವರ್ಣನೆ ಎಂಬ ಹದಿನಾಲ್ಕನೆಯ

## (೧೪) ಸರ್ಗ ಮಂಗಳಮಾಹ.

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

ಭಾವಾರ್ಥ:—ತನ್ನ ಕಿರಣಗಳಿಂದ, ವ್ಯಾಪಿಸಿರುವ ಕತ್ತಲೆಯನ್ನು ನಾಶಗೈಸುವ, ಪೂಜ್ಯ=ಲೋಕರಿಂದ ಸನ್ಮಾನ್ಯನಾಗಿ ಪೂಜಾ ಮಾಡಿಸಿಕೊಳ್ಳುವ ಚಂದ್ರನು ಗತಿದ,=ಸಕಲ ಜನರಿಗೆ ತಿರುಗಾಡಲು ಅವಕಾಶ ಕೊಡುವ, ಮತ್ತು ರಾತ್ರಿ ಕಾಲದಲ್ಲಿ ಪೂರ್ಣ ಚಂದ್ರೋದಯದಿಂದ ಶೋಭಿಸುವನಾದ ಕಾರಣ ಆನಂದವನ್ನು ಕೊಡುವ ಆಕಾಶಾಖ್ಯ ವಸ್ತುವನ್ನು ಪ್ರಕಾಶಗೊಳಿಸಿದನು. ಶಾಸ್ತ್ರೋಪದೇಶವೆಂಬ ತನ್ನ ವಚನಗಳಿಂದ ಅಜ್ಞಾನವೆಂಬುವ ಕತ್ತಲೆಯನ್ನು ಪರಿಹರಿಸುವ, ವರ=ಶ್ರೇಷ್ಠರಾದ, ಪೂಜ್ಯ ಸಂವಿದ ಪೂರ್ಣ,=ಪೂರ್ಣ ಬುದ್ಧಿಯುಳ್ಳ, ಶ್ರೀಮದಾನಂದತೀರ್ಥರು, ಮೋಕ್ಷ ಯೋಗ್ಯರಾದ ಜೀವರುಗಳಿಗೆ ಸದ್ಗತಿಯನ್ನು ಕೊಡುವ ಜ್ಞಾನಾನಂದವೇ ಮೊದಲಾದ ಅನಂತ ಸದ್ಗುಣಪೂರ್ಣನಾದ, ಶ್ರೀಕೃಷ್ಣಾಖ್ಯ ಪರವಸ್ತುವಿನ ಅನಂತ ಗುಣಗಳನ್ನು, ಉಪದೇಶಿಸಿ ಪ್ರಕಟ ಮಾಡಿದರು.

ಚಂದ್ರನೂ, ಆಚಾರ್ಯರೂ, ಮೇಲೆ ವಿವರಿಸಿದ ಎಲ್ಲ ಗುಣಗಳಿಂದ ಸಮರಾದರೂ, ಚಂದ್ರನು ಶಬ್ದವೆಂಬುವ ಆಕಾಶದ ಒಂದೇ ಗುಣವನ್ನು ಪ್ರಕಟ ಮಾಡಿದನು. ಶ್ರೀಮದಾನಂದತೀರ್ಥರು ಶ್ರೀಕೃಷ್ಣನಲ್ಲಿರುವ ಅನಂತಾನಂತ ಅಪರಿಮಿತ ಗುಣಗಳನ್ನು ಪ್ರಕಟಿಸಿದರೆಂಬುದು, ಚಂದ್ರನಿಗೂ ಆಚಾರ್ಯರಿಗೂ ಭೇದ, ಮತ್ತು ಹೆಚ್ಚಿನ ವಿಶೇಷಣವು.

ಹೇಗೆ ರಾತ್ರಿ ಚಂದ್ರೋದಯದಿಂದ ಆಕಾಶವು ಚನ್ನಾಗಿ ಪ್ರಕಾಶಿಸುತ್ತಲಿಯೋ ಅದರಂತೆಯೇ ರಾತ್ರಿ ಕಾಲದಲ್ಲಿ ಶ್ರೀಮದಾನಂದ ಮುನಿಗಳು, ಪೂರ್ವೋಕ್ತ ವಿಶೇಷಣದ, ಜ್ಞಾನ ಆನಂದಾದ್ಯನಂತ ಗುಣ ಸರ್ವೋತ್ತಮನಾದ ಶ್ರೀಕೃಷ್ಣಾಖ್ಯ ಪರಬ್ರಹ್ಮ ವಸ್ತುವನ್ನು ಭಾಗವತಾದಿ ಸಚ್ಛಾಸ್ತ್ರ ಪ್ರವಚನದಿಂದ ಶಿಷ್ಯರುಗಳಿಗೆ ಉಪದೇಶಿಸಿ, ಶಿಷ್ಯರ ಹೃದಯಾಕಾಶದಲ್ಲಿ ಶ್ರೀ ಹರಿಯ ರೂಪವನ್ನು ಪ್ರಕಟಿಸಿದರು.

ಇಂತು ಸತ್ಕರ್ಮ ಶಬ್ದವಾಚ್ಯನಾದ ಶ್ರೀ ಹರಿಗೆ ಮುಖ್ಯ ಪ್ರತಿಬಿಂಬರಾದ, ಕರ್ಮ ಶಬ್ದವಾಚ್ಯರು ಸತ್ಕರ್ಮಾಚರಣೆರಶರಾಗಿ, ವೇದಗಳಲ್ಲಿ ಹೇಳಿದಂತೆ ಕರ್ಮ ಫಲವನ್ನು ಕೊಡುವರು, ಸಕಲ ಕರ್ಮಗಳಿಂ ಜಿತರಾದಹರು, ಕರ್ಮ ಬದ್ಧರಲ್ಲವೇ ಇದ್ದವರು, ಅಹಂಕಾರಾದಿಗಳಿಂದ ಕರ್ಮಗಳನ್ನು ಮಾಡುವವರಿಗೆ ಆ ಕರ್ಮದಿಂದಲೇ ಬಂಧ ಮಾಡುವವರು, ಶ್ರೀಹರಿ ಗುರುವಾಯುಗಳ ಕರ್ತೃತ್ವಾನುಸಂಧಾನದಿಂದ ಸತ್ಕರ್ಮ ಮಾಡುವವರ ಸಂಚಿತಾಗಾಮಿ ಕರ್ಮಗಳನ್ನು ನಾಶಮಾಡಿ, ಪ್ರಾರಬ್ಧ ಕರ್ಮವನ್ನು ಉಪಮರ್ದನ ಮಾಡುವರು, ಮಹಾ ಕರ್ಮರೂಪವಾದ ಲಿಂಗದೇಹವನ್ನು ಬಿಡುಗಡೆ ಮಾಡಿಸಿ ಮೋಕ್ಷವನ್ನು ಕೊಡುವರು, ಜಗತ್ತಿಗೆ ದ್ವಿತೀಯ ಈಶ್ವರರಾದ ಆನಂದ ಮುನಿಗಳ ಹೃತ್ಕಮಲವಾಸಿ ಶ್ರೀಕೃಷ್ಣನ ಅಡಿದಾವರೆಗಳಿಗೆ ಈ ಹದಿನಾಲ್ಕನೆಯ ಸರ್ಗದ ಮಂದಬೋಧನೆ ಎಂಬ ಭಾವಾರ್ಥವು ಅರ್ಪಿತವಾಗಲಿ. ಶ್ರೀ ಹರೇಃ ಚರಣಾರವಿಂದಯೋರರ್ಪಿತಾಂ ॥

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಲಕ್ಷ್ಮೀ ನರಸಿಂಹಾತ್ಮಕ ಶ್ರೀ ವೆಂಕಟೇಶ ಪ್ರಸನ್ನಃ ॥

॥ ಶ್ರೀಗುರುರಾಜೋ ವಿಜಯತೇ ॥

# ಶ್ರೀ ಸುಮಧ್ವ ವಿಜಯ

## ॥ ಹದಿನೈದನೆಯ ಸರ್ಗಸಾರ ಪ್ರಾರಂಭ ॥

ಪರಮತಗಳ ನಿರಾಕರಣ, ಶ್ರೀ ಸರ್ವಜ್ಞರ ಶಿಷ್ಯವೃಂದ ವರ್ಣನೆ.

ಶ್ರೀ ವಿಷ್ಣುಮಂಗಳಗ್ರಾಮ ಕುಡಿಲು ಎಂಬ ದೇವಸ್ಥಾನದಲ್ಲಿ ಶ್ರೀಮದಾಚಾರ್ಯರು ಪುನಹ ಬ್ರಹ್ಮಸೂತ್ರ ಭಾಷ್ಯ ಪೇಳುವಿಕೆ. ಆಗ್ಗೆ ತ್ರಿವಿಕ್ರಮಾಚಾರ್ಯರು ಪ್ರತಿಭಟರಂತೆ ತೋರ್ದರೆಂಬ ವರ್ಣನೆ. ಶ್ರೀಮದಾಚಾರ್ಯರ ಪ್ರವಚನ ಉಪನ್ಯಾಸಭಾರತೀ ವರ್ಣನೆ. ಸಯುಕ್ತಿಗಳಿಂದ ಸಕಲ ಮತಗಳ ನಿರಾಕರಣ. ಶ್ರೀಮದಾಚಾರ್ಯರು ತ್ರಿವಿಕ್ರಮ ಪಂಡಿತಾಚಾರ್ಯರೊಡನೆ ೧೫ ದಿನಗಳ ವರಿಗೆ ವಾದಮಾಡಿ ಆ ವಾಗ್ಯುದ್ಧದಲ್ಲಿ ಅವರನ್ನು ಸೋಲಿಸಿದ್ದು. ಶ್ರೀ ತ್ರಿವಿಕ್ರಮ ಪಂಡಿತರು ಶ್ರೀ ಮಧ್ವರಿಗೆ ಶಿಷ್ಯರಾಗಿ ಭಾಷ್ಯ ಕೇಳಿದ್ದು. ತ್ರಿವಿಕ್ರಮ ಪಂಡಿತಾಚಾರ್ಯರಿಂದ ಶ್ರೀ ಸರ್ವಜ್ಞರು ರಚಿಸಿದ ಗ್ರಂಥಗಳ ವರ್ಣನೆ. ಶ್ರೀ ಸರ್ವಜ್ಞರ ಅನುಜರಾದ ಶ್ರೀ ವಿಷ್ಣು ತೀರ್ಥರ ಮಹಿಮಾ ಬಣ್ಣನೆ. ಶ್ರೀ ಪದ್ಮನಾಭತೀರ್ಥರು ಮತ್ತು ಉಡಪಿ ಅಷ್ಟಮಠದ ಯತಿಗಳ ಮಹಿಮಾ. ಸಕಲ ಸಜ್ಜನರಿಂದ ಪೂಜಿತರಾದ ಶ್ರೀಮದಾನಂದ ತೀರ್ಥರು ಅಷಾಢ ಶು. ೧೧ ಹೋಗಲು, ಕಣ್ವತೀರ್ಥ ಹತ್ತರ ತಾಂತ್ರ್ಯ ವೆಂಬ ಮಠದಲ್ಲಿ ಚಾತುರ್ಮಾಸವ್ರತಕ್ಕೆ ಕುಳಿತ ವರ್ಣನೆ; ಇತ್ಯಾದಿ.

### ॥ ಅಥ ಸರ್ಗಾನುಕ್ರಮಣಿಕೆ ॥

೧. ಶ್ರೀಮದಾಚಾರ್ಯರು, ವಿಷ್ಣುಮಂಗಳ ಗ್ರಾಮದಲ್ಲಿ, ಜನ ಗದ್ದಲವಿಲ್ಲದ ಕುಡಿಲು ಎಂಬ ಗುಡಿಯಲ್ಲಿ, ತಾವು ರಚಿಸಿದ ಬ್ರಹ್ಮಸೂತ್ರ ಭಾಷ್ಯ, ಪುನಹ ಪ್ರವಚನ ಮಾಡುವಿಕೆ. [ಶ್ಲೋಕ ೧]

೨. ಆಗ್ಗೆ ತಮ್ಮ ಎದುರಿನಲ್ಲಿ ಕುಳಿತಿರುವ ತ್ರಿವಿಕ್ರಮ ಪಂಡಿತಾಚಾರ್ಯರನ್ನು, ಶ್ರೀ ಮಧ್ವರೆಂಬ ಮಹಾ ನಾಯಕರು, ಅದ್ವೈತವೆಂಬುವ ಪರಪಕ್ಷದ ರಥದಲ್ಲಿ ಕುಳಿತು, ತಮ್ಮನ್ನು ಎದುರಿಸಿ ವಾಗ್ಯುದ್ಧ ಮಾಡುವ ಪ್ರತಿ ವೀರನ ತೆರದಲ್ಲಿ ನೋಡಿದ್ದು. [ಶ್ಲೋಕ ೨]

೩. ಶ್ರೀಮದಾಚಾರ್ಯರು, ಶ್ರೀ ಹರಿಯೇ ಸಕಲ ಜಗತ್ತಿನ ಸೃಷ್ಟ್ಯಾದ್ಯಷ್ಟ ಕರ್ತನೆಂದು, ಸವಿಸ್ತರ ಪ್ರವಚನ ಮಾಡಿದ ಉಪನ್ಯಾಸ ಭಾರತಿಯು, ತನ್ನೊಡೆಯನ ಅಜ್ಞೆಯಲ್ಲಿದ್ದ ಸೇನೆಯು ಶಿಬಿರದಿಂದ ಹೊರಗೆ ಹೊರಟಂತೆ, ಶ್ರೀಮದಾಚಾರ್ಯರ ಮುಖಕಮಲದಿಂದ, ಹೊರಗೆ ಹೊರಟಿತೆಂಬ ವರ್ಣನೆ. [ಶ್ಲೋಕ ೩—೫]

೪. ಶ್ರೀಮದಾಚಾರ್ಯರು ಮಾಡತಕ್ಕ ಉಪನ್ಯಾಸ ಭಾರತಿಯು, ಶ್ರೀಮನ್ನಾರಾಯಣನಿಗೆ ಇಷ್ಟಳಾದ ಶ್ರೀ ಲಕ್ಷ್ಮೀದೇವಿಯಂತೆಯೂ, ಸಗರರಾಜನ ಸೇನೆಯಂತೆಯೂ, ಸಾಗರದಂತೆಯೂ, ಮೇಘ ಗಂಭೀರವಾದುದೆಂದು ವರ್ಣನೆ. ( ಶ್ಲೋಕ ೬ )

೫. ಮತ್ತು ಶ್ರೀಮದಲವಬೋಧರ ಉಪನ್ಯಾಸಭಾರತಿಯು, ( ಪ್ರವಚನ ) ಗಂಗಾ ಪ್ರವಾಹ ದಂತೆ ಇರುವದೆಂಬ ಬಣ್ಣನೆ ( ಶ್ಲೋಕ ೭ )

೬ ವಿಶ್ವಜ್ಞರಾದ ಶ್ರೀಮದಾಚಾರ್ಯರು ಶ್ರೀಮನ್ನಾರಾಯಣನು ಅನಂತ ಗುಣಪೂರ್ಣ ಸೃಷ್ಟ್ಯಾದಿ ಅಷ್ಟಕರ್ತ, ವೇದವೇದ್ಯ, ಇತ್ಯಾದಿ ನಿಯಮದಿಂದ ಮಾಡಿದ ಉಪನ್ಯಾಸ ಸಂಕ್ಷಿಪ್ತ ವಿಷಯ ವರ್ಣನೆ ( ಶ್ಲೋಕ ೮ )

೭. ಶ್ರೀಮನ್ನಾರಾಯಣನಾದ ಈಶ್ವರನೇ ಇಲ್ಲ. ಅವನಿಗೆ ಅನಂತ ಗುಣವೆಲ್ಲಿ ? ಜಡವೇ ಸ್ವತಂತ್ರವೆಂಬುವ " ನಿರೀಶ್ವರ ಸಾಂಖ್ಯ " ಮತವನ್ನು ಸಯುಕ್ತಿಯಿಂ ನಿರಾಕರಿಸಿ, ಸ್ವಪಕ್ಷವನ್ನು ಸಾಧಿಸಿದ ಕ್ರಮ. ( ಶ್ಲೋಕ ೯ – ೧೦ )

೮. ಈಶ್ವರನಿದ್ದಾನೆ; ಆದರೆ ಜಗತ್ ಸೃಷ್ಟಿಗೆ ಮುಖ್ಯ ಕಾರಣನಲ್ಲ: ಜಡಪ್ರಕೃತಿಯೇ ಮುಖ್ಯ ಕಾರಣವೆಂಬುವ " ಸೇಶ್ವರ ಸಾಂಖ್ಯ" ಮತ ಸಯುಕ್ತಿಯಿಂ ನಿರಾಕರಿಸಿದ ವಿವರ. ( ಶ್ಲೋಕ ೧೧ )

೯. ವೇದಗಳನ್ನು ಒಡಂಬಡದಿರುವ, ಮತ್ತು ಈಶ್ವರನೇ ಇಲ್ಲೆನ್ನುವ ನಾಸ್ತಿಕ ಚಾರ್ವಾಕರ ಪೂರ್ವಪಕ್ಷ ನಿರಾಕರಣೆ ಮಾಡಲು, ಪ್ರತ್ಯಕ್ಷ ಅನುಮಾನ ಆಗಮಗಳಂ ಉದಾಹರಿಸಿ, ಈಶ್ವರನು ಇರುವನೆಂಬುದಕ್ಕೆ ಮುಖ್ಯವಾಗಿ ವೇದ ಪ್ರಮಾಣವೆಂದು ಸಾಧಿಸಿದ್ದು. [ ಶ್ಲೋಕ ೧೨ – ೧೩ ]

೧೦. ಮಣ್ಣಿನಿಂದ ಮಡಿಕೆ ( ಗಡಿಗೆ ) ಗಳಾದಂತೆ, ಬ್ರಹ್ಮನೇ ಜಗತ್ತಿನ ಆಕಾರವಾಗಿ ಪರಿಣಮಿ ಸುತ್ತಾನೆಂಬ ಪೂರ್ವಮಿಮಾಂಸಾ " ಭಾಸ್ಕರ " ಮತ ಖಂಡನೆ. [ ಶ್ಲೋಕ ೧೪ ]

೧೧. ಶ್ರೀ ವಿಷ್ಣು ಜಗತ್ತಿಗೆ ಕರ್ತನಲ್ಲ; ರುದ್ರ ಸೂರ್ಯ ಗಣಪತಿ ಸ್ಕಂದ ಮೊದಲಾದವರೇ ವಿಶ್ವ ಕರ್ತರು; ಎಂದು ಹೇಳುವ ಶೈವಾದಿ ಶಾಕ್ತ ಮತಗಳನ್ನು ನಿರಾಕರಿಸುವಿಕೆ. [ಶ್ಲೋಕ ೧೫]

೧೨ ಶ್ರೀಮನ್ನಾರಾಯಣನಾದ ವಿಷ್ಣುವು ಅನಂತ ಗುಣನಲ್ಲ; ಎಂಟೇ ಗುಣಗಳಿರುವವು; ಎಂಬ ವೈಶೇಷಿಕರಾದ ತಾರ್ಕಿಕರ ಪೂರ್ವಪಕ್ಷವನ್ನು ವಿವರಿಸಿ, ಅವರ ಆ ಪರೋಕ್ಷಾನುಮಾನವನ್ನು ಪ್ರತ್ಯಕ್ಷಾನುಮಾನದಿಂದ ನಿರಾಕರಿಸಿ, ಔಪಾಧಿಭೇದ ಸಮವಾಯಾದಿ " ತಾರ್ಕಿಕರ " ಕುತರ್ಕಗಳನ್ನು ಖಂಡಿಸುವಿಕೆ. [ ಶ್ಲೋಕ ೧೬ – ೨೩ ]

೧೩. ಶೂನ್ಯವಾದಿಗಳಾದ ( ಮಾಧ್ಯಮಿಕ ) ಬೌದ್ಧಮತದ ವಿಭಾಗ ವಿವರ, ಮತ್ತು ಈ ವೇದ ವಿರೋಧಿಗಳಾದ ಶೂನ್ಯವಾದಿಗಳೂ ಪ್ರಚ್ಛನ್ನ ಬೌದ್ಧರಾದ ಮಾಯಾವಾದಿಗಳೂ ಸಮಾನರೆಂದು ಸಯುಕ್ತಿಗಳಿಂದ ಪೇಳಿದ್ದು. [ ಶ್ಲೋಕ ೨೪ – ೨೭ ]

೧೪. ಶೂನ್ಯವಾದಿಯ ಶೂನ್ಯವು, ಜಗತ್ತಿಗೆ ಕಾರಣವಲ್ಲೆಂದು ನಿರಾಕರಿಸಿ, ಆ ಶೂನ್ಯವಾದಿ ಯಾವ ಬೌದ್ಧನ ಪೂರ್ವ ಪಕ್ಷವನ್ನು ವಿಸ್ತಾರದಿಂದ ಅನುವಾದ ಮಾಡಿ, ಅವರ ಪೂರ್ವ ಪಕ್ಷವನ್ನು ನಿರವಕಾಶ ಪ್ರಮಾಣಗಳಿಂದ ಖಂಡಿಸಿದ್ದು. [ ಶ್ಲೋಕ ೨೮ – ೩೧ ]

೧೫. ವೇದವನ್ನೊಪ್ಪದಿರುವ, ಶೂನ್ಯವೇ ಜಗತ್ಕಾರಣವೆಂಬ ಶೂನ್ಯವಾದಿಗಳಿಗೂ, ವೇದ ವನ್ನೊಪ್ಪಿ, ಪರಬ್ರಹ್ಮನು ಇರುವನೆಂಬ ಮಾಯಾವಾದಿಗಳಾದ ಅದ್ವೈತಿಗಳಿಗೂ, ಕಿಂಚಿತು ಭೇದವಿಲ್ಲ; ಉಭಯರೂ ಸಮಾನರು; ಎಂದು ಹೇಳುವದು ಸರಿಯಲ್ಲವೆಂತ ಹೇಳ್ವ ಅವರ ಆಕ್ಷೇಪವನ್ನು ಅನೇಕ

ಸಯುಕ್ತಿಗಳಿಂದ ನಿರಾಕರಿಸಿ, ಕಿಂಚಿತ್ತಾದರೂ ಶೂನ್ಯವಾದಿಗೂ ಮಾಯಾವಾದಿಗೂ ಭೇದವಿಲ್ಲವೆಂದು ಸಿದ್ಧಾಂತ ಸಕ್ಷವನ್ನು ಹೇಳಿ, ಶೂನ್ಯವಾದಿಯ ಶೂನ್ಯವು, ಮಾಯಾವಾದಿಯ ನಿರ್ಗುಣ ನಿರಾಕಾರ, ನಿರ್ಧರ್ಮಿಕ ಪರಬ್ರಹ್ಮ ಜಗತ್ತಿಗೆ ಕಾರಣವಲ್ಲವೆಂಬ ಪ್ರಮೇಯ ವಿಶೇಷ. [ ಶ್ಲೋಕ ೩೨ - ೪೨ ]

೧೬. ( ವೇದ ಪ್ರಮಾಣ್ಯತ್ವ ) ವೇದವೇ ಅಪ್ರಮಾಣವಾದುದರಿಂದ, ಬ್ರಹ್ಮ ವೇದವೇದ್ಯನು ಹೇಗಾಗುವನು ? ಎಂಬ ಚಾರ್ವಾಕಾದಿಗಳ ಪ್ರತ್ಯಕ್ಷ ಪ್ರಮಾಣಮತ ನಿರಾಕರಿಸಿ, ವೇದವೇ ಮುಖ್ಯ ಪ್ರಮಾಣ, ಬುದ್ಧಾದಿ ಪುರುಷರು ವಂಚಕರು; ಉನ್ಮತ್ತನ ವಾಕ್ಯದಂತೆ ಪೌರುಷೇಯ ವಾಕ್ಯ ಸ್ವೀಕರಿಸಲು ಸರಿಯಲ್ಲ; ಶ್ರುತಿ ಬಲವಿರದ ಕೇವಲ ಅನುಮಾನ ಗ್ರಾಹ್ಯವಲ್ಲೆಂದು ಖಂಡಿಸಿದ್ದು. [ ಶ್ಲೋಕ ೪೩ - ೪೫ ]

೧೭ ವೇದದಲ್ಲಿ ಹೇಳಿದ ಉಪಾಸನೆಯನ್ನು ಬಿಟ್ಟು, ವೇದ ವಿರುದ್ಧ ಉಪಾಸನೆ ಮಾಡುವ ದುರಾಗ್ರಹಿಗಳಿಗೆ, ನಿತ್ಯ ನರಕವಾದ ಅಂಧಂತಮಸ್ಸೇ ಆಗುವದು; ಕಾರಣಾ, ವೇದೋಕ್ತವಾದಂತೆ ಜೀವೇಶ್ವರರಿಗೆ ಭೇದ ತಿಳಿದು, ಶ್ರೀ ವಿಷ್ಣುವೇ ಮೋಕ್ಷ ಕೊಡುವನೆಂದುಪಾಸನೆ ಮಾಡಿದರೆ ಸುಖ ಸ್ವರೂಪಾವಿರ್ಭಾವಭೂತವಾದ ಮೋಕ್ಷವಾಗುವದೆಂಬ ವರ್ಣನೆ. [ ಶ್ಲೋಕ ೪೬ - ೪೭ ]

೧೮. ಅದ್ವೈತ ತತ್ವದಲ್ಲಿ ಮೋಕ್ಷವೆಂದರೆ ನಿರ್ವಿಶೇಷ ಬ್ರಹ್ಮಭಾವವು, ಈ ನಿರ್ವಿಶೇಷ ಬ್ರಹ್ಮಭಾವದಲ್ಲಿ ಆನಂದವೆಲ್ಲಿದೆ ? ಈ ನಿರ್ವಿಶೇಷ ಬ್ರಹ್ಮ, ನಿರವಯವ ನಿರಾಕಾರನೆಂದು ಹೇಳುವ, ಎಲ್ಲ ಪರವಾದಿಗಳ ನಿರಾಕರಣೆ ಮಾಡುತ್ತ, ಮುಕ್ತಜೀವನು ಸ್ವರೂಪೇಂದ್ರಿಯವುಳ್ಳವನು, ಸುಖಸ್ವರೂಪ ಚಿದಾನಂದ ದೇಹವುಳ್ಳವನೆಂದು ಸ್ಥಾಪಿಸುವಿಕೆ. [ ಶ್ಲೋಕ ೪೮ - ೪೯ ]

೧೯. ಈಶ್ವರನು ದುಃಖಿಯಲ್ಲ; ಮುಕ್ತ ಜೀವನು ದುಃಖರಹಿತನು; ಈಶ್ವರನು ನಿತ್ಯ ಸುಖಾನುಭವವುಳ್ಳವನೆಂಬ ಉಪಾಸಕ ಭಕ್ತನನ್ನು ಉದ್ಧರಿಸಿ ಸಾರೂಪ್ಯ ಮುಕ್ತಿ ಕೊಡುವನೆಂಬ ವಿಷಯ. [ ಶ್ಲೋಕ ೫೦ ]

೨೦. ಮುಕ್ತನಿಗೆ ದೇಹವಿದೆಂದ ಮೇಲೆ ಸಂಸಾರ ಬಂಧನಕ್ಕೊಳಗಾದ ಜೀವನಂತೆ, ಮುಕ್ತನಿಗೆ ಸಹ ಷಡೂರ್ಮಿಗಳು, ಹುಟ್ಟುವದು ಸಾಯುವದು, ಇತ್ಯಾದಿ ೬ ತರಂಗಗಳು ಇರಲಿ; ಎಂದರೆ, ಜರಾಮರಣಾದಿಗಳು ಸ್ಥೂಲವಾದ ಜಡ ಶರೀರಕ್ಕೇವೆ ಉಂಟು ಹೊರ್ತಾಗಿ, ಮುಕ್ತರ ಅಪ್ರಾಕೃತ ಚಿದಾನಂದ ಶರೀರಕ್ಕೆ ಷಡೂರ್ಮಿಗಳಿಲ್ಲ. ಲೇಶ ದುಃಖವೂ ಇಲ್ಲ. ಮುಕ್ತನು ಚೇತನನಾದುದರಿಂದ ಈಶ್ವರನಂತೆಯೇ ಸುಖಸ್ವರೂಪ, ರೂಪರಸಾದಿ ಜ್ಞಾನಾನಂದ ಅನುಭವವುಳ್ಳವನು; ಇತ್ಯಾದಿ. [ ಶ್ಲೋಕ ೫೧ — ೬೦ ]

೨೧. ಈಶ್ವರನೇ ಇಲ್ಲೆನ್ನುವ ನಿರೀಶ್ವರವಾದಿಗಳಿಗೆ, ಈಶ್ವರನ ದೃಷ್ಟಾಂತ ಹೇಗೆ ಕೊಡುವದೆಂದು, ಆ ವಾದಿಗಳು ಆಕ್ಷೇಪಿಸಿದರೆ, ರೂಪರಸಾದಿ ಅನುಭವ ಜ್ಞಾನವು ಚೇತನಕ್ಕೆ ಹೊರ್ತಾಗಿ, ಜಡವಾದ ಶಿಲಾಕ್ಕೆ ಇಲ್ಲ. ಮುಕ್ತನು ಚೇತನನಾದುದರಿಂದ ಶುದ್ಧ ದೇಹವುಳ್ಳವನು, ಚಕ್ಷು ಮೊದಲಾದ ಸ್ವರೂಪೇಂದ್ರಿಯಗಳಿಂದ ಸುಖಭೋಗಿಯು. [ ಶ್ಲೋಕ ೬೧—೬೨ ]

೨೨. ಇಂಥ ಕುತರ್ಕಗಳಿಂದ ಕೂಡಿದ ಈ ಎಲ್ಲ ವೇದವಿರೋಧ ಮತಗಳನ್ನು ಬಿಟ್ಟು, ಸಚ್ಛಾಸ್ತ್ರವಾದ ಪಂಚಭೇದ, ತಾರತಮ್ಯ, ಜಗತು ಸತ್ಯ, ಶ್ರೀ ಹರಿಯೇ ಸರ್ವೋತ್ತಮ, ಸಕಲ ಜೀವರು ಶ್ರೀ ಹರಿಯ ದಾಸರು, ಎಂಬ ಸತ್ಯವಾದ ಜ್ಞಾನವನ್ನು ಸಂಪಾದಿಸಿದರೆ, ಮೋಕ್ಷವಾಗುವದೆಂಬ ವಿಷಯ. [ ಶ್ಲೋಕ ೬೨ ]

೨೩. ಈ ಪ್ರಕಾರ ಸವಿಸ್ತರವಾಗಿ, ಶ್ರೀ ಮಧ್ವರು ಮಾಡಿದ ಉಪನ್ಯಾಸವನ್ನು ತ್ರಿವಿಕ್ರಮ ಪಂಡಿತಾಚಾರ್ಯರು ಕೇಳಿ, ಅನೇಕ ತರ್ಕ ಯುಕ್ತಿಗಳಿಂದ ವಾದಿಸಿ, ಶ್ರೀಮದಾಚಾರ್ಯರು ಆ ತರ್ಕಗಳನ್ನೆಲ್ಲ ಖಂಡಿಸಲು, ಶ್ರೀ ತ್ರಿವಿಕ್ರಮ ಪಂಡಿತರು ವೇದ ವಾಕ್ಯಗಳೆಂಬ ಅಸ್ತ್ರಗಳನ್ನು ಬಿಡಲು, ಅವುಗಳಿಗೆ ನಿಜವಾದ ಅರ್ಥ ಹೇಳಿ, ೧೫ ದಿನಗಳವರಿಗೆ ತ್ರಿವಿಕ್ರಮರೊಡನೆ ವಾದ ಮಾಡಿ, ಅವರನ್ನು ಸೋಲಿಸಿದ ವರ್ಣನೆ. [ ಶ್ಲೋಕ ೬೪.—೬೯ ]

೨೪. ತ್ರಿವಿಕ್ರಮ ಪಂಡಿತರು ಶ್ರೀಮದಾಚಾರ್ಯರಿಗೆ ಅಪರಾಧ ಕ್ಷಮಿಸಿರೆಂದು ಬೇಡಿಕೊಂಡು, ಶ್ರೀ ಮಧ್ವರ ಶಿಷ್ಯತ್ವ ವಹಿಸಿ, ಶ್ರೀ ಬ್ರಹ್ಮಸೂತ್ರ ದ್ವೈತಭಾಷ್ಯವನ್ನು ಶ್ರೀಮದಾನಂದಮುನಿಗಳಿಂದ ಶ್ರವಣ ಮಾಡಿದ್ದು. [ ಶ್ಲೋಕ ೭೦— ೭೨ ]

೨೫. ಶ್ರೀ ಮಧ್ವ ರಚಿತ ಬ್ರಹ್ಮಸೂತ್ರ ಭಾಷ್ಯಕ್ಕೆ, ತ್ರಿವಿಕ್ರಮಾಚಾರ್ಯರು "ತತ್ವ ಪ್ರದೀಪ" ವೆಂಬ ಟೀಕಾ ರಚಿಸಿದ ವರ್ಣನೆ. [ ಶ್ಲೋಕ ೭೩ ]

೨೬. ( ಗ್ರಂಥಗಳ ಮಹಿಮಾ ವರ್ಣನೆ. ) ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರ ಭಾಷ್ಯ, ದಶೋಪನಿಷತ್ ಭಾಷ್ಯಗಳು, ಗೀತಾಭಾಷ್ಯ, ತಾತ್ಪರ್ಯ, ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ, ಶ್ರೀ ಭಾಗವತ ತಾತ್ಪರ್ಯ, ತಂತ್ರಸಾರ, ಕಥಾ ಲಕ್ಷಣ, ಪ್ರಮಾಣ ಲಕ್ಷಣ, ವಿಷ್ಣು ತತ್ವನಿರ್ಣಯ, ತತ್ತ್ವೋದ್ಯೋತ ಮೊದಲಾದ ಪ್ರಕರಣಗಳು, ಅಣುಭಾಷ್ಯ, ಯಮಕಭಾರತ, ಸದಾಚಾರ ಸ್ಮೃತಿ, ಜಯಂತಿಕಲ್ಪ ಮುಂತಾದ ಗ್ರಂಥಮಹಿಮಾ ವರ್ಣನೆ ವಿಶದವಾಗಿ ಪ್ರತ್ ಪ್ರತ್ಯೇಕ ಮಾಡಿದ್ದು. [ ಶ್ಲೋಕ ೭೪—೮೪ ]

೨೭. ಈ ಪ್ರಕಾರವಾಗಿ ಶ್ರೀ ಸರ್ವಜ್ಞರಿಂದ ರಚಿತವಾದ ಈ ಗ್ರಂಥಗಳು ಶಬ್ದಗಳಿಂದ ಸ್ವಲ್ಪವಿದ್ದರೂ, ಚಿಂತಾಮಣಿಯಂತೆ ಅಪರಿಮಿತಾರ್ಥದಿಂದ ಕೂಡಿ, ಅನಂತ ಫಲವನ್ನು ಕೊಡುವವೆಂಬ ವರ್ಣನೆ. [ ಶ್ಲೋಕ ೮೫ ]

೨೮. (ಅನುವ್ಯಾಖ್ಯಾನ ರಚಿಸಲಿಕ್ಕೆ ತ್ರಿವಿಕ್ರಮರ ಪ್ರಾರ್ಥನೆ) ಇಷ್ಟು ಗ್ರಂಥಗಳಿದ್ದರೂ ಅಗಾಧವಾದ ಯುಕ್ತಿಗಳಿಂದಲೂ ಪ್ರಮೇಯಗಳಿಂದಲೂ ತುಂಬಿ ತುಳುಕುತ್ತಿರುವವು. ಅಲ್ಪಜ್ಞರಾದ ನಾವು ತಿಳಿಯಲಿಕ್ಕೆ ಶಕ್ತರಲ್ಲ; ಕಾರಣ ಎಲ್ಲ ಯುಕ್ತಿಗಳನ್ನು ಒಂದೆಡೆಗೆ ಸೇರಿಸಿ, ಇನ್ನೊಂದು ಗ್ರಂಥ ರಚಿಸಿರೆಂದು ತ್ರಿವಿಕ್ರಮರು ಶ್ರೀಮದಾಚಾರ್ಯರನ್ನು ಪ್ರಾರ್ಥಿಸಿದ್ದು [ ಶ್ಲೋಕ ೮೬—೮೭ ]

೨೯ ತ್ರಿವಿಕ್ರಮಾಚಾರ್ಯರಿಂದ, ಪ್ರಾರ್ಥಿತರಾದ ಶ್ರೀ ಸರ್ವಜ್ಞರು, ಅನುವ್ಯಾಖ್ಯಾನವೆಂಬ ಗ್ರಂಥವನ್ನು ಒಮ್ಮೆಲೆ ನಾಲ್ಕು ಅಧ್ಯಾಯಗಳನ್ನು ರಚಿಸುತ್ತ, ನಾಲ್ಕು ಜನ ಶಿಷ್ಯರಿಂದ ಬರಿಸಿದ ಮಹಾಜಗಳ ಸ್ಫೂರ್ತಿ ಮಹಿಮಾ ವರ್ಣನೆ. [ ಶ್ಲೋಕ ೮೮—೮೯ ]

೩೦ ಶ್ರೀ ಅನುವ್ಯಾಖ್ಯಾನ ಗ್ರಂಥಗಳಲ್ಲಿ ಪೇಳಿದ ಯುಕ್ತಿಗಳಿಗೆ ಮಾಲಾ ರೂಪವಾಗಿ ನ್ಯಾಯವಿವರಣವೆಂಬುವ ಗ್ರಂಥ ರಚಿಸಿದ ಬಣ್ಣನೆ. [ ಶ್ಲೋಕ ೯೦ ]

೩೧. ಶ್ರೀಮದಾಚಾರ್ಯರ ಅನುಜರ ಮಹಿಮಾ. ಮಹಾ ವೈರಾಗ್ಯಶಾಲಿಗಳು. ಭಕ್ತಿಮಂತರು, ಶ್ರೀಮದಾಚಾರ್ಯರ ಸನ್ನಿಧಿಗೆ ಬಂದು ನಮಿಸಿ, ಸನ್ಯಾಸ ಕೊಡಲಿಕ್ಕೆ ಪ್ರಾರ್ಥಿಸಲು, ಇದು ಚಾತುರ್ಮಾಸ ಸಮಯ, ಸನ್ಯಾಸ ಕೊಡಲು ಯೋಗ್ಯ ಕಾಲವಲ್ಲ, ಈಗ ಪುನಃ ಮನೆಗೆ ಹೋಗಿ ಇರು ಮುಂದೆ ಸನ್ಯಾಸ ಕೊಡುವೆನೆಂದು, ಶ್ರೀ ಮಧ್ವರು ಪೇಳಲು, ಮನೆಗೆ ಹೋಗಿ, ಸನ್ಯಾಸದ ಕಾಲ ಪರೀಕ್ಷಣೆ ಮಾಡುತ್ತ, ಭರತನು ಶ್ರೀ ರಾಮದೇವರ ಪಾದ ಧ್ಯಾನಿಸುವಂತೆ, ಶ್ರೀಮದಾಚಾರ್ಯರ ಪಾದ ಧ್ಯಾನ ಮಾಡುವ ವರ್ಣನೆ. [ ಶ್ಲೋಕ ೯೧—೯೪ ]

೩೨ ಶರದ್ಯತ ಮುಗಿದಮೇಲೆ, ವಿಷ್ಣುಮಂಗಳದಲ್ಲಿ, ಜಯಸಿಂಹ ನೃಪನಿಗೆ, ಯೋಗ್ಯ ಅಶ್ವಾಸನವಿತ್ತು, ಅತನನ್ನು ರಾಜ್ಯದಲ್ಲಿಯೇ ಇರಿಸಿ, ವಿಷ್ಣುಮಂಗಳದಿಂದ, ಜನ್ಮ ಭುವಿಯಾದ ಪಾಜಕ ಕ್ಷೇತ್ರಕ್ಕೆ ಬಂದು, ವೈರಾಗ್ಯಶಾಲಿಗಳಾದ ತಮ್ಮ ಅನುಜರಿಗೆ, ಸನ್ಯಾಸ ಅಶ್ರಮ ಕೊಟ್ಟು, ಋಜು ಯೋಗ್ಯವಾದ ಪ್ರಣವ ಮಂತ್ರೋಪದೇಶಿಸಿ, ಅವರಿಗೆ "ವಿಷ್ಣುತೀರ್ಥ" ರೆಂದು, ನಾಮಕರಣ ಮಾಡಿದ್ದು [ ಶ್ಲೋಕ ೯೪ – ೯೮ ]

೩೩. ಮುಂದೆ ಶ್ರೀ ವಿಷ್ಣುತೀರ್ಥರು, ಶ್ರೀ ಸರ್ವಜ್ಞರಿಂದ, ಸಕಲ ಗ್ರಂಥಗಳನ್ನು ಶ್ರವಣ ಮಾಡಿ, ಶ್ರವಣ ಮನನ ನಿದಿಧ್ಯಾಸಗಳಿಂದ ಕಾಲಸಾರ್ಥಕ್ಯ ಮಾಡುತ್ತ, ಶ್ರೀ ಗುರುಗಳ ಸೇವಾ ಮಾಡುತ್ತ, ಶ್ರೀ ಗುರುಗಳ ಕೃಪಾಂಕುರವನ್ನು, ಮಹಾಕಲ್ಪದ್ರುಮವನ್ನಾಗಿ ಮಾಡಿ, ಶ್ರೀಮದಾ ಚಾರ್ಯರಿಗೆ, ಮುಖ್ಯ ಶಿಷ್ಯರಾದದ್ದು. [ ಶ್ಲೋಕ ೯೯ – ೧೦೦ ]

೩೪. ಶ್ರೀ ವಿಷ್ಣುತೀರ್ಥರು, ಪಾಜಕ ಕ್ಷೇತ್ರದಿಂದ, ಉತ್ತರಕ್ಕೆ ಪೊರಟು ತೀರ್ಥಯಾತ್ರೆ ಮಾಡುತ್ತ, ತಪಸ್ಸಿಗೆ ಸಿದ್ಧಭೂಮಿಯಾದ ಶ್ರೀ ಹರಿಶ್ಚಂದ್ರ ಪರ್ವತವನ್ನು ಪೊಂದಿ, ಅಲ್ಲಿ ತಪಸ್ಸು ಮಾಡಿದ್ದು. [ ಶ್ಲೋಕ ೧೦೩ – ೧೦೪ ]

೩೫. ಹರಿಶ್ಚಂದ್ರ ಗಿರಿಯಲ್ಲಿ ಶ್ರೀ ವಿಷ್ಣುತೀರ್ಥರು ಕೆಲದಿನ ಅನಶನ ವ್ರತದಿಂದ ತಪಸ್ಸು ಮಾಡಿದ ವರ್ಣನೆ. ನಂತರ ಭಕ್ತ ಜನರ ಪ್ರಾರ್ಥನಾನುಸಾರವಾಗಿ, ಅವರು ತಂದುಕೊಡುವ ಪಂಚ ಗವ್ಯವನ್ನು, ಕಿಂಚಿತು ಐದು ದಿನಕ್ಕೊಮ್ಮೆ ಸೇವಿಸುತ್ತಾ, ಪುನಃ ಆ ಪಂಚ ಗವ್ಯವನ್ನು ಸಹ ಬಿಟ್ಟು, ಭೂಮಿಯ ಮೇಲೆ ಬಿದ್ದ ಬಿಲ್ವ ಪತ್ರಗಳಿಂದಲೂ, ಅಥವಾ ಉದಕದಿಂದಲೂ ತೃಪ್ತರಾಗಿ ತಪಸ್ಸು ಮಾಡಿದ್ದು. [ ಶ್ಲೋಕ ೧೦೫ – ೧೦೭ ]

೩೬ ಈಶಾನುಗ್ರಹವಿಲ್ಲದೇ ಯಾವ ಮುನಿಗಳಿಂದಲೂ, ಒಂದು ದಿನ ಕುಳ್ಳಿರಲಾಗದ ಮಹಾ ತಂಪು ಶಿಲೆಯಲ್ಲಿ ಕುಳಿತು ಬಹು ಕಾಲವರಿಗೆ ಶ್ರೀ ವಿಷ್ಣುತೀರ್ಥರು ತಪಸ್ಸು ಮಾಡಿದ ಮಹಿಮಾ. [ ಶ್ಲೋಕ ೧೦೮ ]

೩೭. ಶ್ರೀ ವಿಷ್ಣುತೀರ್ಥರು ಪ್ರಾಣಾಯಾಮ ಕ್ರಮದಿಂದ ಶ್ವಾಸ ನಿರೋಧಗೈಸಿ ವಾಯು ಜಯಿಸುತ್ತ ಇಂದ್ರಿಯಗಳೆಂಬ ಕುದುರೆಗಳನ್ನು ಶಬ್ದಾದಿ ವಿಷಯಗಳಿಂದ ನಿಗ್ರಹಿಸಿ ಮನೋ ಸಾರಥಿಯಿಂ, ಹಿಂದೆ ತಿರುಗಿಸಿದ ವರ್ಣನೆ. [ ಶ್ಲೋಕ ೧೦೯ ]

೩೮. ವಿಷ್ಣುತೀರ್ಥರು ಸದಾ ಶ್ರೀಪಾದ ಧ್ಯಾನದಲ್ಲಿ ನಿರತರಾದ ಸಿದ್ಧಿಯೋಗ ಬಲದಿಂದ, ಅಸಂಪ್ರಜ್ಞಾತ ಸಮಾಧಿಲಿ ಧ್ಯಾನನಿರತರಾಗಿ ಶ್ರೀಹರಿ ರೂಪ ಧ್ಯಾನಿಸುವರು. ಇಂಥ ಧ್ಯಾನಾಖ್ಯ ಯೋಗಮಣಿಗೆ, ಮೋಕ್ಷ ಸಾಮ್ರಾಜ್ಯವೇ ಹೊರತಾಗಿ, ಅನ್ಯ ಫಲವಿಲ್ಲೆಂಬ ವರ್ಣನೆ. [ ಶ್ಲೋಕ ೧೧೦ – ೧೧೨ ]

೩೯. ಶ್ರೀಮದಾಚಾರ್ಯರು, ಶ್ರೀ ಮದ್ವಿಷ್ಣುತೀರ್ಥರಲ್ಲಿ ಮಾಡಿದ ಅನುಗ್ರಹವು, ಬುದ್ಧಿಗೆ ಅಗೋಚರವೂ, ಗೌಪ್ಯವಾದದ್ದು, ಕಾರಣ ಈ ಮಹಾ ಮಹಿಮೆ ಇತರ ಜನರ ಅನಧಿಕಾರವೆಂದು ಹೆಚ್ಚಿಗೆ ವರ್ಣಿಸಿಲ್ಲ; ಶ್ರೀ ಪೂರ್ಣಬೋಧರ ಸೇವಾಮಹಿಮೆ ಅತ್ಯದ್ಭುತವಾದುದೆಂಬ ವರ್ಣನೆ. [ ಶ್ಲೋಕ ೧೧೩ - ೧೧೪ ]

೪೦. ಶ್ರೀ ವಿಷ್ಣುತೀರ್ಥರಿಗೆ ಅನಿರುದ್ಧ ತೀರ್ಥರೆಂಬ ಮಹಾ ವೈರಾಗ್ಯಶಾಲಿಗಳೂ, ಭವಿಷ್ಯ ಜ್ಞಾನಿಗಳೂ ಆದ ಶಿಷ್ಯರಿದ್ದು, ಹರಿಶ್ಚಂದ್ರಗಿರಿಗೆ ಬಂದು, ತಪಸಿಗರಾದ ಶ್ರೀ ವಿಷ್ಣುತೀರ್ಥರನ್ನು

ಪ್ರಾರ್ಥಿಸಿ, ಉಡಪಿಗೆ ಕರೆತಂದುದು. ಉಡಪಿಗೆ ದಯಮಾಡಿಸಿದ ಶ್ರೀ ವಿಷ್ಣುತೀರ್ಥರನ್ನು ಜನಗಳು ನೋಡಿ ರೂಪಗುಣ ಸಾಮ್ಯರಾದ ಶ್ರೀಮದಾಚಾರ್ಯರೇ ತಮ್ಮ ಮೇಲೆ ಅನುಗ್ರಹ ಮಾಡಲು, ಬಂದರೆಂಬ ವರ್ಣನೆ. [ ೧೧೫ - ೧೧೬ ]

೪೧. ಶ್ರೀ ವಿಷ್ಣುತೀರ್ಥರಿಗೆ, ಶ್ರೀ ವ್ಯಾಸತೀರ್ಥರೆಂಬ ಇನ್ನೊಬ್ಬ ಶಿಷ್ಯರಿರುವರೆಂಬ ಮಹಿಮಾ, ಈ ವ್ಯಾಸತೀರ್ಥರು ಶ್ರೀಮದಾಚಾರ್ಯರಿಗೆ, ಅತಿ ಪ್ರಿಯರು. ಇವರಲ್ಲಿ ಶ್ರೀ ವಿಷ್ಣುತೀರ್ಥರು ಬಹು ಅನುಗ್ರಹವನ್ನು ಮಾಡಿ, ಈ ಮಹಿಯೊಳಗೆ ವ್ಯಾಸತೀರ್ಥರನ್ನು ಮಹಾ ಶ್ರೇಷ್ಠರನ್ನು ಮಾಡುತ್ತ ಶ್ರೀ ಹರಿಗೆ, ಪ್ರೀತಿಕರ, ಕುಮಾರ ಪರ್ವತ ಶಿಖರವನ್ನೇರಿ, (ಶ್ರೀ ವಿಷ್ಣು ತೀರ್ಥರು) ಸಹ್ಯಾದ್ರಿಗಿರಿಯಲ್ಲಿ, ಅದ್ಯಾಪಿ ತಪಸ್ಸು ಮಾಡುತ್ತಿರುವರೆಂಬ ವರ್ಣನೆ. [ ಶ್ಲೋಕ ೧೨೭ -- ೧೨೯ ]

೪೨. ಶ್ರೀ ಸರ್ವಜ್ಞಾಚಾರ್ಯರಿಗೆ, ಶಿಷ್ಯರು, ಶ್ರೀ ವಿಷ್ಣುತೀರ್ಥರಲ್ಲದೆ ಪೂರ್ವದಲ್ಲಿ ಗೋದಾವರೀ ತಟದಿಂದ ಬಂದ (ಶೋಭನ ಬಟ್ಟ) ಶ್ರೀ ಪದ್ಮನಾಭ ತೀರ್ಥರೆಂಬ ಶಿಷ್ಯರಿದ್ದ ವರ್ಣನೆ. [ ಶ್ಲೋಕ -- ೧೩೦ ]

೪೩ ಶ್ರೀ ಪದ್ಮನಾಭತೀರ್ಥರು, ವೇದಾಂತ ಪಾಠ ಶ್ರವಣ ಮನನ ಭಕುತಿ ವೈರಾಗ್ಯಾದಿಗಳಿಂದ ಯುಕ್ತರಾಗಿ, ಪರಪಕ್ಷವೆಂಬೋ ನದಿಗಳ ಪ್ರವಾಹಸ್ತಂಭನ ಮಾಡಲು, ಈ ವಿದ್ವತ್ತಿಮಿಂಗಿಲರಾದ ಶ್ರೀ ಪದ್ಮನಾಭರು ವೇದಾಂತ ಶಾಸ್ತ್ರಸಾಗರದಲ್ಲಿ, ಚರಿಸುತ್ತ, ವಾದಿಗಳೆಂಬ ಗ್ರಾಮಸಿಂಹಗಳಿಗೆ, ಸಿಂಹ ಸದೃಶರೂ, ದುರ್ವಾದಿಗಳ ಗರ್ವಹರಣ ಮಾಡಲು ಪಂಚಾಸ್ಯರೂ, ಮಹಾ ಚತುರರೂ, ಮತ್ತು ಶ್ರೀಮದಾಚಾರ್ಯಕೃತ ಅನುವ್ಯಾಖ್ಯಾನಕ್ಕೆ ಸನ್ಯಾಯರತ್ನಾವಳಿ ಎಂಬ ಟೀಕೆಯನ್ನು ರಚಿಸಿದ, ಶ್ರೀ ಪದ್ಮನಾಭತೀರ್ಥರಿಗೆ, ಶ್ರೀಮದಾಚಾರ್ಯರು, ಅಧ್ಯಾತ್ಮ ವಿದ್ಯೋಪದೇಶವನ್ನು ಮಾಡಿದರೆಂಬ ಸವಿಸ್ತರ ವರ್ಣನೆ. [ ಶ್ಲೋಕ ೧೩೧ -- ೧೩೬ ]

೪೪. ಶ್ರೀ ಸರ್ವಜ್ಞರಿಗೆ ಶ್ರೀ ವಿಷ್ಣುತೀರ್ಥರು, ಶ್ರೀ ಪದ್ಮನಾಭತೀರ್ಥರು ಶಿಷ್ಯರಲ್ಲದೆ, ಇವರಿಂದ ಮೊದಲಿಗೆ ಯತಿಯಾದವರೂ, ಇವರಿಂದ ಕೊನೆಗೆ ಶಿಷ್ಯರಾದವರೂ ಅನೇಕ ದೇಶದಲ್ಲಿ ಹುಟ್ಟಿದ ಅನೇಕ ಜನ ಶಿಷ್ಯರಿದ್ದರೆಂಬ ವರ್ಣನೆ. [ ಶ್ಲೋಕ ೧೩೭ ]

೪೫. ಮೊದಲಿಗೆ ಹೇಳಿದ ಶ್ರೀ ವಿಷ್ಣುತೀರ್ಥರು ಸೋದೇ ಮಠದ ಮೂಲ ಸ್ವಾಮಿಗಳು. ಇವರಲ್ಲದೆ ಉಡಪಿಯ ಬಾಕಿ ೭ ಮಠದ ಹೃಷೀಕೇಶತೀರ್ಥರೂ, ನರಸಿಂಹತೀರ್ಥರೂ, ಉಪೇಂದ್ರ ತೀರ್ಥರೂ, ವಾಮನತೀರ್ಥರೂ, ರಾಮತೀರ್ಥರೂ, ಅಧೋಕ್ಷಜತೀರ್ಥರೂ, ಶ್ರೀಮದಾಚಾರ್ಯರಿಗೆ ಶಿಷ್ಯರಾಗಿ ನಾಮಸಾರ್ಥಕ್ಯದಿಂದ ಭೂಮಿ ಸಂಚರಿಸುವ ಸೂರ್ಯರಂತೆ ಪ್ರಕಾಶಮಾನರಾಗಿದ್ದರೆಂಬ ವರ್ಣನೆ. ಮತ್ತು ಇವರ ಎಲ್ಲ ಶಿಷ್ಯ ಪ್ರಶಿಷ್ಯರು ಸರ್ವದಾ ಮೋಕ್ಷ ಶಾಸ್ತ್ರ ವಿಚಾರ ಮಾಡುತ್ತ, ಸರ್ವ ದುರ್ವಾದಿಗಳನ್ನು ಖಂಡಿಸುತ್ತಾ, ಕೆಲ ಮಹಾಮತಿಗಳು ಅಲ್ಪ ಶ್ರುತರಾಗಿ, ಕೆಲರು ಮಂದಮತಿಗಳಾದರೂ ಮಹಾ ಶ್ರುತರಾಗಿ, ಮಹಾ ಗುಣಗಳಿಂದ ಶೋಭಿಸುವ ವರ್ಣನೆ. [ಶ್ಲೋಕ ೧೩೮--೧೪೪]

೪೬ ಶ್ರೀಮದಾಚಾರ್ಯರ ಪರಮಾನುಗ್ರಹವನ್ನು ಪಡೆದ ಅನೇಕ ಜನ ಸದ್ಗೃಹಸ್ಥರೊಳಗೆ ವಿಶೇಷಾನುಗ್ರಹಕ್ಕೆ ಪಾತ್ರರಾದ, ಲಿಕುಚಕುಲಜಾತರಾದ, ತ್ರಿವಿಕ್ರಮಾಚಾರ್ಯರೂ, ಅವರ ತಮ್ಮಂದಿರಾದ ಶಂಕರಾಚಾರ್ಯರೂ, ಮತ್ತು ಅದೇ ಲಿಕುಚ ವಂಶಜರಾದ ಇನ್ನೊಬ್ಬ ಶಂಕರಾಚಾರ್ಯರೂ, ಈ ಮೂರು ಜನರೂ ಮೂರು ಅಗ್ನಿಯಂತೆ ಶೋಭಿಸುತ್ತ ಸರ್ವದಾ ಶಿಷ್ಯರಿಗೆ ಮಧ್ವಶಾಸ್ತ್ರ ಬೋಧಿಸುತ್ತಿದ್ದರೆಂಬ ವರ್ಣನೆ. [ ಶ್ಲೋಕ ೧೪೫ - ೧೪೬ ]

೪೭. ಬ್ರಾಹ್ಮಣ ಶ್ರೇಷ್ಠ ಕ್ಷತ್ರಿಯ ಶೂದ್ರಾದಿ, ಅನೇಕ ಗ್ರಾಮಾಧಿಪತಿಗಳು ಶ್ರೀಮದಾಚಾರ್ಯರಿಗೆ ಶಿಷ್ಯರಾಗಿದ್ದರೆಂಬ ವರ್ಣನೆ. [ ಶ್ಲೋಕ ೧೩೭ ]

೪೮. ಶ್ರೀ ರಾಮಚಂದ್ರದೇವರಿಗೆ ಪ್ರಿಯರಾದ ಶ್ರೀಮದಾಚಾರ್ಯರು ತಮ್ಮ ಭಕ್ತರಾದ ಅನೇಕರಿಗೆ, ಶ್ರೀರಾಮನಂತೆಯೇ ಸ್ವಸ್ವಯೋಗ್ಯವಾದ ಮೋಕ್ಷ ಪದವಿಯನ್ನು ಕೊಟ್ಟರೆಂಬ ಬಣ್ಣನೆ. [ ಶ್ಲೋಕ ೧೩೮ ]

೪೯. ಅನೇಕ ಮಹಾ ಮಹಾತ್ಮ್ಯವುಳ್ಳ ಶ್ರೀಮದಾಚಾರ್ಯರ ಶಿಷ್ಯರ ಮಹಿಮಾ ಇಂತಿರಲು, ಶ್ರೀಮದಾಚಾರ್ಯರ ಮಹಾ ಮಹಿಮೆ ಅಸಾಧ್ಯವಾದುದು. ಆದರೂ ಭಕ್ತಿಗೆ ಸುಲಭವಾದುದು: ಇಂಥ ಮಹಾ ಮಹಿಮರ ಪಾದಸುರದ್ರುಮವನ್ನು, ಯಾವನು ಇಚ್ಛಿಸಲಾರನು ? ಸರ್ವರೂ ಬಯಿಸಿ, ಸೇವಿಸುವರೆಂಬ ವರ್ಣನೆ. [ ಶ್ಲೋಕ ೧೩೯ ]

೫೦. ಈ ಪ್ರಕಾರವಾಗಿ ಶ್ರೀ ಪೂರ್ಣಬೋಧರು, ಸದ್ಭಕ್ತರಾದ ಸಜ್ಜನರಿಂದ ಪೂಜೆಗೊಳ್ಳುತ್ತ ಕಣ್ವತೀರ್ಥದ ಹತ್ತಿರ ತಾಂತ್ರ್ಯವೆಂಬ ಗ್ರಾಮದ ಸನ್ಮಠದಲ್ಲಿ, ಚಾತುರ್ಮಾಸಕ್ಕೆ ಕುಳಿತರೆಂಬ ವರ್ಣನೆ. [ ಶ್ಲೋಕ ೧೪೦ ]

೫೧. ಸದ್ಭಕ್ತರ ಸಂಸಾರ ತಾಪವನ್ನು ಪರಿಹರಿಸಲು ಶಕ್ತರಾದ, ಮತ್ತು ವೇದವಿದ್ಯೆಯೆಂಬ ಅಮೃತ ಕಲೆಯಿಂದ ಪೂರಿತವಾದ, ಶ್ರೀಮದಾಚಾರ್ಯರ ಮುಖಚಂದ್ರಮನನ್ನು, ಯಾರು ಪ್ರತ್ಯಕ್ಷ ನೋಡಿದರೊ, ಅವರ ದಾಸರ ದಾಸರಾದರೂ, ಆ ಪುರುಷರಿಗೆ ಸರ್ವಾಭೀಷ್ಟ ಕೊಡುವರೆಂಬ ಸ್ತೋತ್ರ ರೂಪಮಂಗಳ. [ ಶ್ಲೋಕ ೧೪೧ ]

॥ ಇತಿ ಸರ್ಗಾನುಕ್ರಮಣಿಕೆ ॥

ಇತಿ ಶ್ರೀಮದಜಾದಿ ಏಕ ಪಂಚಾಶದ್ವರ್ಣಾತ್ಮಕಾ ಭಿನ್ನ

॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥



॥ ಶ್ರೀ ಲಕ್ಷ್ಮೀ ನರಸಿಂಹ ಪ್ರಸನ್ನ. ॥

ಶ್ರೀಗುರು ರಾಜೋ ವಿಜಯತೇ

# ಶ್ರೀ ಸುಮಧ್ವ ವಿಜಯ ೧೫ನೆಯ ಸರ್ಗಸಾರ.

## ವಿಮರ್ಶೆ

ಮಹಾವೀರರು, ಧೀರೋದಾತ್ತ ಕಥಾನಾಯಕ ಶ್ರೀ ಸರ್ವಜ್ಞಾಚಾರ್ಯರು, ಶ್ರೀವಿಷ್ಣುಮಂಗಳದ "ಕುಡಿಲ್" ಎಂಬ ಗುಡಿಯಲ್ಲಿ ಕೆಲವು ದಿನಗಳಿರುತ್ತ, ಶ್ರೀ ಬ್ರಹ್ಮ ಸೂತ್ರಗಳಿಗೆ ತಾವು ರಚಿಸಿದ, ದ್ವೈತಭಾಷ್ಯವಾದ ವೇದಾಂತ ಶಾಸ್ತ್ರವನ್ನು, ಉಪದೇಶಿಸಲು ಪ್ರಾರಂಭಿಸಿದರು. ಆಗ್ಗೆ ಅದ್ವೈತ-ಶಾಸ್ತ್ರದಲ್ಲಿ ಪ್ರಬಲರಾದ ತ್ರಿವಿಕ್ರಮ ಪಂಡಿತಾಚಾರ್ಯರು, ಕಥಾನಾಯಕರ ಪ್ರತಿಭಟರು ಶ್ರೀ ಸರ್ವಜ್ಞರೊಡನೆ, ವಾದರೂಪವಾದ ವಾಗ್ ಯುದ್ಧದಲ್ಲಿ ಗೆಲ್ಲಬೇಕೆಂಬ ಅಪೇಕ್ಷದಿಂದ, ಯುದ್ಧ ಮಾಡತಕ್ಕ ವೀರನೊಡನೆ ಕಾದಲು ಪ್ರತಿಭಟನು ತನ್ನ ರಥದಲ್ಲಿ, ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಕುಳಿತು, ಯುದ್ಧ ಮಾಡಲು ವೀರನೆದುರಿಗೆ ಹೊರಟಂತೆ, ಅದ್ವೈತ ಸಿದ್ಧಾಂತವೆಂಬ ಪಕ್ಷವನ್ನೊಹಿಸಿ, ಪರಪಕ್ಷ ರಥದಲ್ಲಿ ಕುಳಿತು, ಅನೇಕ ತರ್ಕಶಾಸ್ತ್ರಯುಕ್ತಿಗಳೆನ್ನುವ, ಬಾಣಗಳನ್ನು ಪಿಡಿದು, ಶ್ರೀ ಸರ್ವಜ್ಞರೊಡನೆ ವಾದ ಮಾಡಲು, ಎದುರಿಗೆ ಸಜ್ಜಾಗಿ ಕುಳಿತವರನ್ನು, ಶ್ರೀ ಸರ್ವಜ್ಞರು ನೋಡಿ ಬಹು ಸಂತೋಷದಿಂದ, ಉಪನ್ಯಾಸ ರೂಪವಾದ, ವಾಗ್ ಯುದ್ಧವನು ಪ್ರಾರಂಭಿಸಿದರು.

ವೀರ ಪ್ರತಿವೀರರು ಪರಸ್ಪರ ಯುದ್ಧ ಮಾಡಲು ಸೈನ್ಯ ಬೇಕು. ಇಲ್ಲಿ ಉಪನ್ಯಾಸ, ವಾಕ್‌ಪ್ರವಚನರೂಪವಾದ ಸೈನ್ಯವು ತನ್ನೊಡೆಯಗೆ ಗೆಲವು ತಂದುಕೊಡುವ ಅಪೇಕ್ಷದಿಂದ ಶ್ರೀ ಸ್ವಾಮಿಭಕ್ತಿಯಾದ, ಶ್ರೀ ಹರಿಯೆ ಸರ್ವೋತ್ತಮ, ಸೃಷ್ಟ್ಯಾದ್ಯಷ್ಟಕರ್ತನು ಯೆಂದು ಸಾಧಿಸುವ ಸೈನ್ಯವು (ಉಪನ್ಯಾಸ ಭಾರತಿಯು) ಶ್ರೀಮದಾಚಾರ್ಯರ ಮುಖವೆಂಬ ಶಿಬಿರದಿಂದ ಹೊರಹೊರಟಿತು. ಈ ಉಪನ್ಯಾಸ ಸೈನ್ಯದಲ್ಲಿ

೧. ಬ್ರಹ್ಮಸೂತ್ರಗಳೆ— ರಥಸಮೂಹಗಳು.

೨. ಪರರಿಂದ ಅರ್ಥ ಮಾಡಲು ಶಕ್ಯವಲ್ಲದ ಅಪೌರುಷೇಯ ಶ್ರುತಿಗಳೇ } ಆನೆಗಳು.

೩. ಮಹಾಯುಕ್ತಿಗಳೇ—ಕಾಲಾಳುಗಳು.

೪. ಸ್ಮೃತಿ ವಚನಗಳೇ—ಕುದುರೆಗಳು.

ಹೀಗೆ ನಾಲ್ಕು ಪ್ರಕಾರವಾಗಿ, ಚತುರಂಗ ಸೇನೆಯು, ಅರ್ಥಾನುಸಂಧಾನದಿಂದ ತನ್ನ ಪಕ್ಷ ಸಾಧಿಸುವಲ್ಲಿ, ಮಹಾ ಬಲಾಢ್ಯವಾಗಿತ್ತಲ್ಲದೆ, ಈ ಸೈನ್ಯರೂಪವಾದ ಉಪನ್ಯಾಸವು

ಶ್ರೀ ಲಕ್ಷ್ಮೀದೇವಿಯಂತೆಯೂ ಸಗರರಾಜನ ಸೇನೆಯಂತೆಯೂ ಅಶ್ವಮೇಧ ಯಜ್ಞ ಕುದುರೆಯನ್ನು ಪುಡುಕುವ ಸಗರಪುತ್ರನ ಸೇನೆಯ ಸಂಪತ್ತಿನಂತೆಯೂ ಸಾಗರ (ಸಮುದ್ರ) ಶೋಭೆಯಂತೆಯೂ (ಇರುಪದೆಂದು ವರ್ಣಿಸಿದ ಕವಿಚಮತ್ಕೃತಿಯು. ಮತ್ತು ಸಕಲ ಜಗತ್ತನ್ನು ಪಾವನ ಮಾಡುವ ಗಂಗೆಯಂತೆಯೂ, ಗಂಗಾಪ್ರವಾ ದಂತೆಯೂ ಇತ್ತು.

ಶ್ರೀಮನ್ನಾರಾಯಣನೇ ಸರ್ವೋತ್ತಮ, ಅನಂತ ಕಲ್ಯಾಣಗುಣಪೂರ್ಣ, ದೇಶಕಾ ಬಾಧಾರಹಿತನು, ನಿರ್ದೋಷನು, ನಶ್ವರಿಲ್ಲದ ವೀರ್ಯ ಶೌರ್ಯ ಸಂಪತ್ತು ತೇಜಸ್ಸಾ ಗಳಿಂದ ಪೂರ್ಣನಾದ ಕಾರಣ ಈತನೇ ಪರಬ್ರಹ್ಮನೆಂದು ಕರೆಸುವನು, ಸಕಲ ಗಜತ್ತಿ ಸೃಷ್ಟ್ಯಾದಿ ಅಷ್ಟಕರ್ತನು, ವೇದಗಳಿಂದ ಪ್ರತಿಪಾದ್ಯನಾದ ಈ ಪರಬ್ರಹ್ಮನೇ ನಾರಾಯಣ ನೆಂದು ಅನೇಕ ವೇದಗಳು ಪೊಗಳುತ್ತಿರುವವು. ಇದು ಅನಾದಿ ಕಾಲದಿಂದ ಬಂದುದು.

ಇಂಥ ಸಕಲ ಪ್ರಮೇಯವನ್ನು ಸೃಷ್ಟ್ಯಾರಂಭ ಕಾಲದಲ್ಲಿ ಶ್ರೀಮನ್ನಾರಾಯಣನ ತನ್ನ ಮಗನಾದ ಚತುರ್ಮುಖ ಬ್ರಹ್ಮದೇವರಿಗೆ ಉಪದೇಶ ಮಾಡಿದನು. ಬ್ರಹ್ಮ ದೇವರು ಈ ತತ್ವಜ್ಞಾನವನ್ನು ನಾರದಾದಿ ಮಹಋಷಿಗಳಿಗೆ ಉಪದೇಶ ಮಾಡಿದನು. ನಾರದಾದಿ ಋಷಿಗಳು ಈ ತತ್ವ ವಿಚಾರವನ್ನು ಲೋಕದಲ್ಲಿ ಪ್ರಚಾರ ಮಾಡುತ್ತಾ ಇರಲು, ಸತ್ವಗುಣ ಉನ್ನಾಹ ಕಾಲವಾದ ಕೃತ-ತ್ರೈತಾ, ದ್ವಾಪರಾದಿ ಯುಗಗಳಲ್ಲಿ, ವಿಶೇಷವಾಗಿ ಪ್ರಾಚುರ್ಯ ದಲ್ಲಿತ್ತು. ಆದರೂ ದ್ವಾಪರಾಂತ್ಯ ಯುಗದಲ್ಲಿ ಈ ತತ್ವಜ್ಞಾನವು ಕಡಿಮೆಯಾದಿತು. ತಮೋಗುಣ ಉನ್ನಾಹ ಕಾಲವಾದ ಈ ಕಲಿಯುಗದಲ್ಲಿ ಆ ಮೂಲ ತತ್ವಜ್ಞಾನವೇ ಲೋಪವಾಗಿ, ತಮೋಪ್ರಾಚುರ್ಯ ಜೀವರನೇಕರು ತಮ್ಮ ಮತಿ (ಬುದ್ಧಿ)ಯಂತೆ, ಪ್ರವಾಹತೋ ಅನಾದಿಯಾದ ಮತಗಳನ್ನು ಪ್ರವೃತ್ತಿಸಿದರು.

ಇದಕ್ಕೆ ಕಾರಣವೇನೆಂದು ವಿಚಾರಿಸಿದರೆ, ಜೀವರಾಶಿಗಳು ಅನಂತ. ಇದರಲ್ಲಿ ಸತ್ವ ರಜ, ತಮೋ ಸ್ವಭಾವದವರು ಅನಾದಿ ನಿತ್ಯರಿರುವರು. ಅವರವರ ಮತಿಸ್ಥವಾದ ಮತಗಳಾದರೂ ಪ್ರವಾಹತಃ ಅನಾದಿ ನಿತ್ಯವಾಗಿವೆ, ಈ ಮತಗಳು ಪ್ರಾಚುರ್ಯ ಅಪ್ರಾ ಚುರ್ಯದಿಂದ ಕಾಲಕ್ಕನುಸಾರವಾಗಿ, ಲೋಕದಲ್ಲಿ ಪ್ರಸಿದ್ಧವಾದವು.

ಅನಾದಿ ನಿತ್ಯವಾದ ವಸ್ತುಗಳು ಈಶ ಲಕ್ಷ್ಮೀ ಹೊರತಾಗಿ, (೧) ಜೀವರು, (೨) ವೇದ (೩) ದೇಶ, (೪) ಕಾಲ, (೫) ಕರ್ಮ, (೬) ಜಡ ಪ್ರಕೃತಿ ಹೀಗೆ ಆರು ವಸ್ತುಗಳು ನಿತ್ಯ ವಾದವೆಂದು ವೇದವು ತಿಳಿಸಿಕೊಡುವದು.

ಶ್ರೀ ಹರಿಯು, ಶ್ರೀ ಮಹಾ ಲಕ್ಷ್ಮೀದೇವಿಯ ದ್ವಾರಾ, ಆ ಜೀವರ ಮೂಲ ಸ್ವಭಾವ ಅನಾದಿ ಕರ್ಮಾನುಸಾರವಾಗಿ ಪ್ರಕೃತಿಯಿಂದ ಬದ್ಧಿತರಾದ ಅಸ್ಪೃಜ್ಯ ಜೀವರನ್ನು ದೇಶ ಕಾಲಾನುಸಾರವಾಗಿ ಸೃಷ್ಟಿಗೆ ತಂದು ಸಾಧನ ಮಾಡಿಸುತ್ತಾ ವೇದಗಳ ದ್ವಾರಾ ಅವರಿಗೆ ತಿಳುವಳಿಕೆಯಿತ್ತು ಅನಾದಿ ಲಿಂಗಬದ್ಧರಾದ ತ್ರಿವಿಧ ಜೀವರಿಗೆ, ಲಿಂಗ ಪ್ರಕೃತಿಯನ್ನು ಬೇರೆ ಬೇರೆ ರೀತಿಯಿಂದ ಕಳೆಯುವನು.

(೧) ನಿಜತತ್ವವನ್ನು ತಿಳಿದ ಸತ್ವ ಜೀವರುಗಳಿಗೆ, ಬ್ರಹ್ಮದೇವರಿಂದ ಸಹಿತವಾಗಿ, ವಿರಜಾ ನದೀ ಸ್ನಾನದಿಂದ ಲಿಂಗ ಕಳೆದು, ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಕೊಡುವನು.

(೨) ಈ ನಿಜ ತತ್ವವನ್ನು ತಿಳಿಯದೆ. ಸಾಧನದಲ್ಲಿ ಉದಾಶೀನರಾದ ರಾಜಸ ಜೀವರಿಗೆ, ವಾಯುದೇವರ ಹುಂಕಾರದಿಂದ ಲಿಂಗ ಕಳೆದು ನಿತ್ಯ ಸುಖದುಃಖ ಮಿಶ್ರವಾದ, ಸಾಂತಾನಿಕ ಲೋಕವೆನ್ನುವ ನಿತ್ಯ ಸಂಸಾರಿಗಳು ತಿರುಗಿ ಬಾರದ ನಿಜ ಸ್ಥಾನವನ್ನು ಕೊಡುವನು.

(೩) ತದ್ವಿರುದ್ಧಮತಿಯುಳ್ಳ ( ಮಿಥ್ಯಾ ) ಅನ್ಯಥಾ ಜ್ಞಾನವುಳ್ಳ ತಮೋಗುಣ ಜೀವರಾಶಿಗೆ, ವಾಯುಗದಾ ಪ್ರಹರದಿಂದ ಲಿಂಗ ಭಂಗ ಮಾಡಿಸಿ, ನಿತ್ಯ ದುಃಖವಾದ, ಅಂಧಂತಾಮಿಸ್ರಾದಿ ನರಕದಲ್ಲಿಡುವನು. ಹೀಗೆ ಅನಾದಿ ಕಾಲದಿಂದ ಬಂದ ಕ್ರಮ. ಜೀವನ ತ್ರೈವಿಧ್ಯವು ನಿತ್ಯವೆಂದು ಶ್ರುತಿಗಳು ಸಾರುತ್ತಿರುವವು.

ಹೀಗೆ ಅನಾದಿಯಿಂದ ಬಂದ ಮತಗಳು, ಕಲಿಕಾಲ ಪ್ರವೃತ್ತಿ ನಿಮಿತ್ಯ ತಮೋಗುಣ ಜೀವರಾದ ದೈತ್ಯಾದಿಗಳು ವೈಷಯಿಕ ಸುಖದಿಂದಲೇ ತೃಪ್ತಿ ಹೊಂದುವ ಜೀವರು ಬಹಳವಾದ ಕಾರಣ ಎಷ್ಟೋ ಇಂಥ ಮತಗಳು ಹೆಚ್ಚಾಗಿ ಪ್ರವೃತ್ತಿಸಿದವು. ಆಗಾಗ್ಗೆ ಆಯಾ ವೇದ ವಿರುದ್ಧ ಈ ಮತಗಳು ಸರಿಯಲ್ಲವೆಂದು ತಿಳಿಸಲು ಎಷ್ಟೋ ದೇವತೆಗಳು ಅವತರಿಸಿ ಅನಾದಿಯಾದ ಮೂಲ ತತ್ವಜ್ಞಾನವನ್ನು ಪ್ರಚಾರ ಮಾಡುತ್ತ ಬಂದರು.

ಇವುಗಳಲ್ಲಿ ಪ್ರಾಚುರ್ಯವಾದ ಮತಗಳು.

**೧. ನಾಸ್ತಿಕರು, ೨. ಆಸ್ತಿಕರೆಂದು ಎರಡು ವಿಧ.**

(೧) ನಾಸ್ತಿಕರು ದೇವರಿಲ್ಲ, ಜೀವರಿಲ್ಲ, ವೇದ ಸುಳ್ಳು, ಪ್ರಕೃತಿಯಿಂದಲೇ ಜಗತ್ಕಾರ್ಯವಾಗುವದೆಂದು ಕೆಲವರು.

(೨) ಆಸ್ತಿಕರು, ವೇದ ಸತ್ಯ, ದೇವರಿದ್ದಾನೆಂದು ಹೇಳುವವರು ಕೆಲವರು.

ನಾಸ್ತಿಕ ಶಿರೋಮಣಿಗಳಲ್ಲಿ ಆರು ಮತಗಳಿರುವವು.

(೧) ಚಾರ್ವಾಕರು=ಇವರಿಗೆ ಲೋಕಾಯುತರೆಂದು ಹೆಸರು. ಇವರಲ್ಲಿ ಸುಶಿಕ್ಷಿತ ಚಾರ್ವಾಕ, (೨) ಚಾರ್ವಾಕ ಧೂರ್ತರೆಂದು ಎರಡು ವಿಧ.

(೨) ಬೌದ್ಧರು = ಇವರಲ್ಲಿ ನಾಲ್ಕು ಪಂಗಡಗಳು— ಕ್ಷಣಿಕವಾದಿಗಳು.

(೧) ಮಾಧ್ಯಮಿಕ= ಶೂನ್ಯವಾದಿಗಳು.

(೨) ಯೋಗಚಾರ= ವಿಜ್ಞಾನವಾದಿಗಳು.

(೩) ಸೌತ್ರಾಂತಿಕ= ಸೌಗತರು.

(೪) ವೈಭಾಷಿಕ= ಪರಮಾಣು ಪುಂಜವಾದಿಗಳು.

ಅವೈದಿಕ ಪಾಷಂಢಿಗಳು.

(೩) ಜೈನರು,=ಇವರಿಗೆ, ಕ್ಷಪಣಕರು, ಸ್ಯಾದ್ವಾದಿಗಳು, ಆಹರ್ತ್ಯ, ಸಪ್ತ ಭಂಗಿಗಳೆಂದು ಹೆಸರು. ಇವರಲ್ಲಿ—

(೧) ಶ್ವೇತಾಂಬರರೆಂದು.

(೨) ದಿಗಂಬರರೆಂದು. ಎರಡು ವಿಧ

(೧) ಚಾರ್ವಾಕರು, (೨) ಬೌದ್ಧ ಮಾಧ್ಯಮಿಕರು, (೩) ಯೋಗಚಾರರು. (೪) ಸೌತ್ರಾಂತ್ರಿಕರು, (೫) ವೈಭಾಷಿಕರು, (೬) ಜೈನರು, ಈ ಆರು ಜನ ನಾಸ್ತಿಕರೆಂದು ಉದಾಹರಿಸಿರುವರು, ಬೌದ್ಧರಲ್ಲಿ ನಾಲ್ಕು ಪ್ರಭೇದಗಳಿದ್ದರೂ, ಅವು ಒಂದೊಂದು ಬೇರೆ ರೀತಿಯಲ್ಲಿರುವವು. ಕಾರಣ ಆರು ವಿಧ.

## ಆಸ್ತಿಕ ಮತಗಳು ಆರು.

೧. ನ್ಯಾಯ= ಈ ಮತ ಪ್ರವರ್ತಕರು, ಗೌತಮರು.
೨. ವೈಶೇಷಿಕ ,, ಕಣಾದರು
೩. ಸಾಂಖ್ಯ ,, ಕಪಿಲರು
೪. ಯೋಗ ,, ಪಾತಂಜಲಿಗಳು ( ಸೇಶ್ವರಸಾಂಖ್ಯ )
೫. ಪೂರ್ವ ಮೀಮಾಂಸ= ಜೈಮಿನಿಗಳು
೬. ಉತ್ತರ ಮೀಮಾಂಸ= ಶ್ರೀ ಬಾದರಾಯಣ ದೇವರು

ಹೀಗೆ ಆರು ಮತಗಳು ಆಸ್ತಿಕ ಮತವೆಂದು ಪೂರ್ವ ಪರಂಪರೆ ಮತಗಳೆಂದು, ಸರ್ವ ಮತ ಪ್ರವರ್ತಕರಿಗೆ ಒಪ್ಪಿಗೆ ಇದೆ.

## ಉತ್ಪತ್ತಿ ಸಾಧನಾದೃಷ್ಟವಾದಿಗಳು ೨ ವಿಧ.

(೧) ನ್ಯಾಯ= ಗೌತಮರು= ನೈಯ್ಯಾಯಿಕರು= ಶಬ್ದಂ ಪ್ರಮಾಣಾಂತರ ಅಂಗೀಕಾರ ಮಾಡದೇ ಇದ್ದವು.

(೨) ವೈಶೇಷಿಕ ಕಾಣಾದರು= ವೈಶೇಷಿಕರು ಶಬ್ದಂ ಪ್ರಮಾಣಾಂತರ ಅಂಗೀಕಾರ ಮಾಡುವವರು.

ಸಾಂಖ್ಯ (೧) ನಿರೀಶ್ವರ ಸಾಂಖ್ಯ, ಈ ಮತವೂ ಸಹ ಚಾರ್ವಾಕ ಮತ ಅನುಸರಿಸುವದು. ಇದರಲ್ಲಿ ನಿರೀಶ್ವರ ಸಾಂಖ್ಯೈಕದೇಶಿಗಳಾದ (೧) ಜೀವೋಪಸರ್ಜನ, ಪ್ರಕೃತಿ ಕರ್ತೃತ್ವ ಹೇಳುವ ವಾದಿಗಳು. (೨) ಜೀವನೇ ಪ್ರಧಾನ ಕರ್ತೃವೆಂಬ ವಾದಿಗಳು ೨ ವಿಧ.

(೨) ಸೇಶ್ವರ ಸಾಂಖ್ಯ= ಪಾತಂಜಲ ಮತ.

ಯೋಗ (೧) ಪಾತಂಜಲಿಗಳು ಸೇಶ್ವರ ಸಾಂಖ್ಯ ಮತಕ್ಕೆ ಹೋಲುವದು.

ಪೂರ್ವ ಮೀಮಾಂಸಾ= ವೇದ ಸತ್ಯ, ಕರ್ಮಗಳಿಗೆ ಪ್ರಾಮುಖ್ಯವನ್ನು ಹೇಳುವ, ಜೈಮಿನೀ ಸೂತ್ರಗಳಿಗೆ ಅನುಕೂಲವಾದುದು. ಇದರಲ್ಲಿ

(೧) ಪ್ರಭಾಕರ ದರ್ಶನ.

(೨) ಕೌಮಾರಿಲ ದರ್ಶನಗಳೆಂದು ಪ್ರಭೇದ.

ಉತ್ತರ ಮೀಮಾಂಸಾ= ಶ್ರೀ ಬಾದರಾಯಣದೇವರು ಪ್ರಣೀತ ಬ್ರಹ್ಮ ಸೂತ್ರಗಳಿಗೆ ೨೧ ಜನ ಭಾಷ್ಯಕಾರರಾಗಿರುವರು.

೧. ಭಾರತೀಯ ವಿಜಯ, ೨. ಸಚ್ಚಿದಾನಂದ, ೩. ಬ್ರಹ್ಮಘೋಷ, ೪. ಶತಾನಂದ, ೫. ಉದ್ಧರ್ತ, ೬. ವಿಜಯ, ೭. ರುದ್ರಭಟ್ಟ, ೮ ವಾಮನ, ೯. ಯಾದವ ಪ್ರಕಾಶ, ೧೦. ರಾಮಾನುಜ, ೧೧. ಭರ್ತೃಪಂಚ, ೧೨. ದ್ರವಿಡ, ೧೩. ಬ್ರಹ್ಮದತ್ತ, ೧೪. ಭಾಸ್ಕರ, ೧೫. ಪಿಶಾಚ, ೧೬. ವೃತ್ತಿಕಾರ, ೧೭. ವಿಜಯಭಟ್ಟ, ೧೮. ವಿಷ್ಣುಕ್ರಾಂತ, ೨೦. ಮಾಧವದಾಸ, ೨೧. ಶಂಕರ, (ಸಂಕರ) ೨೨. ಮಧ್ವಾಚಾರ್ಯರೆಂದು ಈವರೆಗೆ (೨೨) ಭಾಷ್ಯಗಳಾಗಿರುವವು.

ಇವುಗಳಲ್ಲಿ ಪ್ರಾಮುಖ್ಯವಾಗಿ, (೧) ಅದ್ವೈತ (೨) ವಿಶಿಷ್ಟಾದ್ವೈತ (೩) ಶೈವಶಾಕ್ತ (೪) ದ್ವೈತ ಮತಗಳೆಂಬ ಪ್ರಭೇದಗಳು.

(೧) ಅದ್ವೈತ ಸಿದ್ಧಾಂತದಲ್ಲಿ ೧. ಗೌಡಪಾದ, ೨. ಭರ್ತೃಹರಿ, ೩. ಭರ್ತೃಪಂಚ, ೪. ಭಾಸ್ಕರ, ೫. ಯಾದವ ಪ್ರಕಾಶ, ೬. ಸಂಕರ ಮೊದಲಾದ ಇನ್ನು ಕೆಲ ಮತ ಪ್ರಭೇದಗಳು.

(೨) ವಿಶಿಷ್ಟಾದ್ವೈತರು, ರಾಮಾನುಜರು. ಇವರಲ್ಲಿಯೂ ಎರಡು ವಿಧ.

೧. ತೆಂಕಣ.

೨. ಬಡವಣ.

(೩) ಶೈವ ಮತಗಳಲ್ಲಿ, ೧. ನಕುಲೀಪಾಶುಪತ= ಕರ್ಮ ಅನಪೇಕ್ಷವಾದಿಗಳು.

೨. ಶೈವ= ಕರ್ಮಸಾಪೇಕ್ಷವಾದಿಗಳು.

೩. ಪ್ರತ್ಯಾಭಿಜ್ಞ ದರ್ಶನ= ಆತ್ಮೈಕ್ಯವಾದಿಗಳು.

೪. ರಸೇಶ್ವರ ದರ್ಶನ= ಜೀವನ್ಮುಕ್ತವಾದಿಗಳು.

೫. ಶಾಕ್ತ ಮತಗಳು.

ಇವುಗಳಲ್ಲಿ ಮತ್ತು ಅನೇಕ ಪ್ರಭೇದಗಳು. ಶೈವರು ವೈದಿಕ ಪಾಷಂಡಿಗಳು, ಇವರಲ್ಲಿ ೧. ಶೈವ, ೨. ಪಾಶುಪತ, ೩. ಕಾಲಾಮುಖ, ೪. ಮಹಾವ್ರತರೆಂದು ನಾಲ್ಕು ವಿಧ.

ಶಾಕ್ತರಲ್ಲಿ ಮೂರು ವಿಧ.

೧. ಮಹಾ ವಾಮ= ಶಾಕ್ತರು

೨. ಮಧ್ಯವಾಮ= ಶಾಂಭವರು

೩. ಅಣುವಾಮ= ಆಣವರು

ಈ ಪ್ರಕಾರವಾಗಿ ಕಾಲಾನುಸಾರವಾಗಿ ಪ್ರವರ್ತಿಸುತ್ತ ಬಂದ ಮತಗಳು. ಕೊನೆ ಮೂಲ ತತ್ವವನ್ನು ಸ್ಥಿರವಾಗಿ ಪ್ರಚುರ ಮಾಡಿದ,

(೪) ದ್ವೈತ ಸಿದ್ಧಾಂತ= ಶ್ರೀ ಮಧ್ವಮತ= ಶ್ರೀ ಪೂರ್ಣ ಪ್ರಜ್ಞ ದರ್ಶನ, ಹೀಗೆ ವೇದಾಂತ ಶಾಸ್ತ್ರಕ್ಕೆ ನಿರ್ಣಿತವಾದ, ಎಲ್ಲರಿಂದಲೂ ಆಂಶ್ಯದಲ್ಲಿ ಸಿದ್ಧವಾದ ನಿರ್ದೋಷ ಸಿದ್ಧಾಂತವು ಇದು; ಅನಾದಿ ನಿತ್ಯವಾದುದು.

ಈ ಪ್ರಕಾರವಾಗಿ ಅನೇಕ ಮತಗಳು, ಪ್ರವಾಹತೋ ಅನಾದಿ ನಿತ್ಯವಾದವು ಆಗಾಗ್ಗೆ ಪ್ರಚಾರದಲ್ಲಿ ಬಂದವು. ವೇದಗಳಲ್ಲಿಯೂ ಈ ಮತಗಳ ವಿಚಾರ ಕಂಡುಬಂದಿದೆ. ಈ ಕಲಿಯುಗದಲ್ಲಿ ಕಾಲಾನುಸಾರವಾಗಿ (೪,೩೦೦) ವರ್ಷಗಳವರೆಗ ನಾಸ್ತಿಕ, ಆಸ್ತಿಕ, ಇಷ್ಟು ಮತಪ್ರವರ್ತಕ ಆಚಾರ್ಯರಾಗಿ ಹೋಗಿದ್ದಾರೆ.

ಇನ್ನು ಈಗಿನ ಕಾಲದಲ್ಲಿ ಪ್ರಚಲಿತವಾದ ಶೈವ, ವೀರಶೈವ, ಆರ್ಯಸಮಾಜ, ಇನ್ನು ಕೆಲವು ಅನೇಕ ಮತಗಳು, ಹಿಂದೆ ಹೇಳಿದ ಮತಗಳಿಗೆ ಅನುಯಾಯಿಗಳೇ ಹೊರತಾಗಿ, ಬೇರೊಬ್ಬರು ಬೇರೆ ಬೇರೆ ಮತಸ್ಥಾಪಕರಾಗಿಲ್ಲ. ಈ ಎಲ್ಲ ಮತಗಳ ವಿಷಯಗಳು ಮುಂದೆ ಸಂಕ್ಷಿಪ್ತವಾಗಿ ಬರೆಯಲ್ಪಡುತ್ತವೆ ಯಾವಾವ ಕಾಲಗಳಲ್ಲಿ ಯಾವಾವ ಮತಗಳು ಪ್ರಚಾರವಾಗಿವೆ ಎಂಬುದನ್ನು ನಿರ್ಣೈಸಿ ಹೇಳಲು ಶಕ್ಯವಿಲ್ಲ. ಕಾಲವು ಕ್ಷಣಿಕವಾದುದು. ಕಾರಣ ನಮ್ಮ ಪೂರ್ವಜ, ಭಾರತೀಯರಲ್ಲೊಬ್ಬರಾದರೂ, ಕಾಲ ವಿಷಯವನ್ನು ಉಲ್ಲೇಖಿಸದೆ ಪ್ರತಿಯೊಬ್ಬ ಮತ ಪ್ರವರ್ತಕಾಚಾರ್ಯರ ಮಹಿಮೆಯನ್ನೂ ಮತಗಳ ವಿಮರ್ಶೆಯನ್ನೂ ಮಾಡಿರುವರು.

ಅದ್ವೈತ ಮತಾವಲಂಬಿಗಳಾದ, ಸಾಯಣ ಮಾಧವಾಚಾರ್ಯರಾದರೂ ತಾವು ರಚಿಸಿದ ಸರ್ವ ದರ್ಶನ ಸಂಗ್ರಹದಲ್ಲಿ ೧೬ ಮತಗಳ ಪ್ರಕ್ರಿಯವನ್ನು ಉಲ್ಲೇಖಿಸಿರುವರಲ್ಲದೇ ಕಾಲ ವಿಚಾರ ಹೇಳಿಲ್ಲ.

ಆಯಾ ಕಾಲದಲ್ಲಿ ಆಯಾ ಮತ ಪ್ರವರ್ತಕರಿಗೆ ಈ ಕಾರ್ಯದಲ್ಲ ಎಷ್ಟೆಷ್ಟು ತೊಂದರೆಗಳು ಒದಗಿರುವವೊ ಬರೆಯಲು ಹೇಳಲು ಸಾಧ್ಯವಿಲ್ಲ. ಆದರೂ ಒಂದೊಂದು ಮತಗಳ ಪ್ರಕ್ರಿಯ ಗ್ರಂಥಗಳಲ್ಲಿ ಮಾತ್ರ ಕೆಲವು ಮತಗಳ ಕ್ರಮವನ್ನು ಹೇಳಿದ್ದಾರೆ. ಇದರ ಮೇಲಿಂದ ಮಾತ್ರ ಕಾಲ ಊಹಿಸಬಹುದು.

ವಿಷ್ಣು ಪುರಾಣ ತೃತೀಯಾಂಶ ೧೭ನೆಯ ಅಧ್ಯಾಯದಲ್ಲಿ ಈ ಕುಮತಗಳ ಪ್ರಚಾರ ವಿಷಯವಾಗಿ ಹೇಳಿದ್ದನ್ನು ಸರ್ವ ದರ್ಶನ ಸಂಗ್ರಹ ಪಾನು ೧೩೨ ರಲ್ಲಿ ಶ್ರೀ ಅಭ್ಯಂಕರ ಶಾಸ್ತ್ರಿಗಳು ಉಲ್ಲೇಖಿಸಿರುವದೇನಂದರೆ –

ಪೂರ್ವದಲ್ಲಿ ಒಂದಾನೊಂದು ಕಾಲ, ನರ್ಮದಾ ತೀರದಲ್ಲಿ ಶ್ರುತಿ ಪ್ರತಿಪಾದಿತ ಮಾರ್ಗಾವಲಂಬಿಗಳಾಗಬೇಕೆಂಬ ದೃಢ ಮನಸ್ಸಿನಿಂದ ಕೆಲವು ಜನ ದೈತ್ಯರು ತಪಸ್ಸು

ಮಾತಲಿಕ್ಕೆ ಪ್ರಾರಂಭಿಸಿದರು. ಆಗ್ಗೆ ಭಯಾಕುಲರಾಗಿ, ದೇವತೆಗಳು ನಾರಾಯಣನನ್ನು ಕುರಿತು ಮೊರೆಹೊಕ್ಕರು. ಶ್ರೀಮನ್ನಾರಾಯಣನು ಮೊರೆಯಿಡುವ ದೇವತೆಗಳನ್ನು ನೋಡಿ ಅವರ ಭಯ ಪರಿಹಾರಗೋಸುಗ, ತನ್ನ ಶರೀರದಿಂದ ' ಮಾಯಾಮೋಹ " ವೆಂಬ ಒಬ್ಬ ಪುರುಷನನ್ನು ಪುಟ್ಟಿಸಲಾಗಿ, ಆ ಪುರುಷನು ನನ್ನ ಕಾರ್ಯವೇನೆಂದು ಕೇಳಲು, ನೀನು ಮಾಯಾ ಮೋಹನು; ನಿನ್ನ ಸ್ವನಾಮ ಅರ್ಥಾನುಸಾರವಾಗಿ, ನಿನ್ನ ಸ್ವಪ್ರವೃತ್ತಿ ಯಾದ ಮಾಯಾಮೋಹ ( ಕಪಟತ್ವ ) ದಿಂದ, ಅನಧಿಕಾರರಾದಂಥ ದೈತ್ಯಾದಿಗಳನ್ನು ವ್ಯಾಮೋಹ ಪಡಿಸಿ, ಸನ್ಮಾರ್ಗದಿಂದ ಭ್ರಷ್ಟರನ್ನಾಗಿ ಮಾಡೆಂದಾಜ್ಞಾಪಿಸಲು, ಆಗ್ಗೆ ಆ ಮಾಯಾಮೋಹಕ ಪುರುಷನು, ಬೃಹಸ್ಪತಿ ಪ್ರಣೀತ ಸೂತ್ರಾನುಸಾರವಾಗಿ ಮಾಯಾ ಮಹೋಪದೇಶವನ್ನು ಎಲೈ ದೈತ್ಯರೆ ಕೇಳಿರಿ ಕೇಳಿರೆಂದು ಹೇಳಲು, ಇದು ಕಿವಿಗೆ ಬಿದ್ದು ದೈತ್ಯಾದಿಗಳು ತಪಶ್ಚರ್ಯವನ್ನು ಮಾಡುವದು ಬಿಟ್ಟರು. ಆಗ್ಗ ದೇವತೆಗಳು ನಿಶ್ಚಿಂತ ರಾಗಿ, ಸ್ವರ್ಗವನ್ನು ಅನುಭೋಗಿಸಹತ್ತಿದರು. ಹೀಗೆ ಆ ಮಾಯಾ ಮೋಹಕ ಪುರುಷನ ಉಪದೇಶದಿಂದ ಅನೇಕ ವಿಧವಾಗಿ, ಚಾರ್ವಾಕ ಬೌದ್ಧ, ಜಿನಾದಿಗಳ ನಾಸ್ತಿಕ (ಅವೈದಿಕ) ಮತಗಳು ಪ್ರಚುರವಾಗಲಾರಂಭಿಸಿದವು.

ಇನ್ನೊಂದು ಇತಿಹಾಸವೇನಂದರೆ, ದ್ವಾಪರಾಂತ್ಯದಲ್ಲಿ ಶ್ರೀಕೃಷ್ಣ, ಭೀಮಾದಿಗಳಿಂದ ಹತರಾಗಿ ಅನೇಕ ದೈತ್ಯರು ಅವರಲ್ಲಿ ದ್ವೇಷವನ್ನಾರಂಭಿಸಿದರು. ದುರ್ಯೋಧನನ ವಧೆಯ ನಂತರ, ದುರ್ಯೋಧನನ ಮಿತ್ರನಾದ ಚಾರ್ವಾಕನೆಂಬುವ ದೈತ್ಯನು ತಪಸ್ವಿಯಂತೆ ಸನ್ಯಾಸ ವೇಷವನ್ನು ಧರಿಸಿ ಧರ್ಮರಾಜನ ಸಭೆಯನ್ನು ಕುರಿತು ಪ್ರಾಪ್ತನಾದನು. ಮತ್ತು ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು ಹೇಳಿದ್ದೇನಂದರೆ, ಹೇ ಬ್ರಾಹ್ಮಣರೇ ನೋಡಿರಿ; ದುರ್ಯೋಧನನು ಮಹಾ ಭಾಗ್ಯಶಾಲಿಯು; ಯಾವ ಈ ಭೂಮಂಡಲದ, ವಿದ್ಯಮಾನ ರಾದ ಅಖಿಲ ರಾಜರೊಳಗೆ, ಯುದ್ಧದಲ್ಲಿ ರಾಜ್ಯಲಕ್ಷ್ಮಿಯನ್ನು ಹೊಂದಿ ಆತನು ಸ್ವರಾಜ್ಯ ಸುಖವನ್ನು ಅನುಭೋಗಿಸಿದನು. ಈಗ ಉಳಿದ ಕೆಲರು ಸ್ತ್ರೀ ಬಾಲವೃದ್ಧ ಪ್ರಾಯರಾದ ಈ ಜನಗಳಿಗೆ, ಎಂಥ ರಾಜ್ಯ ಸುಖವು. ರುಧಿರ ಪ್ರದಿಗ್ಧ ಭೋಗವು ( ಸ್ಥೂಲ, ಪಾರ್ಥಿವ ಸುಖ ) ಪರಲೋಕ ಸುಖಾಭಿಲಾಷೆಯಿಂದ ನಿಮ್ಮನ್ನು ವಂಚಿಸುವವಲ್ಲವೆ ? ಪರಲೋಕವೆ ಇಲ್ಲವೆಂದಮೇಲೆ ಅಲ್ಲಿಯ ಸೌಖ್ಯವೆಲ್ಲಿ ? ಯಜ್ಞಾದಿ ಕರ್ಮಗಳನ್ನು ಮಾಡುವಲ್ಲಿ ನಿಮಗೆ ಕ್ಲೇಶವೇ ಹೊರ್ತಾಗಿ ಮತ್ತೊಂದಿಲ್ಲವೆಂದು ಹೇಳಲು, ಆ ಸಭೆಯಲ್ಲಿ ಕುಳಿತ ಬ್ರಾಹ್ಮಣರ ನೇತ್ರ ಕ್ರೋಧಾಗ್ನಿಯಿಂದ, ಆ ಕಪಟ ಸನ್ಯಾಸಿಯಾದ, ಚಾರ್ವಾಕ ದೈತ್ಯನು ದಗ್ಧ ನಾದನು. ಆತನ ಮತಾನುಯಾಯಿಗಳೇ ಚಾರ್ವಾಕರೆಂದು ಲೋಕದಲ್ಲಿ ಪ್ರಖ್ಯಾತ ರಾದರೆಂದು, ಅದ್ವೈತ ಮತಾವಲಂಬಿಗಳಾದ ಸಾಯಣ ಮಾಧವಾಚಾರ್ಯರ ಸರ್ವ ದರ್ಶನ ಸಂಗ್ರಹ ಟೀಕಾಕಾರರೇ ಆ ಗ್ರಂಥದ ಪುಟ ೧೩೩ ರಲ್ಲಿ ನಾಸ್ತಿಕ ಮತಗಳ ಪ್ರವರ್ತಕರು ದೈತ್ಯರೆಂದೊಪ್ಪಿರುವರು. ಪಾರಂಪರ್ಯದಿಂದ ಬಂದ ನಮ್ಮ ದ್ವೈತ ಸಿದ್ಧಾಂತಿಗಳ ಅಭಿಪ್ರಾಯಕ್ಕೆ ಇದು ಅನುಕೂಲ.

ಶ್ರೀ ಸುಮಧ್ವ ವಿಜಯ ಮಹಾ ಕಾವ್ಯವನ್ನು ರಚಿಸಿದ ಶ್ರೀಮನ್ನಾರಾಯಣ ಪಂಡಿತಾಚಾರ್ಯರೇ ತಾವು ರಚಿಸಿದ ಮಣಿಮಂಜರಿಯೆಂಬ ಗ್ರಂಥದಲ್ಲಿ ಅನೇಕ ಪುರಾಣಗಳ ಆಧಾರದ ಮೇಲಿಂದಲೂ, ಮತ್ತು ಪರಂಪರೆಯಿಂದ ಬಂದ ನಿಜವಾದ ಚರಿತ್ರೆ ಮೇಲಿಂದಲೂ ಈ ಕಲಿಯುಗದಿ, ವೇಲ್ಕಂಡ ಕಾರಣಗಳಿಂದ ಅನಾದಿಯಿಂದ ಬಂದ ದ್ವೈತಮತವು ಕುಗ್ಗಿ, ಕುಮತಗಳ ಪ್ರಚಾರಕ್ಕೆ ಕಾರಣವೇನೆಂಬುದನ್ನು, ಸರ್ಗ ೫ ರಿಂದ ೮ ವರೆಗೆ ಸಂಕ್ಷಿಪ್ತವಾಗಿ ಹೇಳಿರುವರು. ಅದನ್ನು ಇಲ್ಲಿ ವಿವರಿಸಲು ಅಪ್ರಾಸಂಗಿಕವಾಗಲಿಕ್ಕಿಲ್ಲ.

ಶ್ರೀಕೃಷ್ಣ ಭೀಮರಿಂದ ಅನುಶಿಕ್ಷಿತರಾದ, ಸನಕಾದಿ ದುರ್ವಾಸ, ಪರಮಹಂಸಾ ಶ್ರಮಿಗಳು ವೇದವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರಾದಿ ವೇದಾಂತ ಶಾಸ್ತ್ರದ ನಿಜ ತತ್ವಗಳನ್ನು ಉಪದೇಶಿಸುತ್ತಾ ಪ್ರಖ್ಯಾತಿ ಮಾಡಿದರು.

ಶ್ರೀಕೃಷ್ಣ ಭೀಮರಲ್ಲಿ ಮಹಾ ದ್ವೇಷವನ್ನು ಮಾಡುವ ದೈತ್ಯರು ಬಾಹು ಬಲದಿಂದ ಭಗ್ನರಾಗಿ, ಪೂರ್ವದಲ್ಲಿ ಹತರಾದವರು ಇನ್ನು ಬಾಹು ಬಲದಿಂದ ಗೆದಿಯುವದಿಲ್ಲವೆಂತ ಅನುಭವದಿಂದ ವಾಗ್ಯುದ್ಧವಾದ ( ಬಾಯಿಮಾತಿನಿಂದಾದರೂ ) ಶ್ರೀಕೃಷ್ಣ ಭೀಮ ದ್ರೌಪದಿಯರಿಗೆ ಅಹಿತಕರವಾದ, ಹರಿ ಸರ್ವೋತ್ತಮತ್ವ ವಾಯುಜೀವೋತ್ತಮತ್ವ, ಪಂಚಭೇದ ತಾರತಮ್ಯ ಮುಂತಾದ ಸತ್ತತ್ವವನ್ನು ಹಾಳುಮಾಡಿ, ಅವರಿಗೆ ಅಪಕಾರ ಮಾಡಬೇಕೆಂದು ಗೌಪ್ಯವಾಗಿ ಆಲೋಚನೆ ಮಾಡಿದರು. ಲೋಕಾಯತನ, ಚಾರ್ವಾಕನ ಸುತನಾದ ' ಚಾಣಕ್ಯ ' ಅಥವಾ ( ಬಾಣಾಖ್ಯನಿಂದ ) ಚೋದಿತನಾದ ದ್ವಾಪರನೆಂಬ ದೈತ್ಯ (ಶಕುನಿಯು) ಮಂದಸ್ಮಿತದಿಂದ ಮಾತನಾಡಿದನು. ಲೋಕದಲ್ಲಿ ಅಸುರರು ಹುಟ್ಟಿ, ಕೆಲವರು ಬುದ್ಧಿ ಸಾಲದೆ, ವೇದ ವಿರುದ್ಧವಾದ ' ಲೋಕಾಯತನ ' ಚಾರ್ವಾಕ ಮತವನ್ನು ಪ್ರಚಾರ ಮಾಡಿದರು. ಇನ್ನು ಕೆಲವರು ವೇದ ಪ್ರಮಾಣ ವೆಂದೊಪ್ಪಿ, ಅಕ್ಷಪಾದ, ಕಾಣಾದ, ಕಪಿಲಾದಿ ಕೆಲ ಜನರು ಶಾಸ್ತ್ರಾಂತರಗಳನ್ನು ರಚಿಸಿ ದರು. ಕೆಲವು ದೈತ್ಯರು, ತ್ರಿಪುರ ಯುದ್ಧದಲ್ಲಿ ಹತರಾದವರು ಪುನಃ ಹುಟ್ಟಿ ವೇದ ಅಪ್ರಮಾಣಿಕವೆಂದು ಸರ್ವ ಶೂನ್ಯವೆಂಬ ಬೌದ್ಧ ಮತ ಪ್ರಚಾರ ಮಾಡಿದರು. ಇನ್ನು ಕೆಲವು ಆಚಾರ ವಿಚಾರವಿಲ್ಲದಿರುವ, ಜೈನ ಪಾಶುಪತಾದಿ ಮತ ಪ್ರಚಾರ ಮಾಡಿ ವೇದ ವಿದ್ವೇಷಿಗಳಾದಾಗ್ಯೂ, ಅದರಲ್ಲಿರುವ ಯುಕ್ತಿಗಳನ್ನು ಸರಿಯಾಗಿ ತಿಳಿಯದೇ ಕೃತಕೃತ್ಯ ರಾಗಲಿಲ್ಲ. ಆದಕಾರಣ ವೇದಗಳನ್ನೇ ಅನುಸರಿಸಿ, ವೇದಾಂತಿಗಳೆಂದೆನಿಸಿಕೊಂಡು, ಬ್ರಾಹ್ಮಣ ಯತಿಯಾಗಿ, ಗೂಢವಾಗಿ ವೇದಾದಿಗಳು ನಿಜ ಹೇಳತಕ್ಕವಲ್ಲಾ. ಜೀವೇಶ್ವರ ಐಕ್ಯವನ್ನು ಹೇಳುತ್ತವೆ. ಎಂಬುದೆ ಮೊದಲಾದ್ದನ್ನು ಹೇಳುತ್ತಾ ಕೃಷ್ಣ, ಭೀಮ, ದ್ರೌಪದಿ ಯರನ್ನು ದುಃಖಪಡಿಸಲು, ಉದ್ಯೋಗ ಮಾಡಬೇಕೆಂದು. ಇಂಥಾ ಮಹಾ ಕಾರ್ಯದಲ್ಲಿ ಸಖನಾದ ಮಣಿಮಂತನೊಬ್ಬನೇ ಮಹಾ ಸಮರ್ಥನೆಂದು ನಿಶ್ಚೈಸಿದರು. ವೇದ ವಿದ್ವಿಷ ರಾದ ಕಲಿ ಮೊದಲಾದ ದೈತ್ಯರಿಂದ ಮಣಿಮಂತನಿಗೆ, ಸಹಾಯ ಮಾಡುವೆವೆಂಬ ಪ್ರತಿಜ್ಞೆ

ಮಾಡಿಸಿ, ಸನಕ ವಂಶಕ್ಕೆ ಬಂದ ಪರತೀರ್ಥರನ್ನು ಆಶ್ರಯ ಮಾಡಿ, ಸತ್ತತ್ವವನ್ನು ಹಾಳು ಮಾಡಬೇಕೆಂದು ಉಪದೇಶ ಮಾಡಿದನು. ಆಗ್ಗೆ ಮಣಿಮಂತನು ಕೂಡ ಭೂಮಿಯಲ್ಲಿ ಹುಟ್ಟಿ ಮಿಥ್ಯಾ ಬೋಧಿಸಲು ಒಪ್ಪಿದನು.

ಇತ್ತ ಭರತ ಭೂಮಿಯಲ್ಲಿ ಆ ಕಾಲದಲ್ಲಿ ಗೋವಿಂದ ಭಟ್ಟನೆಂಬ ಒಬ್ಬ ಬ್ರಾಹ್ಮಣನು, ನಾಲ್ಕು ಜಾತಿಯ ಕನ್ಯೆಯರನ್ನು ಮದುವೆ ಮಾಡಿಕೊಂಡು ೧. ಬ್ರಾಹ್ಮಣಳಲ್ಲಿ ಶಬರ, ೨. ಕ್ಷತ್ರಿಯಳಲ್ಲಿ ವಿಕ್ರಮಾದಿತ್ಯ, ೩. ವೈಶ್ಯಳಲ್ಲಿ ಹರಿಶ್ಚಂದ್ರ, ೪. ಶೂದ್ರಳಲ್ಲಿ ಭತೃಹೃತ್ ಎಂಬವರನ್ನು ಪೆತ್ತನು. ಈ ಪ್ರಕಾರ ಇವರುಗಳು ನಾಲ್ಕು ವರ್ಣಾಶ್ರಮಿಗಳಾಗಿ ವಿದ್ಯಾ ಸಂಪನ್ನರಾದರು. ಆಗ್ಗೆ ಗೋವಿಂದಭಟ್ಟನು ಈ ನಾಲ್ಕು ಜನ ಪುತ್ರ ಸ್ತ್ರೀಯರನ್ನು ಬಿಟ್ಟು ಭೂಮಿಯಲ್ಲಿ ಸಂಚಾರ ಮಾಡತೊಡಗಿದನು.

೧. ಬ್ರಾಹ್ಮಣ ಸ್ತ್ರೀಯಳಲ್ಲಿ ಹುಟ್ಟಿದ ಶಬರನು ಪೂರ್ವ ಮೀಮಾಂಸಾವಾದ 'ಜೈಮಿನಿ' ಸೂತ್ರಗಳಿಗೆ, ರಹಸಿಯಲ್ಲಿ ಅರ್ಥವನ್ನು ಬರೆದನು.

೨. ವಿಕ್ರಮಾದಿತ್ಯನೆಂಬ ಕ್ಷತ್ರಿಯ ತನುಜನು ಭೂಮಿಯ ಸಂಚಾರ ಮಾಡಿದನು.

೩. ವೈಶ್ಯಳಲ್ಲಿ ಪುಟ್ಟಿದ ಹರಿಶ್ಚಂದ್ರನು ಸುರೋತ್ತಮನಾದ ವಾಯುದೇವರನ್ನು ವಶೀಕರಿಸಿ, ಆಯುರ್ವೇದ ಶಾಸ್ತ್ರ 'ವಶಿತಾ' ಶಾಸ್ತ್ರ ಬರೆದನು.

೪. ಶೂದ್ರಳಲ್ಲಿ ಜನಿಸಿದ ಭತೃಹರಿ ಯಜ್ಞ ಸ್ಥಳಕ್ಕೆ ಹೋಗಿ ಯಜ್ಞಾನುಷ್ಠಾನವನ್ನು ಬ್ರಾಹ್ಮಣರಿಂದ ತಿಳಿದುಕೊಂಡು ಭೂಚರಿಸಿದನು.

ಆರ್ಯನಾದ ಬ್ರಾಹ್ಮಣ ಸ್ತ್ರೀಯಳಲ್ಲಿ ಪುಟ್ಟಿದ ಶಬರನಿಗೆ, ಕುಮಾರಿಲ್ ಭಟ್ಟ, ನಾರಾಯಣಭಟ್ಟರೆಂಬ ಇಬ್ಬರು. ಮಕ್ಕಳು ವೇದವಿದ್ಯಾಭಿಮಾನಿಗಳಿದ್ದರು. ಕುಮಾರಿಲ್ ಭಟ್ಟನು ನಾರಾಯಣಭಟ್ಟನಿಂದ ವಿಚಾರ ಮಾಡಿ, ಬೌದ್ಧಮತ ಬಹು ಹೇಯವಾದುದು, ಇದನ್ನು ನಿರಾಕರಿಸುವದು ಬಹು ಅವಶ್ಯವಿದೆ; ಕಾರಣ ಆ ಬೌದ್ಧಮತ ತಪ್ಪೆಂದು ಸಾಧಿಸುವಗೋಸುಗ, ಆ ಮತ ತತ್ವಗಳನ್ನು ತಿಳಿಯಲು ಬೌದ್ಧರಂತೆ ವೇಷ ಹಾಕಿ ಬೌದ್ಧ ಗುರುವನ್ನು ಆಶ್ರಯ ಮಾಡಿದನು. ಹೀಗೆ ಕೆಲವು ದಿನ ಆ ಬೌದ್ಧ ಗುರುವಿನ ಸೇವಾ ಮಾಡುತ್ತಲಿರಲಾಗಿ, ಒಂದು ದಿನ ಆ ಬೌದ್ಧ ಗುರುವಿನ, ಮೇಲುಪ್ಪರಿಗೆಯಲ್ಲಿ ಗುರುವಿಗೆ ಎಂಣಿ ಹಚ್ಚುವಾಗ್ಗೆ ಆ ಬೌದ್ಧ ಗುರುವು ವೇದ ದೂಷಿಸುವದನ್ನು ಕೇಳಿ, ಕುಮಾರಿಲ್ ಭಟ್ಟನ ಕಣ್ಣಿನಿಂದ ನೀರು ಹೊರಟು, ಆ ಬೌದ್ಧ ಗುರುವಿನ ಕಾಲಮೇಲೆ ಬಿದ್ದವು. ಈ ಉಷ್ಣ ನೇತ್ರಾಂಬುಗಳನ್ನು ನೋಡಿ ಬೌದ್ಧ ಗುರುವು ಇವನು ಬೌದ್ಧನಲ್ಲವೆಂದು ಮೋಸವನ್ನು ತಿಳಿದು, ತಕ್ಷಣವೇ ಇವನನ್ನು ಸಂಹಾರ ಮಾಡಿರೆಂದು ಶಿಷ್ಯರಿಗೆ ಆಜ್ಞೆಯಿತ್ತನು. ಆಗ್ಗೆ ಭಟ್ಟಕುಮಾರನು, ವೇದಗಳು ಪ್ರಮಾಣವಾಗಿದ್ದರೆ ಜೀವಿಸುತ್ತೇನೆಂದು, ಆ ಎತ್ತರವಾದ ಮೇಲುಪ್ಪರಿಗೆಯಿಂದ ಕೆಳಗೆ ಹಾರಿದನು. ಅಲ್ಲಿ ಕೆಳಗಿದ್ದ ಒಂದು ಗೂಟವು ಅವನ ಕಣ್ಣಿಗೆ ತಗಲಿ, ಅವನ ಕಣ್ಣು ಹೋಯಿತು. ಆಗ್ಗೆ ಎಲೋ ಕುಮಾರಿಲ್

ಭಟ್ಟನೇ "ವೇದಗಳು ಪ್ರಮಾಣವಾಗಿದ್ದರೆ" ಎಂದು ವೇದಪ್ರಮಾಣದಲ್ಲಿ ಸಂದೇಹ ಪುಟ್ಟಿದ ಕಾರಣ, ನಿನಗೆ ಒಂದು ಕಣ್ಣು ಹೋಯಿತೆಂದು ಅಶರೀರ ವಾಣಿಯಾಯಿತು. ಆಗ್ಗೆ ಈ ವಾರ್ತೆಯನ್ನು ಕೇಳಿ ಬಹು ಆಶ್ಚರ್ಯದಿಂದ ಸೌಗತ ದೇಶಕ್ಕೆ ಅರಸನಾದ ಬೌದ್ಧರಾಜನು, ಗೌಪ್ಯವಾಗಿ ಭಟ್ಟಕುಮಾರನನ್ನು ಕರೆಸಿ, ಏಕಾಂತದಲ್ಲಿ ಹೇಳಿದ್ದೇನಂದರೆ, ನೀನು ವೇದಪ್ರಾಮಾಣ್ಯವನ್ನು ಸಾಧಿಸಿಕೊಟ್ಟರೆ ಬೌದ್ಧರನ್ನು ಬೆಂಕಿಯಲ್ಲಿ ಹಾಕಿ ಸುಡುತ್ತೇನೆಂದು ಹೇಳಿದನು. ಆಗ್ಗೆ ಭಟ್ಟ ಕುಮಾರಿಲ್‌ನು ವೇದಪ್ರಾಮಾಣ್ಯವೆಂದು ಸಾಧಿಸುತ್ತೇನೆ; ಇಲ್ಲವಾದರೆ ನಾನೇ ಬೆಂಕಿಯಲ್ಲಿ ಬೀಳುತ್ತೇನೆಂದು ಪ್ರತಿಜ್ಞೆ ಮಾಡಿದನು. ತನ್ನ ತಮ್ಮನಾದ ನಾರಾಯಣಭಟ್ಟನಿಂದ ಊರ ಹೆಬ್ಬಾಗಿಲ ಮುಂದೆ ಪ್ರಸಿದ್ಧ ಪತ್ರಿಕೆಯನ್ನು ಹಚ್ಚಿ ಬೌದ್ಧರೆಲ್ಲರನ್ನು ಕರೆಸಿ, ಅವರೆದುರಿಗೆ ವೇದಪ್ರಾಮಾಣ್ಯವನ್ನು ಸಾಧಿಸಿಕೊಟ್ಟನು. ಕುಮಾರಿಲ್ ಭಟ್ಟನಿಂದ ಗೆಲ್ಲಲ್ಪಟ್ಟ ಬೌದ್ಧರಲ್ಲಿ ಕೆಲವರು, ರಾಜನಿಂದ ಬೆಂಕಿಯಲ್ಲಿ ಹಾಕಿಸಲ್ಪಟ್ಟರು. ನಿಷ್ಪಕ್ಷಪಾತಿಯಾದ ರಾಜನನ್ನು ನೋಡಿ, ನಾರಾಯಣಭಟ್ಟ, ಶಬರರಿಬ್ಬರು ಸಂತೋಷ ಹೊಂದಿದರು.

ಆಗ್ಗೆ ರಾಜನು ಮುಮುಕ್ಷುಗಳಿಗೆ ಯೋಗ್ಯವಾದ ವರ್ಣಾಶ್ರಮಾಚಾರ ವಿದ್ಯಾದಿಗಳನ್ನು ತಿಳಿದು, ಬೌದ್ಧ ಮತವನ್ನು ನಿರಾಕರಿಸುತ್ತಾ, ಜೈಮಿನಿ ಸೂತ್ರಗಳ ಶಬರ ಭಾಷ್ಯಕ್ಕೆ ಟೀಕಾ ಬರೆದನು. ಇದೇ ಆಗಿನ ಕಾಲದ ರಾಜರ ಮಹಾ ಸಂಪತ್ತು. ಧರ್ಮದಿಂದ ನಡೆದು, ಧರ್ಮ ಪ್ರಚಾರ ಮಾಡಿ, ಧರ್ಮದಿಂದ ರಾಜ್ಯವನ್ನಾಳುವದೇ ರಾಜರ ಮುಖ್ಯ ಧ್ಯೇಯವಾಗಿತ್ತು. ಕಾಲಾನುಸಾರವಾಗಿ ಅದು ಕಲಿ ಪ್ರಾಬಲ್ಯದಿಂದ ಅಡಗಿಹೋಯಿತು.

ಇನ್ನು ಬೆಂಕಿಯಲ್ಲಿ ಹಾಕಿಸದೇ ಇದ್ದ ಬಕ್ಕ ಮೊದಲಾದ ಕೆಲ ಬೌದ್ಧರು ವೇಷಾಂತರವನ್ನು ತಾಳಿ ದೇಶಾಂತರಕ್ಕೆ ಓಡಿ ಹೋದರು. ಮತ್ತು ಕೆಲ ಬೌದ್ಧರು ಗೂಢವಾಗಿ ಅಲ್ಲಿಯೇ ವಾಸಿಸಿದರು.

ಮೊಟ್ಟಮೊದಲಿಗೇ ಕುಮಾರಿಲ್ ಭಟ್ಟನು, ವೇದಪ್ರಾಮಾಣ್ಯ ಸಾಧಿಸಿದ್ದಕ್ಕಾಗಿ, ವೇದ ಪ್ರಣೀತ ವರ್ಣಾಶ್ರಮಾಚಾರಗಳು ವಿಸ್ತಾರವಾದವು. ಬ್ರಾಹ್ಮಣರು ಸಂತುಷ್ಟರಾದರು. ಯಜ್ಞಯಾಗಾದಿಗಳಲ್ಲಿ ಪ್ರವರ್ತಕರಾದರು. ಹೀಗೆ ಧರ್ಮ ಪ್ರಚಾರ ಮಾಡಿದರೂ ಮಾಘ, ವರರುಚಿ, ಮಯೂರ, ದಂಡಿ, ಭಾರವೀ, ಕಾಳಿದಾಸ ಮೊದಲಾದವರು. ಕುಮಾರಿಲ್‌ನದು ವೈದೀಕ ಮತವೆಂದು ತಿಳಿದು ಬಂದಾಗ್ಯೂ, ನಿರೀಶ್ವರ ಮತವಾದ ಈ ಭಾಟ್ಟ ಮತವನ್ನೊಪ್ಪಲಿಲ್ಲ; ಉದಾಸೀನ ಮಾಡಿದರು.

ಪ್ರಭಾಕರ, ಮಂಡನಮಿಶ್ರ, ತರ್ಕತಂತ್ರ, ಡಂಭಕ, ರೇಫಣ ಮೊದಲಾದವರು ಕುಮಾರಿಲ್ ಭಟ್ಟನಿಂದ ಭಾಟ್ಟ ಶಾಸ್ತ್ರವನ್ನು ತಿಳಿದುಕೊಂಡರು.

ಇದರಲ್ಲಿ ಪ್ರಭಾಕರನು ಮಾತ್ಸರ್ಯದಿಂದ, ಭಟ್ಟ ಶಾಸ್ತ್ರವನ್ನು ಖಂಡಿಸುತ್ತಾ 'ಪ್ರಭಾಕರ' ಶಾಸ್ತ್ರವನ್ನು ರಚಿಸಿದನು.

ಅದೇ ಕಾಲದಲ್ಲಿ ಮಣಿಮಾನ್‌ನೆಂಬ ದೈತ್ಯನು ಕಾಲಡಿ ಎಂಬ ಗ್ರಾಮದಲ್ಲಿ ಹುಟ್ಟಿದನು.

ಈ ಶಿಶುವು ಸರ್ವ ಧರ್ಮವನ್ನು ಬಿಟ್ಟುಬಿಡುವನೆಂದು ಪೂರ್ವಾಪರ ತಿಳಿದ ತಮ್ಮ ಜನರು ಹೇಳಿದ್ದರಿಂದ, ತಾಯಿಯು ಅದನ್ನು ಸಂಕರನೆಂದು ಕರೆದಳು. ನಿಷ್ಪಾವಕ (ಅವರಿ) ಶುಗ್ರಶಾಖಾ (ನುಗ್ಗಿಕಾಯಿ) ಅಲಂಬುಸಾ (ಹಾಲಗುಂಬಳ) ಇತ್ಯಾದಿ ಅಪವಿತ್ರ ಪದಾರ್ಥಗಳಿಂದಲೇ ಅದರ ಪೋಷಣೆಯಾಯಿತು. ೫-೬ ವರ್ಷದ ಬಾಲಕನಿದ್ದಾಗ್ಗೆ ಆತನ ತಾಯಿಯು ೫-೬ ಬದನೆಕಾಯಿಗಳನ್ನು ತಾರೆಂದು ಹೇಳಿದಳು. ಕಾಯಿಗಳಲ್ಲಿ ಏಕತ್ವೇ ಹೊರತಾಗಿ ದ್ವೈತ ಎರಡನೇದೆಂದು ಕಾಣದೇ ಆ ಬದನೆಕಾಯಿಗಳನ್ನು ಒಂದು, ಒಂದು ಎನ್ನುತ್ತಾ ಎಣಿಸಿದನು. ಆಗ್ಗೆ ತಾಯಿ ಬಳಿಗೆ ಬಂದು, ಇರುವದೊಂದು ಬದನೆಕಾಯಿ, ೫-೬ ಹೇಗೆ ಹೇಗೆ ತಾರೆಂದು ಹೇಳಿದೆಯೆಂದು ಅವನು ಕೇಳಿದನು. ಇದನ್ನು ನೋಡಿ ಜನರೆಲ್ಲರೂ ಹಾಸ್ಯ ಮಾಡಿದರು.

ಈ ವಾಚಾಳನಾದ ಚಟವಟಿ ಬಾಲನಿಗೆ ಒಬ್ಬ ಬ್ರಾಹ್ಮಣನು ಮುಂಜಿವೆ ಮಾಡಿ, ಸುಭಿಕ್ಷಿತವಾದ ಸೌರಾಷ್ಟ್ರ ದೇಶಕ್ಕೆ ಕರೆದುಕೊಂಡು ಹೋದನು.

ಪೂರ್ವದಲ್ಲಿ ಈ ಬಾಲನು ತಪಸ್ಸಿನಿಂದ ಈಶ್ವರನನ್ನು ಸಂತೋಷಪಡಿಸಿ ವರವನ್ನು ಪಡೆದಿದ್ದುದರಿಂದ, ಈ ಜನ್ಮದಲ್ಲಿ ಸ್ವಲ್ಪ ಕಾಲದಲ್ಲಿಯೇ ೧೫-೧೬ ವರ್ಷಗಳಲ್ಲಿಯೇ ಸರ್ವ ವಿದ್ಯಾ ವಿಶಾರದನಾದನು. ಒಂದಾನೊಂದು ದಿನ ನದಿಯನ್ನು ಈಸಿಕೊಂಡು ಹೋಗುವಾಗ್ಗೆ ಈ ಸಂಕರಾಚಾರ್ಯನ ಜನಿವಾರವು ನದೀ ಪ್ರವಾಹಕ್ಕೆ ಹರಿದುಹೋಯಿತು. ಆಗ್ಗೆ ಆತನು ಅಹೋ 'ಜನಿವಾರವೇ' ನಾನೇ ನಿನ್ನನ್ನು ಬಿಟ್ಟುಬಿಡಬೇಕೆಂದು ಮಾಡಿದ್ದೆ; ಆದರೆ ನೀನೇ ನನ್ನನ್ನು ಬಿಟ್ಟು ಹೋದಿ; ಚನ್ನಾಗಿ ಆಯಿತು: ಕರ್ಮವಿಲ್ಲದ ನನಗೆ ನಿನ್ನಿಂದೇನಾಗಬೇಕೆಂದು ಹೇಳುತ್ತಾ ಆ ವಟುವು ಪರಂಪರೆಯಿಂದ ಬಂದ ದ್ವೈತ ಸಿದ್ಧಾಂತಿಗಳಾದ ದೂರ್ವಾಸರ ಶಿಷ್ಯರಾದ ಪರತೀರ್ಥರ ಹತ್ತಿರಕ್ಕೆ ಬಂದು, ಅವರನ್ನು ಕಂಡಾಗ್ಯೂ, ಚಾತುರ್ಮಾಸಕ್ಕೆ ಕುಳಿತ ಪರತೀರ್ಥರು ಈ ವಟು ಕಪಟಿಯಾಗಿದ್ದಾನೆ, (ಬ್ರಹ್ಮಸೂತ್ರ) ಯಜ್ಞೋಪವೀತವೆಯಿಲ್ಲ. ಇದು ದಾನವ ಲಕ್ಷಣವೆಂದು ಆ ವಟುವನ್ನು ತಿರಸ್ಕಾರ ಮಾಡಿದರು. ಆಗ್ಗೆ ಆ ವಟುವಾದ ಸಂಕರಾಚಾರ್ಯನು, ಗೋದಾವರಿಯ ನದಿಯನ್ನು ದಾಟಿ, ಬದರಿಗೆ ಹೋಗುತ್ತಾ, ಅಲ್ಲಿದ್ದ ಪರತೀರ್ಥರ ಶಿಷ್ಯರಾದ ಸತ್ಯಪ್ರಾಜ್ಞರಲ್ಲಿ ಹೋಗಿ, ನಿಮ್ಮ ಗುರುಗಳಿಗೆ ನಾನು ಶಿಷ್ಯನು, ಅವರ ಅಪ್ಪಣೆ ಮೇರೆಗೆ, ತಮ್ಮಲ್ಲಿಗೆ ಬಂದೆನೆಂದು ಸುಳ್ಳು ಹೇಳಿಕೊಂಡನು. ದುರ್ಲಕ್ಷಣಗಳಿಂದ ಕೂಡಿದ ಈ ವಟುವನ್ನು ಅವರು ನಂಬಲಿಲ್ಲ. ಹಿಂದಿನ ಜನ್ಮದ ಸಂಸ್ಕಾರ ವಶದಿಂದ ಈ ವಟು ಶೂನ್ಯತ್ವ, ನಿರ್ಗುಣತ್ವದಿಂದ ಐಕ್ಯೋಪಾಸನೆ ಮಾಡಿದವನು. ಸತ್ಯ ಪ್ರಾಜ್ಞರ ನಿರಾಕರಣೆಯಿಂದ, ಈ ವಟುವು ತಾನೇ ಸನ್ಯಾಸಿಯಾಗುವೆನೆಂದು ತಲೆ ಬೋಳಿಸಿಕೊಂಡು ಸಹಾಯವನ್ನು ನಿರೀಕ್ಷಿಸಿ ಸಂಚಾರ ಮಾಡುತ್ತಿದ್ದನು. ಹೀಗೆ ಸನ್ಯಾಸಿ ವೇಷವನ್ನು ತಾಳಿದ ಸಂಕರಾ-

ಚಾರ್ಯರ ಬಳಿಗೆ, ಒಂದು ದಿನ ರಾತ್ರಿ ಕೆಲವು ದೈತ್ಯರು ಬಂದು, ನೀನೇ ನಮಗೆ ಗತಿ. ನಾವು ನಿನಗೆ ಸಹಾಯ ಮಾಡುವೆವು; ಎಂದರು.

"ಪೂರ್ವದಲ್ಲಿ ಕುಮಾರಿಲ್ ಭಟ್ಟನಿಂದ ಬೌದ್ಧರು ಯಾವಾಗ ಓಡಿಸಲ್ಪಟ್ಟರೋ ಆಗ್ಗೆ ದ್ವೀಪಾಂತರಕ್ಕೆ ಹೋಗಿದ್ದ ಬಕ್ಕನು, ಹಿಂದಿರುಗಿ ಬಂದು, ಕುಮಾರಿಲ್ ಭಟ್ಟನ ತಮ್ಮನಾದ ನಾರಾಯಣ ಭಟ್ಟನು, ಕೇರಳ ದೇಶಸ್ಥರಾದ ಮಲಿಯಾಳಿ ಜನಗಳ ದ್ವಾರಾ ಪುನಃ ಬೌದ್ಧ ಮತವನ್ನು ಪ್ರಚುರಪಡಿಸಿದನು.

ಸನ್ಯಾಸ ಆಶ್ರಮುವನ್ನು ತೆಗೆದುಕೊಳ್ಳಬೇಕೆಂಬ ಅಭಿಲಾಷೆಯುಳ್ಳ ಗೌಡಪಾದನೆಂಬ ಬ್ರಾಹ್ಮಣನ ಹತ್ತಿರ ಈ ಬಕ್ಕನು ಬ್ರಾಹ್ಮಣ ಸನ್ಯಾಸಿ ವೇಷವನ್ನು ಹಾಕಿಕೊಂಡು ಬಂದು, ಎಲೈ ಗೌಡಪಾದನೆ ನಿನಗೆ ನಾನು ಮೋಕ್ಷದಲ್ಲಿ ಪ್ರವೃತ್ತಿಯಾಗುವಂತೆ ಮಾಡಲು, ಸನತ್ಕುಮಾರ ಸ್ವಾಮಿಯಿಂದ ಕಳುಹಿಸಲ್ಪಟ್ಟಿದ್ದೇನೆಂದು ಹೇಳಿಕೊಂಡನು. ಆಗ್ಗೆ ಗೌಡಪಾದನು ಬಕ್ಕನಲ್ಲಿ ಸನ್ಯಾಸ ತೆಗೆದುಕೊಂಡನು. ಆ ಸನ್ಯಾಸಿಯಾದ ಗೌಡಪಾದನಿಗೆ ಬಕ್ಕನು ನಿರ್ಗುಣವಾದ ಶೂನ್ಯ ತತ್ವವನ್ನೇ ಉಪದೇಶ ಮಾಡಿದನು. ಅಕೋ ಈ ಗೌಡಪಾದನಿಗೆ ಶಬರನ ತಂದೆಯಾದ ಗೋವಿಂದಸ್ವಾಮಿ ಶಿಷ್ಯನಾಗಿದ್ದಾನೆ. ನೀನು ಆ ಗೋವಿಂದ ಸ್ವಾಮಿಗೆ ಶಿಷ್ಯನಾಗೆ"ಂದು ಸಂಕರಾಚಾರ್ಯನಿಗೆ ಹೇಳಿದರು.

ಈ ರೀತಿಯಿಂದ, ರಾತ್ರಿಯಲ್ಲಿ ದೈತ್ಯರಿಂದ ಉಪದೇಶವನ್ನು ಹೊಂದಿದ ಸಂಕರಾಚಾರ್ಯರು ಗೋವಿಂದ ಸ್ವಾಮಿಯ ಶಿಷ್ಯರಾಗಿ ಅವರ ಅಪ್ಪಣೆ ಪಡೆದು, ಭಾರವೀ ತಮ್ಮನಾದ ಪ್ರಭಾಕರ, ಕುಮಾರ, ಭಾಸ್ಕರನಿಂದ ಕೂಡಿ, ಬ್ರಹ್ಮದತ್ತನಲ್ಲಿ ಹೋಗಿ ಅವರಿಂದ ಬ್ರಹ್ಮ ಸೂತ್ರಗಳ ಅರ್ಥವನ್ನು ತಿಳಿದುಕೊಂಡರು. ಈ ಮೂರು ಮಂದಿ ಬ್ರಹ್ಮದತ್ತರ ಶಿಷ್ಯರು, ಗುರೂಪದೇಶದಲ್ಲಿ ಬೇರೆ ಬೇರೆ ಅಭಿಪ್ರಾಯವುಳ್ಳವರಾಗಿ ಬೇರೆ ಬೇರೆ ಶಾಸ್ತ್ರಗಳನ್ನು ಮಾಡಿದರು.

ಸಂಕರಾಚಾರ್ಯರು ಬೌದ್ಧ ಮತವನ್ನೇ ವಿಕಲ್ಪಿಸಿ ಬೇರೆ ಶಬ್ದಗಳಿಂದ ಮಾಯಾವಾದ ಶಾಸ್ತ್ರವೆಂಬದಾಗಿ, ಬ್ರಹ್ಮಸೂತ್ರಗಳಿಗೆ ಅನ್ಯಥಾ ಅರ್ಥ ಕಲ್ಪಿಸಿ ಭಾಷ್ಯ ಬರೆದರು. ಈ ಮಾಯಾವಾದ ಶಾಸ್ತ್ರವನ್ನು ಕೇಳಿ ಇದು ದುರ್ಭಾಷ್ಯವೆಂದು ಭಾವಿಸಿ ಗುರುವಾದ ಬ್ರಹ್ಮ ದತ್ತನು, "ಶಾಂತಂ ಪಾಪಂ" ಎಂದು ಕಿವಿ ಮುಚ್ಚಿಕೊಂಡನು. ಭಾಸ್ಕರನು ಕಠಿಣವಾದ ತರ್ಕಗಳಿಂದ ಈ ದುಃಶಾಸ್ತ್ರವನ್ನು ಖಂಡಿಸಿದನು. ಸಂಕರಾಚಾರ್ಯರಿಂದ ಮಾಡಲ್ಪಟ್ಟ ದುರ್ಭಾಷ್ಯವು ದೈತ್ಯಾವೇಶಿಗಳಾದ ಅಸಜ್ಜನರು ಮತ್ತು ಸಂಕರಾಚಾರ್ಯರಿಂದ ಕಳುಹಲ್ಪಟ್ಟ ಶಾಕ್ತೇಯ ಮಂತ್ರಗಳ ಬಲಕ್ಕೆ ವಶರಾದ ಇತರರೂ ಸಹ ಅಭ್ಯಾಸ ಮಾಡಿದರು. ಹೀಗೆ ಸಂಕರಾಚಾರ್ಯರು ಬ್ರಹ್ಮ ಸೂತ್ರಗಳಿಗೆ ಅದ್ವೈತಪರ, ಶಾರೀರ ಭಾಷ್ಯವನ್ನು ಬರೆದು ಜನಗಳನ್ನು ವಶಮಾಡಿಕೊಂಡು, ಅದ್ವೈತಶಾಸ್ತ್ರ ಪ್ರಚಾರ ಮಾಡ ಹತ್ತಿದರು. ( ಶರೀರಂ ಅಧಿಕೃತ್ಯ ಉದ್ದೀಶ್ಯ ಪ್ರವರ್ತಂ ಶಾರೀರಂ )

ಆ ಕಾಲದಲ್ಲಿ ವಿಶ್ವರೂಪನೆಂಬ ಗೃಹಸ್ಥಾಶ್ರಮಿ ಬ್ರಾಹ್ಮಣನು, ಒಳ್ಳೇ ಪಂಡಿತ ನಿದ್ದನು. ಸಂಕರಾಚಾರ್ಯರು, ಆ ಬ್ರಾಹ್ಮಣನ ಮನೆಗೆ ಹೋಗಿ, ಶಾರದೆಯಾದ ಆ ಬ್ರಾಹ್ಮಣನ ಹೆಂಡತಿಯ ಮನಸ್ಸು ಒಲಿಸಿಕೊಂಡು, ಮಧ್ಯದಲ್ಲಿ ಶಾರದೆಯನ್ನು ಮಾಡಿ, ಆ ವಿಶ್ವರೂಪನೊಡನೆ ವಾದ ಮಾಡಿದನು. ವಿಶ್ವರೂಪನು ಸೋತನೆಂದು ಶಾರದೆಯು ಹೇಳಿದಳು. ಆಗ್ಗೆ ವಿಶ್ವರೂಪನು ಸನ್ಯಾಸಿಯಾದನು.

ವಿಶ್ವರೂಪನ ಪತ್ನಿಯು ಸಂಕರಾಚಾರ್ಯರನ್ನು ಕಾಮಶಾಸ್ತ್ರದಲ್ಲಿ ಸೋಲಿಸಿದಳು. ಆಗ್ಗೆ ಪರಕಾಯ ಪ್ರವೇಶದಿಂದ ಅಮರಕ ರಾಜನ ಮೃತ ದೇಹದಲ್ಲಿ ಪ್ರವೇಶ ಮಾಡಿ, ಅವಳ ಹೆಂಡತಿಯೊಡನೆ ಕಾಮಶಾಸ್ತ್ರ ಕಲೆಗಳನ್ನು ಕಲಿತು, ಪುನಃ ಒಂದು ತಿಂಗಳಲ್ಲಿ ಬಂದು, ಕಾಮಶಾಸ್ತ್ರದಲ್ಲಿ ಶಾರದೆಯನ್ನು ಸೋಲಿಸಿದರು.

ಭಟ್ಟನಿಂದ ಪರಾಭೂತನಾದ, ಶಬ್ದಶಾಸ್ತ್ರ ನಿಪುಣ ಮಂಡನ ಮಿಶ್ರನೆಂಬ ಹೆಸರುಳ್ಳ ಮಹಾ ಪಂಡಿತನನ್ನು ಸಂಕರಾಚಾರ್ಯರು ಜಯಿಸಿದರು. ಆಗ್ಗೆ ಮಂಡನ ಮಿಶ್ರನು ಸಂಕರಾಚಾರ್ಯರ ವಶನಾಗಿ, ಸನ್ಯಾಸವನ್ನು ಸ್ವೀಕರಿಸಿ, "ಸುರೇಶ್ವರಾಚಾರ್ಯ"ನೆಂಬೋ ಮೊದಲನೇ ಶಿಷ್ಯನಾದನು. ಈತನಿಗೆ ತೋಟಕನೆಂಬ ಹೆಸರು ಸಹ ಉಂಟು. ೧. ತೋಟಕ= ಸುರೇಶ್ವರಾಚಾರ್ಯ, ೨. ಪದ್ಮಪಾದ, ೩. ಜ್ಞಾನೋತ್ತಮ ಶಿವಾಚಾರ್ಯ, ೪. ಬೀಜಾದ= (ಹಸ್ತಾಮಲಕಾಚಾರ್ಯ) ಈ ನಾಲ್ಕು ಜನ ಸನ್ಯಾಸಿಗಳಾಗಿ, ಸಂಕರಾಚಾರ್ಯರ ಮುಖ್ಯ ಶಿಷ್ಯರೆಂದೆನಿಸಿ ಅದ್ವೈತಮತ ಪ್ರಚಾರ ಮಾಡಹತ್ತಿದರು. ಹೀಗೆ ಇವರ ಶಿಷ್ಯ ಪ್ರಶಿಷ್ಯರು ಅಭಿವೃದ್ಧಿ ಹೊಂದಹತ್ತಿದರು.

ಸಂಕರಾಚಾರ್ಯರು ತಮ್ಮ ಮರಣ ಕಾಲದಲ್ಲಿ ಶಿಷ್ಯರಿಗೆ ಹೇಳಿದ್ದೇನಂದರೆ,– "ನಾವು ಮಾಡಬೇಕಾದ್ದೆಲ್ಲ ಆಯಿತು. ಆದರೆ ನೀವು ಜಾಗ್ರತರಾಗಿರಿ. ದೂರ್ವಾಸ ಸಂತತಿ ಯವರಾದ ಪರತೀರ್ಥರ ಶಿಷ್ಯರನ್ನು ಹಾಳು ಮಾಡಿಬಿಡರಿ. ಪರತೀರ್ಥರ ನಂತರ, ಅವರ ಶಿಷ್ಯರು ಸಕ್ಯ ಪ್ರಾಜ್ಞರು ಹಿಮವತ್ಪರ್ವತದಲ್ಲಿ ಋಷಿಗಳಿಗೆ, ವೇದಪಾಠ ಹೇಳು ತ್ತಿದ್ದವರು, ಮಾತ್ರ ನಂದೀ ಗ್ರಾಮದಲ್ಲಿ ೫–೬ ಶಿಷ್ಯರನ್ನು ಮಾಡಿಕೊಂಡು, ವೇದಪಾಠ ಹೇಳುತ್ತಿದ್ದಾರೆ. ಇವರ ಹೊರತಾಗಿ ವೇದಗಳಿಗೆ ಪೂರ್ವ ಸಂಪ್ರದಾಯವನ್ನು ತಿಳಿದವ ರಾರೂ ಇಲ್ಲ. ಆದುದರಿಂದ ನಿರ್ಭಯರಾಗಿ ಅವರನ್ನು ಹಾಳು ಮಾಡಿರೆಂದು ಉಪದೇಶ ಮಾಡಿ, ಕಾಲಡೀ ಗ್ರಾಮದಲ್ಲಿಯೇ ಮರಣ ಹೊಂದಿದರು.

ನಂತರ ಶಂಕರಾಚಾರ್ಯರಿಂದ ಆಜ್ಞಪ್ತರಾದ ಜ್ಞಾನೋತ್ತಮರೇ ಮೊದಲಾದ ಬಹು ಶಿಷ್ಯರು, ನಂದೀ ಗ್ರಾಮಕ್ಕೆ ಬಂದು, ಅಲ್ಲಿದ್ದ ಪ್ರಾಜ್ಞ ತೀರ್ಥರ ಮಠವನ್ನು ಸುಟ್ಟರು. ಆ ಊರಿನಲ್ಲಿದ್ದ ಆಕಳಗಳನ್ನು, ಬಾಲಕರನ್ನು ಸಹ ಕೊಂದರು. ಬ್ರಾಹ್ಮಣ ರನ್ನು ಭೈರವೀ ಮಂತ್ರ ಶಕ್ತಿಯಿಂದ ಜ್ವರ ಪೀಡಿತರನ್ನಾಗಿ ಮಾಡಿದರು. ಪ್ರಾಜ್ಞತೀರ್ಥರ ಶಿಷ್ಯರುಗಳ ದಂಡವನ್ನು ಮುರಿದು ಕಮಂಡಲಾದಿಗಳನ್ನು ಒಡೆಯಲು ಮರುದಿನ

ಪ್ರಾತಃಕಾಲವೇ ಪ್ರಾಜ್ಞತೀರ್ಥರು, ಶಿಷ್ಯ ಸಹಿತರಾಗಿ ಜಗನ್ನಾಥ ಸತ್‌ಕ್ಷೇತ್ರಕ್ಕೆ ಹೊಟರು. ಆದಾಗ್ಯೂ ಸಂಕರ ಶಿಷ್ಯರು ಅವರ ಬೆನ್ನಟ್ಟಿ, ನಿರ್ಜನ ಪ್ರದೇಶ ಅಡವಿಯ ಸುತ್ತುಗಟ್ಟಿ, ನಮ್ಮ ಮತವನ್ನು ಅನುಸರಿಸಿರಿ, ಇಲ್ಲವಾದರೆ ನಿಮ್ಮನ್ನು ಕೊಲ್ಲುತ್ತೇವೆಂದ ಬಲವತ್ತರ ಮಾಡಿದರು. ಆಗ್ಗೆ ಅವರು ಪ್ರಾಣಸಂಕಟ ಭಯದಿಂದ ನಿಮ್ಮ ಅದ್ವೈತ ಮತವನ್ನು ಅನುಸರಿಸುತ್ತೇವೆಂದು ಒಪ್ಪಿಕೊಂಡರು. ಆಗ್ಗೆ ಅದ್ವೈತಿಗಳಾದ ಜ್ಞಾನೋತ್ತಮ ಶಿವಾಚಾರ್ಯರು ಪ್ರಾಜ್ಞತೀರ್ಥ ಮೊದಲಾದವರಿಗೆ ಬೇರೆ ಬೇರೆ ದಂಡಾದಿಗಳನ ಕೊಟ್ಟು, ತಮ್ಮ ಶಿಷ್ಯರನ್ನು ಮಾಡಿ, ದ್ವೈತ ಸನ್ಯಾಸಿಗಳೆಂದು ಗುರ್ತು ಹಿಡಿಯದಂತೆ ಮಾ ದರು. ಆಗ್ಗೆ ಪ್ರಾಜ್ಞತೀರ್ಥಾದಿಗಳು ಅನಿವಾರ್ಯದಿಂದ ಸಂಕರ ಅನುಯಾಯಿಗಳಂ ಮಾಡಿ ತೋರಿದರು. ಆನಂದ ಬಾಲ ಮಠದಲ್ಲಿ ಅವರಿಗೆ ಆಗ್ಗೆ ಅದ್ವೈತ ಮಾಯಾವಾ ಶಾಸ್ತ್ರವನ್ನು ಉಪದೇಶ ಮಾಡಿದರು. ಕರ್ಕಶವಾದ ಆ ಶಾರೀರ ಭಾಷ್ಯವನ್ನು ಮನಸ್ಸಿಲ್ಲದೆಯೆ ಕೇಳಿದರು.

ಹೀಗೆ ಪರಮಹಂಸ ಗೂಢ ಚೇತಸರಾದ ನಿಪುಣ ಪ್ರಾಜ್ಞತೀರ್ಥರು ಕಾಲನಾಮ ಭಗವಂತನ ಇಚ್ಛೆಯಂತೆ ಆ ಕಾಲವನ್ನನುಸರಿಸಿ ನಡೆದರು. ಇದನ್ನು ನೋಡಿ ದ್ವೈ ಸನ್ಯಾಸಿಗಳು ನಮ್ಮ ಶಿಷ್ಯರಾಗಿ ನಮ್ಮಂತೇ ಪೂರ್ಣವಾಗಿ ಅದ್ವೈತ ಶಾಸ್ತ್ರಾವಲಂ ಗಳಾದರು. ಇನ್ನೇನು ನಮಗೆ ಭಯವಿಲ್ಲ. ಆದರೂ ಮದ್ಯಪಾನ ಭೋಗಾದಿಗಳಲ್ಲಿರು ನಮ್ಮನ್ನು ಸದಾಚಾರಿಗಳಾದ ಪ್ರಾಜ್ಞತೀರ್ಥಾದಿಗಳು ನಿಂದಿಸುವರೆಂಬ ಭಯದಿಂದ ಮೆಲ್ಲನೇ ಆ ಜಾಗಾ ಬಿಟ್ಟು ಬರ್ಬರಕ್ಕೆ ಹೋದರು. ನೋಡಿರಿ; ಸತ್ಯ ಧರ್ಮಕ್ಕೆಷ್ಟು ಕಷ್ಟ; ಎಷ್ಟು ವಿಪತ್ತು ಬಂದರೂ, ಸತ್ಯವನ್ನು ಬಿಡದೆ ಧರ್ಮದಿಂದಾಚರಿಸುವರಿಗೆ ಎಂದು ಹಾನಿಯಿಲ್ಲ.

ಅದ್ವೈತ ಸನ್ಯಾಸಿಗಳು ಬರ್ಬರಕ್ಕೆ ಹೋದನಂತರ, ಪ್ರಾಜ್ಞತೀರ್ಥರು ರಹಸ್ಯವಾ ತಮ್ಮ ಶಿಷ್ಯರನ್ನು ಕುರಿತು, ಹೇ ಶಿಷ್ಯರೇ, ಸಂಕರಾಚಾರ್ಯರ ಶಿಷ್ಯರು, ನಮ್ಮನ್ನು ಮಾಯಾವಾದಿಗಳೆಂದರಿದು, ನಮಗೆ ಮಾಯಾವಾದದಲ್ಲಿ ವಿಶ್ವಾಸವುಳ್ಳವರೆಂದರಿದು ಬರ್ಬರ ದೇಶಕ್ಕೆ ಹೋದರು. ಇದೇ ನಮಗೆ ಶ್ರೀಹರಿಯ ಮುಖ್ಯಾನುಗ್ರಹವು. ಚಾತುರ್ಮಾಸ್ಯ ಮುಗಿದನಂತರ ನಾವು ಅದ್ವೈತಿಗಳಂತೇ ವೇಷ ಹಾಕಿದವರಾಗಿ, ಅವರ ನಡಾವಳಿಯನ್ನೇ ತೋರುತ್ತಾ ನಂದೀಗ್ರಾಮಕ್ಕೆ ಹೋಗೋಣವೆಂದರು.

ಚಾತುರ್ಮಾಸ್ಯ ಮುಗಿದಕೂಡಲೇ ಗಂಗಾಸ್ನಾನ ಮಾಡಿಕೊಂಡು, ಮಾಯಿಗಳ ಸಂಬಂಧದಿಂದುಂಟಾದ ಮಲವನ್ನು ಕಳೆದುಕೊಂಡು, ನಂದೀ ಗ್ರಾಮಕ್ಕೆ ಹೋ ಗೌಪ್ಯವಾಗಿ, ನಾರಾಯಣನೇ, ತತ್ವಾಭಿಮಾನಿ ದೇವತೆಗಳೇ, ಗುರುಗಳೇ, ನಮಗೆ ಒಳ್ಳೇ ಗತಿಯನ್ನು ಕೊಡಿರೆಂದು ಪ್ರಾರ್ಥಿಸಿದರು.

ಹೀಗೆ ಸತ್ಯಪ್ರಜ್ಞರು ಋಷಿಗಳಿಂದ ಕೂಡಿರುವಾಗ್ಗೆ, ಕೆಲ ಶಿಷ್ಯರು ಬಂದು ನಮಸ್ಕರಿಸಿ ದುಃಖದಿಂದ ಭೂಮಿಯಲ್ಲಿ ಬಿದ್ದು ಹೊರಳಾಡಹತ್ತಿದರು. ಇಂತು ದುಃಖ

ಡುವ ಶಿಷ್ಯರನ್ನೆಲ್ಲ ಎಬ್ಬಿಸಿ ಉಚಿತವಾದ ಆಸನದ ಮೇಲೆ ಕುಳ್ಳಿರಿಸಿ, ನಿಮಗೆ ಬಂದಿರುವ ಪತ್ತನ್ನು ನಾವು ಬಲ್ಲೆವು. ಈ ಕಾಲವು ಮುಖ್ಯವಾಗಿ ಕಲಿಯ ಆಧೀನಕ್ಕೆ ಒಳಪಟ್ಟಿದ್ದು. ೀವು ಸಂಕಟ ಪಟ್ಟರೆ ಆಗುವದೇನು ? ಜಗನ್ನಾಥ ಕ್ಷೇತ್ರಕ್ಕೆ ಹೋಗಿ, ಅಲ್ಲಿ ದೇವರನ್ನು ಜನೆ ಮಾಡಿರೆಂದು ಹೇಳಿದರಲ್ಲದೇ, ತ್ರೋಟಕ ಮಂತ್ರಗಳಿಂದ ಮಾ ಯಾವಾದಿಗಳು, ಮ್ಮನ್ನು ಕೊಲ್ಲುತ್ತಾರಾದ್ದರಿಂದ, ಆ ಮಾಯಿಗಳಂತೆ, ಆಚರಣೆಯನ್ನಿಟ್ಟುಕೊಂಡು, ವರಿಗೆ ಮಾತ್ರ ನಿಮ್ಮ ಗುಟ್ಟು ತಿಳಿಯಗೊಡದೇ, ರಹಸ್ಯದಲ್ಲಿ ನಾರಾಯಣನು ಸರ್ವೋತ್ತ ಾನು, ಜ್ಞಾನಾನಂದಾದಿ ಸದ್ಗುಣವುಳ್ಳವನು, ನಾವುಗಳೆಲ್ಲ ಆ ಶ್ರೀ ಹರಿಯ ದಾಸರು. ಗತ್ತು ಪ್ರವಾಹತೋ ನಿತ್ಯವೂ, ಸತ್ಯವೂ ಎಂದು ಹೀಗೆ ದೃಢ ನಂಬಿಕೆಯಿಂದ ಪಾಸನೆ ಮಾಡುತ್ತಾ, ಒಬ್ಬರಿಂದೊಬ್ಬರು ಶಿಷ್ಯ ಪ್ರಶಿಷ್ಯರಿಗೆ ಸನ್ಯಾಸ ಕೊಟ್ಟು, ರಹಸ್ಯ ಲ್ಲಿ ಇದೇ ಉಪದೇಶಿಸುತ್ತಾ, ವೇದಗಳ ಶುದ್ಧ ಸಂಪ್ರದಾಯವು ಮತ್ತು ನಮ್ಮ ಸನಕ ುನಿಗಳ ವಂಶ ಹೇಗೆ ನಾಶವಾಗದೇ ಇದ್ದೀತೋ ಆ ರೀತಿಯಲ್ಲಿ ಗುಪ್ತವಾಗಿ ಆಚರಿ ುತ್ತಾ, ಮಾಯಾವಿಗಳ ಲಾಂಛನಗಳನ್ನೇ ಇಟ್ಟುಕೊಂಡು, ಅವರಿಗೆ ಸನ್ಮಾನ ಮಾಡುತ್ತಾ, ಮಾಯಾವಿ ಶಾಸ್ತ್ರವನ್ನೇ ಓದುತ್ತಲೇ ಅವರ ಅಂತರ್ಯಾಮಿ ದೇವರನ್ನು ಬಿಡದೇ ್ಯಾನಿಸುತ್ತಾ, ಶುದ್ಧ ವೈದಿಕ ಸಂಪ್ರದಾಯವನ್ನೂ ನಮ್ಮ ಸನಕ ಮುನಿಗಳ ವಂಶವನ್ನೂ ಾಪಾಡಿಕೊಳ್ಳಿರೆಂದು, ಉಪದೇಶ ಮಾಡಿದರು. ಮತ್ತು ಮೊದಲಿಗೆ ಮಾಯಾವಾದಿಗಳು ಲವತ್ತರದಿಂದ ಕೊಟ್ಟಿದ್ದ ದಂಡಾದಿಗಳನ್ನು ತೆಗೆಸಿ, ಮೊದಲಿನಂತೆ ತಾವು ದಂಡಾದಿ ಳನ್ನು ಕೊಟ್ಟು, ಸತ್ಯಪ್ರಜ್ಞರು ಋಷಿಗಳಿಂದ ಕೂಡಿಕೊಂಡು, ಪೂರ್ವದಂತೆ ಹಿಮಗಿರಿ ುಲ್ಲಿ ಕಣ್ಣಿಗೆ ಕಾಣದಂತೆ ಹೊರಟುಹೋದರು. ಹೀಗೆ ಪ್ರಾಜ್ಞತೀರ್ಥರಾದ ಗುರುಗಳ ಜ್ಞೆಯಂತೆ, ವಿರಕ್ತರಾದ ಶಿಷ್ಯರೆಲ್ಲರೂ ಬಹಿರಂಗದಲ್ಲಿ ಮಾತ್ರ ಮಾಯಾವಿಗಳಂತೆ ಚರಿಸುತ್ತಾ ಪುರುಷೋತ್ತಮ ಕ್ಷೇತ್ರವಾದ ಜಗನ್ನಾಥಪುರಿಗೆ ಸೇರಿ, ಶ್ರೀ ಹರಿಭಜನೆ ಾಡುತ್ತ ರಹಸ್ಯವಾಗಿ ಒಬ್ಬರು ಮತ್ತೊಬ್ಬ ಶಿಷ್ಯರಿಗೆ, ಹೀಗೆ ಪರಂಪರೆಯಿಂದ ಸಚ್ಛಿಷ್ಯರಿಗೆ ಪದೇಶ ಕೊಡುತ್ತಾ, ಸತ್ಸಂಪ್ರದಾಯವನ್ನು ರಕ್ಷಿಸುವ ಶಿಷ್ಯರನ್ನು ಮಾಡಿಕೊಂಡು, ತ್ತ್ವವನ್ನೂ, ಸನಕ ಮುನಿಗಳ ವಂಶವನ್ನೂ ಕಾಪಾಡಿಕೊಂಡು ಇರುತಿರ್ದರು.

ಹೀಗೆ ಕೆಲವು ಕಾಲವೆಂದರೆ, ಸುಮಾರು ೪೦೦ ವರ್ಷಗಳ ಮೇಲೆ ತಮ್ಮವರೇ ಂದು, ಅದ್ವೈತಿಗಳಿಗೆ ಭ್ರಮ ಬರುವ ಹಾಗೆ, ಆಚರಣೆಯನ್ನು ತೋರುತ್ತಿರುವ, ಅಚ್ಯುತ ಪ್ರೇಕ್ಷಕರೆಂಬ ಶಿಷ್ಯರು ಸನಕ ವಂಶ ಪೀಠಕ್ಕೆ ಬಂದರು.

ಇಷ್ಟು ಕಾಲವರೆಗೆ ಸಜ್ಜನರು ಬಳಲಿ ದುಃಖ ಪಟ್ಟಿದ್ದನ್ನು ನೋಡಿ, ದೇವತೆಗಳು ವೇದ ದೂಷಕರನ್ನು ನಾಶ ಮಾಡುವಗೋಸುಗ, ಶ್ರೀಮನ್ನಾರಾಯಣನನ್ನು ಪ್ರಾರ್ಥಿ ಲು ಶ್ರೀ ಹರಿಯಾಜ್ಞೆ ಮತ್ತು ದೇವತೆಗಳ ಪ್ರಾರ್ಥನೆಯಂತೆ, ಸಚ್ಛಾಸ್ತ್ರ ಸಂಜೀವನ ೂಪರಾದ, ಶ್ರೀ ಮುಖ್ಯ ಪ್ರಾಣದೇವರೇ ಭೂಮಿಯಲ್ಲಿ ಶ್ರೀ ಉಡಪಿ ಕ್ಷೇತ್ರಕ್ಕೆ

ಹತ್ತಿರಿರುವ, ಪಾಜಕ ಕ್ಷೇತ್ರದಲ್ಲಿ ವಾಸ ಮಾಡಿದ್ದ ವೇದಜ್ಞರೂ, ಶುದ್ಧ ಸಂಪ್ರದಾಯಜ್ಞರೂ ಅನೇಕ ವ್ರತಾದಿಗಳನ್ನಾಚರಿಸಿದ, ಮಧ್ಯಮನೆಯುಳ್ಳ ಮಧ್ಯಗೇಹ ಭಟ್ಟರು (ನಾರಾಯಣಾ ಚಾರ್ಯರು) ತತ್ಪತ್ನಿ ವೇದವತೀದೇವಿಯ ಗರ್ಭದಲ್ಲಿ ಶುಕ್ಲಶೋಣಿತ ಸಂಬಂಧವಿಲ್ಲದೇ ತಾವು ಮೂರನೇ ಅವತಾರ ಮಾಡಿದರು. ವಾಸುದೇವನೆಂದು ಕರೆಸಿಕೊಂಡು, ಉಪನೀತ ರಾದ ಮೇಲೆ ಹರಿಯಾಜ್ಞೆಯಂತೆ, ಅಚ್ಯುತ ಪ್ರೇಕ್ಷರಲ್ಲಿ ಆಶ್ರಮವನ್ನು ತೆಗೆದುಕೊಂಡು, ಪೂರ್ಣ ಪ್ರಜ್ಞ–ಆನಂದ ತೀರ್ಥರೆಂಬ, ನಾಮವನ್ನು ಪಡೆದರು. ದಕ್ಷಿಣ ದೇಶದ ಎಲ್ಲ ಪಂಡಿತರನ್ನು ಗೆಲ್ದು, ಮಾಯಾವಿಗಳ ಕುಶಾಸ್ತ್ರವನ್ನು ಚನ್ನಾಗಿ ಖಂಡಿಸುವೆನೆಂಬ, ಭೀಮ ಪ್ರತಿಜ್ಞೆ ಮಾಡಿದರು. ಉತ್ತರ ದೇಶದ ಯಾತ್ರೆಗೆ ಹೊರಡುವಾಗ್ಗೆ, ಶ್ರೀ ಭಗವ ದ್ಗೀತೆಯ ಭಾಷ್ಯವನ್ನು ರಚಿಸಿ, ಗುರುಗಳಿಗೆ ಇತ್ತು ಗಂಗೆಯನ್ನು ದಾಟಿ, ಬದರಿಗೆ ಹೋಗಿ, ಶ್ರೀಮನ್ನಾರಾಯಣನ ದರ್ಶನ ಮಾಡಿಕೊಂಡು, ಶ್ರೀಮನ್ನಾರಾಯಣ, ವ್ಯಾಸರ ಆಜ್ಞೆ ಯಂತೆ, ಅನಂತ ಮಠಕ್ಕೆ ಬಂದು, ಶ್ರೀ ಬ್ರಹ್ಮಸೂತ್ರಗಳಿಗೆ, ವ್ಯಾಸರ ನಿಜತತ್ವವನ್ನು ತಿಳಿದು, ಪೂರ್ವ ಸಂಪ್ರದಾಯದಂತೆ, ನಿಜವಾದ ಅರ್ಥಬೋಧಕ, ದ್ವೈತ ಭಾಷ್ಯವನ್ನು ರಚಿಸಿದರು. ದ್ವೈತ ಭಾಷ್ಯದ ಎರಡನೇ ಅಧ್ಯಾಯ ಎರಡನೇ ಪಾದದಲ್ಲಿ, ಚಾರ್ವಾಕ ಬೌದ್ಧ ಜೈನ ಮಾಯಾವಾದಿ ಮುಂತಾದ ಸಕಲ ಕುಶಾಸ್ತ್ರಗಳನ್ನು ನಿರಾಕರಿಸಿ, ಶ್ರೀಹರಿಯು ಅನಂತ ಗುಣ ಪರಿಪೂರ್ಣನೂ, ಅನಂತ ರೂಪಿಯೂ, ಸಕಲ ಜಗತ್ತಿಗೆ ಕರ್ತನೂ, ಅಕ್ಷರ ಳಾದ ರಮೆಯು ಶ್ರೀಹರಿಗೆ ದೇಶಕಾಲದಿಂದ ಸಮಳು, ಗುಣದಿಂದ ಅಸಮಳು, ಶ್ರೀ ಹರಿಯ ದಾಸಳು, ಬ್ರಹ್ಮವಾಯುಗಳೇ ಜೀವೋತ್ತಮರು; ಸಕಲ ಜೀವರು ಶ್ರೀ ಹರಿಯ ದಾಸರು; ಜಗತ್ತು ಪ್ರವಾಹತೋ ನಿತ್ಯ ಸತ್ಯ, ಪಂಚಭೇದ ತಾರತಮ್ಯ ಮತವನ್ನು, ಪುನರುಜ್ಜೀವನ ಗೊಳಿಸಿ ಸಜ್ಜನರ ಅಜ್ಞಾನವನ್ನು ಕಳೆದರೆಂದು, ಈ ಇತಿಹಾಸವನ್ನು ಶ್ರೀಮನ್ನಾರಾಯಣ ಪಂಡಿತಾಚಾರ್ಯರು 'ಮಣಿಮಂಜರೀ' ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಿರುವರು. ಹೆಚ್ಚು ವಿಮರ್ಶಿಸುವವರು ಆ ಗ್ರಂಥ ನೋಡಬಹುದು. ಇದರ ಮೇಲಿಂದ ಕಾಲವನ್ನಾ ದರೂ ಊಹಿಸಬಹುದು. ಅವರ ಚರಿತೆ, ಈ ಶ್ರೀ ಸುಮಧ್ವ ವಿಜಯದಲ್ಲಿ ಅವರು ರಚಿಸಿದ, ಭಾಷ್ಯ ಮಹಿಮಾ, ಕುಶಾಸ್ತ್ರಗಳ ನಿರಾಕರಣೆ ಈ ೧೫ ನೇ ಸರ್ಗದಲ್ಲಿ ತೋರಿಸಿರುವರಾದ ಕಾರಣ ಈ ಎಲ್ಲ ಚರಿತ್ರೆಯನ್ನು ಇಲ್ಲಿ ಸಂಕ್ಷಿಪ್ತವಾಗಿ, ಭಕ್ತ ಜನರ ಆತುರತೆಗಾಗಿ ಕೊಡ ಬೇಕಾದಿತು.

ಇಂಥ ಮತಗಳು ಪಾರಂಪರ್ಯದಿಂದ ನಿತ್ಯವಾಗಿವೆ. ವೇದಗಳಲ್ಲಿಯೂ, ತ್ರಿವಿಧ ಜೀವರಗತಿ ಹೇಳಿದೆ. ಎಲ್ಲ ಕುಜೀವರ ಮತಿಗಳೇ ಕುಮತಗಳಾಗಿವೆ. ಆ ಕುಜೀವರ ಮತಿಸ್ಥ (ಬುದ್ಧಿಸ್ಥ) ಮತಖಂಡನೆಯೆಂದು ಹೇಳುತ್ತಾರೆ.

ಹಿಂದಾದ ಸಾಂಖ್ಯ ಚಾರ್ವಾಕಾದಿ ಮತಗಳ ದೂಷಣೆ ಯಾಕೆ ಮಾಡಬೇಕೆಂದು ಕೆಲವು ಮಂದಮತಿಗಳು ಶಂಕಿಸಿದರೆ, ಶ್ರೀ ಮಧ್ವಾಚಾರ್ಯರು ಅನುವ್ಯಾಖ್ಯಾನವೆಂಬ ಗ್ರಂಥದಲ್ಲಿ ಇದರ ಸವಿಸ್ತರ ಉತ್ತರ ಬರೆದಿರುವರು.

ಪರಪಕ್ಷದೂಷಣವು ಸ್ವಪಕ್ಷದಾರಢ್ಯಕ್ಕೆ ಕಾರಣವು. ಈ ಕಾರಣ ದೂಷಿಸುವದೆಂದು ಉತ್ತರ ಹೇಳಲು, ಈ ಸಾಂಖ್ಯಾದಿ ಶಾಸ್ತ್ರಗಳಾದರೂ ಪ್ರವಾಹತಃ ಅನಾದಿ ಕಾಲದಿಂದ ಇರತಕ್ಕವುಗಳು. ಜೀವರಿಗೆ ನಾಶವಿಲ್ಲದಂತೆ ಜೀವರ ಮತಿಸ್ಥವಾದ ಯಾವ ಮತಕ್ಕೂ ನಾಶವಿಲ್ಲ. ದೂಷಣವು ಕೂಡುವದಿಲ್ಲವೆಂದರೆ, ಪ್ರಭುಗಳಾದ ವೇದವ್ಯಾಸ ದೇವರು, ವೇದಾದಿಗಳಿಗೆ, ಪ್ರಾಮಾಣ್ಯವನ್ನು ಅಂಗೀಕರಿಸುವ, ಅನಾದಿ ನಿತ್ಯವಾದ ಸತ್ವ ಪುರುಷರ ಮತಗಳನ್ನು ಪ್ರವರ್ತಿಸುವ ಶಿಷ್ಯರನ್ನಪೇಕ್ಷಿಸಿ, ಪರಕೀಯ ತರ್ಕಗಳನ್ನು ಬಾಧಿಸುವ, ಪರಕೀಯ ತರ್ಕಗಳಿಂದ ಅಬಾಧ್ಯಗಳಾದ, ಅನುಕೂಲವಾದ ತರ್ಕಗಳಿಂದ ಕೂಡಿದ ಅನುಮಾನಗಳಿಂದಲೂ, ಅತಿ ದೃಢತರ ವಾಕ್ಯಗಳಿಂದಲೂ, ಈ ಸಾಂಖ್ಯಾದಿ ಮತಗಳಿಗೆ ಭ್ರಮವೇ ಮೂಲ ಕಾರಣ, (ವಿಪ್ರಲಂಭತ್ವ) ವಂಚಕ ಮೂಲಕತ್ವವನ್ನು ಸುಬೋಧ ವಾಗಿ ಹೇಳುತ್ತಾರೆ.

೧. ಕಪಿಲ ಕಣಾದಿ ಸಮಯಗಳು, ಅವರವರಿಂದ ನಿರ್ಮಿತವಾದವುಗಳು. ಇವು ಗಳಿಗೆ ಅನಾದಿತ್ವ ಹೇಗಂದರೆ, ಕಪಿಲಾದಿಗಳು ಮುಂಚಿನವರು ಮಾಡಿಡ ಶಾಸ್ತ್ರಗಳನ್ನೇ ಕಾಲಸಾಮರ್ಥ್ಯದಿಂದ ಉತ್ಪನ್ನವಾಗಿರುವದರಿಂದ, ಅವುಗಳನ್ನು ತಮ್ಮ ತಪಃ ಪ್ರಭಾವ ದಿಂದ ಪುನಃ ತಿಳಿದು, ಗ್ರಂಥಾಂತರ ನಿರ್ಮಾಣದಿಂದ ಪ್ರವರ್ತಿಸುತ್ತಾರೆ. ಹೀಗೆಯೆ ಪೂರ್ವಜರು ತಮ್ಮಿಂದ ಮುಂಚಿನವರು ಮಾಡಿದ ಶಾಸ್ತ್ರಗಳನ್ನು ತಪಃ ಪ್ರಭಾವದಿಂದ ಪ್ರವರ್ತಿಸುತ್ತಾರೆ. ಹೀಗೆ ಎಲ್ಲ ಶಾಸ್ತ್ರಗಳು, ಪ್ರವಾಹತಃ ಅನಾದಿಯೆಂದು ಹೇಳಲು ಯಾವ ದೋಷವೂ ಇಲ್ಲ.

೨. ಕರಣ ದೋಷ ಬಾಧಕ (ಇಂದ್ರಿಯ ಜನ್ಯ ದೋಷ ಬಾಧಕ ಜ್ಞಾನದಿಂದ) ಈ ಸಮಯಗಳಿಗೆ, (ಶಾಸ್ತ್ರಗಳಿಗೆ) ಅಪ್ರಾಮಾಣ್ಯವನ್ನು ಕಲ್ಪಿಸಬೇಕು. ಇಲ್ಲವಾದರೆ ಎಲ್ಲ ಪ್ರಮಾಣಗಳು ಅಪ್ರಮಾಣವಾಗಬೇಕಾಗುವವು. ಅದರಲ್ಲಿ ಶ್ರುತಿಗಳು ಅನಾದಿ ಗಳಾಗಿರುವದರಿಂದ ಹೇಗೆ ಅವುಗಳಿಗೆ ಕರಣ ದೋಷಗಳಿಲ್ಲವೊ ಹಾಗೆಯೇ ಸಾಂಖ್ಯಾದಿ ಶಾಸ್ತ್ರಗಳು ಅನಾದಿಗಳಾಗಿರುವದರಿಂದ ಅವುಗಳಿಗೆ ಕರಣ ದೋಷವಿಲ್ಲ. ಶ್ರುತಿಗಳು ಸ್ವರೂಪತಃ ಅನಾದಿಗಳು, ಸಾಂಖ್ಯಾದಿ ಸಮಯಗಳು ಪ್ರವಾಹತಃ ಅನಾದಿಗಳು ಎನ್ನುವ ವೈಷಮ್ಯವು ಅನುಪಯುಕ್ತವು, ಎಂಬುವದಕ್ಕೆ ಅನುಮಾನವು.

೩. ನಾಶವಿಲ್ಲದೇ ಒಂದೇ ರೀತಿಯಾಗಿದ್ದ ಪ್ರಯುಕ್ತ ಶ್ರುತಿಗಳಿಗೆ ಹೇಗೆ ಬಾಧಕ ವಿಲ್ಲವೊ ಹಾಗೇ ಸಾಂಖ್ಯಾದಿ ಸಮಯಗಳು ನಾಶವಿಲ್ಲದೇ ಒಂದೇ ರೀತಿಯಾಗಿ ಅನುವೃತ್ತ (ಪರಂಪರೆ ಬಂದುದು) ವಿರೋಣದರಿಂದ ಬಾಧಕವಿಲ್ಲ.

೪. ಸಾಂಖ್ಯಾದಿ ಸಮಯಗಳು ಕರಣದೋಷ ಬಾಧಕ ಪ್ರತ್ಯಯಗಳಿಂದ ಕೂಡಿರು ತ್ತವೆ ಎಂದಾದರೆ ಆಗ ಹುಚ್ಚನ ವಾಕ್ಯದಂತೆ ಅಪ್ರಮಾಣ್ಯವಾಗುತ್ತಿತ್ತು. ಹೀಗಿಲ್ಲವಾದುದ ರಿಂದ ಅಪ್ರಮಾಣ್ಯವು ಹೇಗೆ ಬಂದೀತು?

೫. ಹೇಗೆ ಶ್ರುತಿಗಳು ಪ್ರಬಲವಾದ ಯುಕ್ತಿಗಳಿಂದ, ಸಿದ್ಧವಾದ ಅರ್ಥವನ್ನು ಪ್ರತಿಪಾದಿಸತಕ್ಕವುಗಳೋ ಹಾಗೆಯೇ ಸಾಂಖ್ಯಾದಿ ಸಮಯಗಳು.

೬. ಹೀಗೆಯೇ ಶ್ರುತಿಗಳಂತೆ, ಸಾಂಖ್ಯಾದಿ ಸಮಯಗಳೂ, ವಿರೋಧಗಳಿಲ್ಲದಿರುವವೆಂದು ಸಂಭಾವಿಸಿಕೊಳ್ಳಬಹುದು. ಇಲ್ಲವಾದರೆ ಸೂತ್ರಕಾರರಲ್ಲಿ ಶ್ರೇಷ್ಠರಾದ ಜಿನ ಮೊದಲಾದವರು ಆಗ್ರಹದಿಂದ ಸಮಯಗಳನ್ನೇಕೆ ಪ್ರವರ್ತಿಸ್ಯಾರು? ಉಳಿದ ಅನೇಕ ಪಂಡಿತರೂ ಕೂಡ ಏಕೆ ಸ್ವೀಕಾರ ಮಾಡ್ಯಾರು? ಆದುದರಿಂದ ಹಿಂದೆ ಹೇಳಿದ ಪ್ರಕಾರ ಸಾಂಖ್ಯಾದಿ ಸಮಯಗಳು ಶ್ರುತಿಗಳಿಗೆ ಸಮಾನಗಳೆಂದು ತಿಳಿದವನಿಗೆ ಹಿಂದೆ ಹೇಳಿದ ಅರ್ಥದಲ್ಲಿ ಸಂಶಯವು ಬಂದೇ ಬರುವದು

ಇದಕ್ಕೆ ಉತ್ತರವೇನಂದರೆ,

ಹೀಗೆ ಪರಸ್ಪರ ವಿರುದ್ಧಗಳಾದನೇಕಗಳಿಗೆ, ಪ್ರಾಮಾಣ್ಯವು ಕೊಡವದಿಲ್ಲ. ವಸ್ತು ವಿಕಲ್ಪವು (ವಿರುದ್ಧ ಸ್ವಭಾವತ್ವ) ಬರಬೇಕಾಗುವದು. ತಥಾಚ ಅವಶ್ಯವಾಗಿ, ಯಾವದಾದರೂ ಒಂದಕ್ಕೇನೆ, ಪ್ರಾಮಾಣ್ಯವನ್ನು ಅಂಗಿಕರಿಸಬೇಕು. ಅನಾದಿಕಾಲದಿಂದ ಇರುವದು, ಇತರಗಳಲ್ಲಿಯೂ ಅನ್ಯಥಾ ಸಿದ್ಧವೆಂದು ಸರ್ವಥಾ (ಅವಶ್ಯ) ಕಲ್ಪಿಸಬೇಕಾಯಿತು.

"ಇತರೇಷಾಂಚಾನುಪಲಬ್ಧೇಃ" ಎಂದು ಸೂತ್ರದಲ್ಲಿ ಹೇಳಿದ ಪ್ರಕಾರ, ಸಾಂಖ್ಯಾದಿ ಸಮಯಗಳಿಗೆ, ಅಪ್ರಮಾಣ್ಯವನ್ನು ಕಲ್ಪಿಸಲಿಕ್ಕೆ ಶಕ್ಯವೇ ಆಗುತ್ತದೆ. ಆದ ಪ್ರಯುಕ್ತ ಶ್ರುತಿ ಸಮನ್ವಯ ಸಿದ್ಧವಾದ ಅರ್ಥದಲ್ಲಿ ಪುನಃ ಶಂಕೆಯು ಹೇಗಂದರೆ ಯಾಂಉ 'ಇತರೇಷಾಂಚಾನುಪಲಬ್ಧೇಃ' ಎಂದು ಸಂಕ್ಷೇಪವಾಗಿ ಹೇಳಿದ ನ್ಯಾಯವನ್ನು ಪರರು ಕಲ್ಪಿಸಿಕೊಂಡ ಪ್ರಮೇಯ ವಿಶೇಷಗಳಲ್ಲಿ ಉತ್ಪ್ರೇಕ್ಷಿಸಲಿಕ್ಕೆ ಸಮರ್ಥರಾಗುತ್ತಾರೋ, ಅವರನ್ನು ಕುರಿತು ನಾವು ಮೇಲೆ (ಏವಮೇತ್)= ಶ್ರುತಿ ಸಮನ್ವಯ ಸಿದ್ಧವಾದ ಅರ್ಥದಲ್ಲಿ ಸಂಶಯ ಬರುವದಿಲ್ಲೆಂಬುದು ಸತ್ಯ, ಆದರೆ, ಹೀಗೆ ಯಾವನು ಸಮರ್ಥನಲ್ಲವೋ ಆತನು ಸಂಕ್ಷೇಪವನ್ನು ವಿಸ್ತರಿಸದೇ ಇರುವತನಕಾ, ಇತರವಾದದ್ದನ್ನು ಬಿಟ್ಟು ಒಂದನ್ನು ತೆಗೆದುಕೊಳ್ಳಲಿಕ್ಕೆ ಅಸಮರ್ಥನಾಗಿ ಶಂಕಿಸುತ್ತಾನೆಯೊ ಅವನನ್ನು ಕುರಿತು, ಆವಾವ ಶಾಸ್ತ್ರಗಳಲ್ಲಿ ಹೇಳಿದ ಅರ್ಥಗಳು ಅಪ್ರಾಮಾಣೀಕಗಳು, ಪ್ರಮಾಣ ವಿರುದ್ಧವಾಗಿವೆಯೆಂದು ಸ್ಪಷ್ಟವಾಗಿ ತೋರಿಸುತ್ತಾ, ಆ ಶಾಸ್ತ್ರಗಳು ಭ್ರಾಂತಿಮೂಲಕವೆಂದು ತಿಳಿಸುವದು ಯುಕ್ತ.

ಇದಕ್ಕೆ ಮತ್ತು ಪೂರ್ವಪಕ್ಷ.

(೧) ಹಾಗಾದರೆ ಅನಾದ್ಯನಂತ ಕಾಲಗಳಲ್ಲಿ ನಾಶವಿಲ್ಲದೇ ಒಂದೇ ರೀತಿಯಾಗಿರುವ ಸಮಯಗಳಿಗೆ, ಭ್ರಾಂತಿ ಮೂಲಕತ್ವವು ಯುಕ್ತವಲ್ಲ. ಉನ್ಮತ್ತನ ವಾಕ್ಯಗಳಂತೆ ಅಲ್ಲ.

" ತಥಾಚ ಸಾಂಖ್ಯಾದಿ ಸಮಯಾ ಪ್ರಮಾಣಭೂತಾಃ ನ ಭ್ರಾಂತ್ಯಾದಿ ಮೂಲಾ ಸರ್ವದಾನುವರ್ತತ್ವಾತ್, ಮಹಾಜನ ಪರಿಗ್ರಹೀತತ್ವಾತ್ " ಹೀಗೆ ವೇದವತ್ ಸಾಂಖ್ಯಾದಿ ಸಮಯಗಳು ಪ್ರಮಾಣಗಳು ಅಥವಾ ಭ್ರಾಂತಿ ಮೂಲಕಗಳಲ್ಲ ಯಾವಾಗಲೂ ಇರುವದರಿಂದ, ಮಹಾ ಜನರು ಪರಿಗ್ರಹಿಸುವದರಿಂದ ವೇದದಂತೆಯೇ ತಥಾಚ, ಮುಂದೆ ಹೇಳುವ ತರ್ಕಾದಿಗಳು ಬಾಧಿತವೆಂದರೆ ಹೀಗೆ ಹೇಳಕೂಡದು ಎಂದರೆ ಸಂಕ್ಷಿಪ್ತವಾಗಿ ಶಂಕಿಸುವರನ್ನು ಕುರಿತು ಪ್ರಶ್ನೆ.

(೧) ಇಲ್ಲಿ ಎಲ್ಲ ಮತಗಳಿಗೂ ಪ್ರಾಮಾಣ್ಯವನ್ನು ಸಾಧಿಸುವಿರೋ.

(೨) ಅಥವಾ ಒಂದೇ ಮತಕ್ಕೊ ?

ಎಲ್ಲಾ ಮತಗಳಿಗೂ ಪ್ರಾಮಾಣ್ಯ ಸಾಧಿಸುವೆವೆಂಬ ಮೊದಲನೇದ್ದು ಕೂಡಲಾರದು. ಯಾಕಂದರೆ ಪರಸ್ಪರ ವಿರುದ್ಧವಾದ ಸಮಯಗಳಿಗೆ, ಪ್ರಾಮಾಣ್ಯಗಳನ್ನು ಸಾಧಿಸಿದರೆ, ಸಾಂಖ್ಯನ ಸಿದ್ಧಾಂತಕ್ಕೆ ಪ್ರಾಮಾಣ್ಯವೋ ಬೌದ್ಧನ ಸಿದ್ಧಾಂತಕ್ಕೆ ಪ್ರಾಮಾಣ್ಯವೋ ಎಂದು ವಸ್ತುವಿಕಲ್ಪವು ಬರಬೇಕಾದುದರಿಂದ, ಬಾಧಿತ ವಿಷಯತ್ವವು ಬರುತ್ತದೆ. ಪರಸ್ಪರ ವಿರುದ್ಧ ಸ್ವರೂಪವೂ ಆಗಿರುವದರಿಂದ ಸತ್ಪ್ರತಿ ಪಕ್ಷತ್ವವೂ ಹೇತುವಿಗೆ ಬರುತ್ತದೆ.

ಅಂದರೆ 'ಸರ್ವ ಸಮಯಾ ನ ಪ್ರಮಾಣಂ ಭ್ರಾಂತಿ ಮೂಲಾ ವಾ, ಪರಸ್ಪರ ನಿಷೇಧ ರೂಪತ್ವಾತ್, ಅನ್ಯೋನ್ಯ ನಿಷೇಧಕಃ; ಘಟ ಅಸ್ತಿ, ಘಟನಾಸ್ತಿ ' ಇತ್ಯಾದಿ ರೂಪ ಹೀಗೆ ಒಂದಕ್ಕೊಂದು ವಿರುದ್ಧವಾದುವುಗಳನ್ನು ಒಂದಕ್ಕೊಂದು, ಪರಸ್ಪರವಾಗಿ ಪ್ರಾಮಾಣ್ಯ ಸಾಧನ ಮಾಡಲಿಕ್ಕೆ ಬರುವದಿಲ್ಲ. ಪರಸ್ಪರ ಪ್ರತಿಷೇಧ (ವಿರುದ್ಧ) ರೂಪವಾಗಿವೆ. ಹೀಗಿದ್ದರೆ, ' ಸತ್ಪ್ರತಿಪಕ್ಷಿ ' ದೋಷವು ಹೇತುವಿಗೆ ಬರುವದು.

ಇನ್ನು ಒಂದೇ ಸಮಯಕ್ಕೆ ಪ್ರಾಮಾಣ್ಯವೆಂದು ಸಾಧಿಸುವದು ಸಹ ಕೂಡಲಾರದು.

ಪಕ್ಷೀಕೃತ ( ಸ್ವೀಕೃತ ) ವಾದ ಸಮಯದ ದೆಶೆಯಿಂದ ಬೇರೆ ಸಮಯಗಳಿಗೆ, ಪ್ರಾಮಾಣ್ಯಾದಿಗಳನ್ನು ಅಂಗೀಕರಿಸಿದರೆ, ಬಾಧಿತ ವಿಷಯತ್ವರೂಪ ದೋಷವೂ ಬರುವದು. ಅಂಗೀಕರಿಸದಿದ್ದರೆ, "ಸರ್ವದಾ ಅನುವೃತ್ತ ಮಾನತ್ವಾತ್" ಎನ್ನುವ ಹೇತುವಿಗೆ ಪ್ರಾಮಾಣ್ಯರೂಪ ಸಾಧ್ಯ ಬಾರದೇ ಇದ್ದ ಪ್ರಯುಕ್ತ ವ್ಯಭಿಚಾರವು; ವೇದ ಪ್ರಮಾಣ್ಯಾದಿಗಳನ್ನು ಅಂಗೀಕರಿಸಿದರೆ ಪರರು ಪಕ್ಷೀಕರಿಸಿರುವ ಸಮಯಕ್ಕೆ, ಅದಕ್ಕೆ ವಿರುದ್ಧವಾದ ಅರ್ಥವುಳ್ಳ, ಪ್ರಮಾಣಭೂತವಾದ ವೇದದಿಂದ ಬಾಧವು ಬರುವದರಿಂದ ಪ್ರತಿಜ್ಞಾರ್ಥವೂ ಪಕ್ಷ, ಸಾಧ್ಯ, ಇವೆರಡು ಕೂಡಿದರೆ, ಪ್ರತಿಜ್ಞಾ, ಉ. ( ವಹ್ನಿಮಾನ ಪರ್ವತಃ ) ಕೂಡುವದಿಲ್ಲ. ವೇದ ಪ್ರಾಮಾಣ್ಯವನ್ನು ಅಂಗೀಕರಿಸದೇ ಇದ್ದರೆ ವೇದರೂಪವಾದ ದೃಷ್ಟಾಂತದಲ್ಲಿ, ಪ್ರಾಮಾಣ್ಯರೂಪ ಸಾಧ್ಯ ವೈಕಲ್ಯ ದೋಷ.

ಹಾಗಾದರೆ ಭ್ರಾಂತಿ ಮೂಲಕತ್ವವು ಸಮಾನವಾಗಿರಲಿಕ್ಕೆ ಅನಾದ್ಯನಂತ, ಕಾಲಾನುವೃತ್ತಿಯು, ಉನ್ಮತ್ತನ ವಾಕ್ಯದಲ್ಲಿ ಬಾರದೇ ಸಮಯಗಳಿಗೇವೆ ಬರಲು, ಕಾರಣವೇನೆಂದು ಶಾಂತಚಿತ್ತ ಸುಹೃದ್ಭಾವದಿಂದ ಕೇಳುವರನ್ನು ಕುರಿತು ಹೇಳುವದೇನಂದರೆ, (ಸಮಯ) ಮತಪ್ರವರ್ತಕರಾದ, ಪುರುಷರುಗಳಿಗೆ ದುರಾಗ್ರಹ ಗ್ರಹೀತತ್ವ (ತಮ್ಮ ಹಟ ಸಾಧಿಸುವಿಕೆ, ಇರುವದರಿಂದ ಆ ಸಮಯಗಳಿಗೆ ಅನಾದಿ ಕಾಲತಃ ಅನುವೃತ್ತಿಯು ಬರುವದು. ಈ ದುರಾಗ್ರಹವು, ಉನ್ಮತ್ತನಲ್ಲಿ ಇಲ್ಲದೇ ಇದ್ದ ಪ್ರಯುಕ್ತ ಅನಾದಿ ಕಾಲಾನುವೃತ್ತಿಯು, ಉನ್ಮತ್ತನ ವಾಕ್ಯದಲ್ಲಿ ಬರುವದಿಲ್ಲ.

"ದೌರ್ಲಭ್ಯಾಚ್ಛುದ್ಧ ಬುದ್ಧೀನಾಂ ಬಾಹುಲ್ಯಾದಲ್ಪವೇದಿನಾಂ ।
ತಾಮಸತ್ವಾಚ್ಛಲೋಕಸ್ಯ ಮಿಥ್ಯಾ ಜ್ಞಾನ ಪ್ರಸಕ್ತಿತಃ ॥
ವಿದ್ವೇಷಾತ್ಪರಮೇ ತತ್ವೇ ತತ್ವವೇದಿಷುಚಾನಿಶಂ ।
ಅನಾದಿ ವಾಸನಾಯೋಗಾದಸುರಾಣಾಂ ಬಹುತ್ವತಃ ॥
ದುರಾಗ್ರಹಗ್ರಹೀತತ್ವಾದ್ವರ್ತಂತೇ ಸಮಯಾಃ ಸದಾ ।
ತಥಾ ವಿಶುದ್ಧಬುದ್ಧೀನಾ ಮೀಶಾನುಗ್ರಹಯೋಗಿನಾಂ ॥
ಸುಯುಕ್ತ ಯಸ್ತಮೋಹನ್ಯ ರಾಗಮಾನಗತಾಃ ಸದಾ ।
ಇತಿ ವಿದ್ಯಾಪತಿ ಸಮ್ಯಕ್, ಸಮಯಾನಾಂ ನಿರಾಕೃತಿಂ ॥
ಚಕಾರ ನಿಜಭಕ್ತಾನಾಂ ಬುದ್ಧಿ ಶಾಣತ್ವ ಸಿದ್ಧಯೇ ॥ ೮ ॥

ಎಂದು ಶ್ರೀ ಭಗವತ್ಪಾದರ, ಅನುವ್ಯಾಖ್ಯಾನ ವಚನವು. ಅಧ್ಯಾಯ (೨) ಪಾದ (೨)

ಇದರ ಅಭಿಪ್ರಾಯವೇನಂದರೆ, ನಿರ್ಮಲಾಂತಃಕರಣವುಳ್ಳ ಸಜ್ಜನರಿಗೆ, ದುರ್ಲಭತ್ವವಿದ್ದ ಪ್ರಯುಕ್ತವೂ, ಅಂದರೆ ಸಜ್ಜನರು ವಿರಳ ಬಹು ಸ್ವಲ್ಪವಾಗಿರುವದರಿಂದ, ಭ್ರಮಾಧಿಷ್ಠಾನ ಸ್ವರೂಪವನ್ನು ಮಾತ್ರ ತಿಳಿದ, ಸಮಯ ಪ್ರವರ್ತಕರಿಗೆ, ಆಧಿಕ್ಯವಿದ್ದುದರಿಂದ, "ಅಸುರಾಃ ಬಹುಲಾಯಸ್ಮಾತ್"ಯೆಂಬುವ ವಚನದಂತೆ ಅಸುರ ಜನರೇ ಬಹಳ ವಿದ್ದದರಿಂದ, ರಾಜ ಮೊದಲಾದವರಿಗೆ ತಮೋಗುಣ ಪ್ರಾಧಾನ್ಯವಿದ್ದುದರಿಂದ, ಕುಪಂಡಿತರ ಸಹವಾಸ ನಿಮಿತ್ಯವಾಗಿ, ಮಿಥ್ಯಾಜ್ಞಾನವು ಪ್ರಶಕ್ತಿಯಾಗುವದರಿಂದಲೂ, ಪರತತ್ವನಾದ ಶ್ರೀ ವಿಷ್ಣುವಿನಲ್ಲಿಯೂ, ತತ್ವಜ್ಞಾನಿಗಳಲ್ಲಿಯೂ, ನಿರಂತರದಲ್ಲಿ ದ್ವೇಷವಿದ್ದ ಪ್ರಯುಕ್ತವೂ ಅನಾದಿಯಾದ ದುಸ್ಸಂಸ್ಕಾರ ಸಂಬಂಧದಿಂದ, ಅಸುರರಿಗೆ, ವಿಪರೀತ ಪ್ರಯತ್ನಾದಿ ಪ್ರೇರಕರಾದ, ಬುಧ್ಯಾಭಿಮಾನಿಗಳಾದ ಅಸುರರಿಗೆ, ಬಾಹುಲ್ಯವಿದ್ದ ಪ್ರಯುಕ್ತ, ಕುಶಾಸ್ತ್ರ ಪ್ರವರ್ತಕರಾದ ಪುರುಷರಿಗೆ ದುರಾಗ್ರಹಗ್ರಸ್ತತ್ವವಿರುವದರಿಂದಲೂ, ಈ ಕುಶಾಸ್ತ್ರಗಳು ಸಹ ಅನಾದಿಯಿಂದ ಭ್ರಾಂತಿಮೂಲತ್ವವೇ ಆಗಿರುವವು.

ಹೀಗಾದರೆ ಅತಿ ದೃಢಗಳಾದ ಸಮಯಗಳನ್ನು ಸರ್ವಥಾ ಅಪ್ರಮಾಣಗಳೆಂದು ತಿಳಿಸಲಿಕ್ಕೆ ಅಶಕ್ಯವಾಗಿರುವದರಿಂದ ಕುಶಾಸ್ತ್ರಗಳ ನಿರಾಕರಣವು ವ್ಯರ್ಥವೆಂದರೆ,

ಎದ್ಯಪಿ, ಕುಸಮಯಗಳನ್ನು ಸರ್ವಥಾ ಉಚ್ಛೇದ ಮಾಡಲಿಕ್ಕೆ ಸಾಧ್ಯವಿಲ್ಲ. ಆದಾಗ್ಯೂ ಶುದ್ಧಾಂತಃಕರಣವುಳ್ಳ ಯಥಾರ್ಥ ಜ್ಞಾನ ಸ್ವಭಾವವುಳ್ಳ, ಮೋಕ್ಷಯೋಗ್ಯರಾದ ಶ್ರೀ ಹರಿಯ ಅನುಗ್ರಹಕ್ಕೆ ಪಾತ್ರರಾದ ಸಜ್ಜನರಿಗೆ, ಯಾವಾಗಲೂ ವೇದಪ್ರಮಾಣ ಗ್ರಹೀತ ವ್ಯಾಖ್ಯಾದಿಗಳಿಂದ ಯುಕ್ತವಾದ ಮತ್ತು ಪ್ರಮಾಣಗಳ ಸಂವಾದದಿಂದ ಕೂಡಿರುವ ಸುಯುಕ್ತಿಗಳು ಅಜ್ಞಾನವನ್ನು ನಾಶ ಮಾಡುವವು. ಈ ಪ್ರಕಾರ ವೇದವ್ಯಾಸರು ಕುಸಮಯಗಳಿಂದ ಅಜ್ಞಾನವನ್ನು ಹೊಂದದಿರುವ ನಿಜಭಕ್ತರಾದ ಬ್ರಹ್ಮಾದಿಗಳ ಬುದ್ಧಿಯನ್ನು ಕುರಿತು, ಯುಕ್ತಿಗಳಿಗೆ ( ಶಾಣತ್ವ ) ನೀಡವಾದ ಒಳ್ಳೇ ಹದನ, ತೀಕ್ಷ್ಣತ್ವವು ಬರುವ ಕಾರಣ, ಅಂದರೆ ಯುಕ್ತಿಶಾಣದಿಂದ, ಜ್ಞಾನವೆಂಬುವ ಖಡ್ಗಕ್ಕೆ ಅತ್ಯಂತ ತೈಕ್ಷ್ಣ್ಯವು ಸಿದ್ಧಿಯಾಗುವದಕ್ಕಾಗಿ, ಚನ್ನಾಗಿ ಆ ಹರ್ತಾದಿ= ಜೈನಾದಿ ಶಾಸ್ತ್ರಗಳನ್ನು ನಿರಾಕರಣ ಮಾಡಿದರು.

ಇದೇ ವಿಷಯವನ್ನೆ "ಸುಧಾ"ದಲ್ಲಿ ಶ್ರೀಮತ್ಪೂಜ್ಯರಾದ ಟೀಕಾಕೃತ್ಪಾದರು ವಿಶದೀಕರಿಸಿರುವದೇನಂದರೆ,

೧. ಸಮಯ ಪ್ರವರ್ತಕರಾದ ಪುರುಷರು ದುರಾಗ್ರಹ ಯುಕ್ತರಾದ ಪ್ರಯುಕ್ತ, ಭ್ರಾಂತಿಮೂಲಕತ್ವವಾಗಿಯೇ ಯಾವಾಗಲೂ, ಸಮಯಗಳು ಇರುತ್ತವೆ. ಉನ್ಮತ್ತನ ವಾಕ್ಯದಲ್ಲಿ ಹೀಗೆ ಇರುವದಿಲ್ಲ.

೨. ಹಾಗಾದರೆ, ಆಗ್ರಹಕ್ಕ ಕಾರಣವೇನಂದರೆ, ವಿಷ್ಣು, ವೈಷ್ಣವರಲ್ಲಿ ಯಾವಾಗಲೂ ಪ್ರದ್ವೇಷವೇ ಕಾರಣವು.

೩. ಹಾಗಾದರೆ ಪುರುಷಾರ್ಥವನ್ನು ಇಚ್ಛಿಸುವದು, ವಿದ್ವೇಷ ನಿಮಿತ್ತಕವಾದ ಆಗ್ರಹದಿಂದ, ಅನ್ಯಾಯವನ್ನು ಹೇಗೆ ಪ್ರವರ್ತಿಸುವರು ಎಂದರೆ ಅನಾದಿಯಾದ ಸಂಸ್ಕಾರ ವಶದಿಂದ, ಅವರಿಗೆ ಅದೇವೇ ತೃಪ್ತಿಕರವು.

೪. ಹಾಗಾದರೆ, ಅನಾದಿಯಾದ ಸಂಸ್ಕಾರವೂ ಕೂಡ, ಪ್ರಬಲ ಯತ್ನದಿಂದೇಕೆ ನಿವೃತ್ತವಾಗುವದಿಲ್ಲ? ಎಂದರೆ ವಿಪರೀತ ಯತ್ನಾದಿಗಳಿಗೆ, ಪ್ರೇರಕರೂ ಬುಧ್ಯಾದಿಗಳಿಗೆ ಅಭಿಮಾನಿಗಳೂ ಆದ, ಅಸುರರು ಬಹಳವಾಗಿರುವದರಿಂದ, ಆ ಸಂಸ್ಕಾರವು ಹೊರಟು ಹೋಗಲಾರದು. ಆ ಅಸುರರ ನಿಜಸ್ವರೂಪ ಗುಣವು.

೫. ಹಾಗಾದರೆ ಸಜ್ಜನರು ನಿವಾರಣೆ ಮಾಡುವದರಿಂದ, ಏಕೆ ಸಾಂಖ್ಯಾದಿ ಸಮಯಗಳು ನಿವೃತ್ತವಾಗುವದಿಲ್ಲವೆಂದರೆ, ಸಾಧುಗಳೇ ದುರ್ಲಭರಾಗಿರುತ್ತಾರೆ. ಅಸಜ್ಜನರು ಎಲ್ಲ ಕಡಿಗೆ ಹೆಚ್ಚಾಗಿರುವರು. ಆದುದರಿಂದಲೇ ರಾಜರಿಗೂ ಕುಪಂಡಿತರ ನಿಮಿತ್ತವಾಗಿ, ಅವರ ಸಹವಾಸದಿಂದ ಮಿಥ್ಯಾ ಜ್ಞಾನವು ಹಬ್ಬಿಕೊಂಡಿದೆ. ಆದರೆ ಪಾಶುಪತ್ಯಾದ್ಯಾಗಮಕ್ಕೆ ಅಪ್ರಾಮಾಣ್ಯ ತಂದು ಕೊಡತಕ್ಕ ದುರಾಗ್ರಹ ಕಾರಣಗಳು, ಅನಾದಿಯಾದ ವೇದದಲ್ಲಿ ಕೂಡಲಾರದು.

೬. ಹೀಗೆ ಅತಿ ದೃಢಗಳಾದ ಸಮಯಗಳನ್ನು ಪ್ರವಾಹತಃ ನಿತ್ಯವಾದ ಪ್ರಯು ಸರ್ವಥಾ ಉಚ್ಛೇದಿಸಲಿಕ್ಕೆ ಅಶಕ್ಯವಾದ ಕಾರಣ, ಈ ನಿರಾಕರಣವೇ ವ್ಯರ್ಥವೆಂದ ಸಾಂಖ್ಯಾದಿ ಸಮಯಗಳನ್ನು ಉಚ್ಛೇದಿಸಲಿಕ್ಕೆ ಈ ಪ್ರಯತ್ನವಿಲ್ಲ. ಮತ್ತೆ ಕೆಲ ಪುರುಷರಿಗೆ ಆಗಮಸಹಿತವಾದ ಯುಕ್ತಿಗಳಿಂದ ನಿಜವಾದ ತತ್ವಜ್ಞಾನ ಹುಟ್ಟಿ ಆವಾವ ಕುಶಾಸ್ತ್ರಗಳಿಂದುಂಟಾದ ಅಜ್ಞಾನ ಸಂಶಯ ವಿಷಯಗಳನ್ನು ತೆಗೆಯಲಿ ಈ ಪ್ರಯತ್ನವು.

೭. ಹಾಗಾದರೆ ಅತ್ಯಂತ ( ನಿರೂಢ = ದೃಢ ) ನಿಬಿಡವಾಸನಾ (ಸಂಸ್ಕಾರ)ದಿಂ ಸಂಬಂಧವಾದ, ಅನಾದಿಯಾದ ಅಜ್ಞಾನವು ಈಗಲೇ ಹುಟ್ಟಿದ, ತತ್ವಜ್ಞಾನದಿಂ ನಷ್ಟವಾಗುತ್ತದೆಂದು ಹೇಳಿದ್ದು ಅಯುಕ್ತವು; ಮತ್ತೆ ತತ್ವಜ್ಞಾನವನ್ನು ತಿರಸ್ಕರಿ ತನ್ನ ಸಂಸ್ಕಾರ ವಶದಿಂದಲೇ ಅಜ್ಞಾನವು ಪ್ರಾದುರ್ಭೂತವಾಗುತ್ತದೆ. ತಮೋಗುಣ ಉಚಿತವಾದ ಕಾರ್ಯವನ್ನು ಪ್ರವರ್ತಿಸುತ್ತದೆ ಎಂದರೆ, ಕೆಲವು ಚೇತನರ ಮುಕ್ತಿಯೋಗ್ಯರು, ಕೆಲವರು ಮುಕ್ತಿಯೋಗ್ಯರಲ್ಲ. ಈ ಅಯೋಗ್ಯರ ಅಜ್ಞಾನವನ್ನು ತೆಗೆಯಲಿಕ್ಕೆ ಇದನ್ನು ಆರಂಭಿಸಿದ್ದಲ್ಲ; ಮುಕ್ತಿಯೋಗ್ಯರ ಅಜ್ಞಾನವನ್ನು ತೆಗೆಯ ಲಿಕ್ಕೇವೆ ಆರಂಭ ಮಾಡಿದ್ದು. ಆದರೂ ವಿಶುದ್ಧವಾದ ವಿಜ್ಞಾನ ಸ್ವಭಾವವುಳ್ಳವರು ಮತ್ತು ಪ್ರಮಾಣಗಳಿಂದ ಈಗಲೇ ಹುಟ್ಟಿದಾಗ್ಯೂ ಈ ಮನೋವೃತ್ತಿರೂಪವಾದ ತತ್ವ ಜ್ಞಾನವು, ಅಂತರಂಗ ಭೂತವಾದ ವಿಶುದ್ಧವಾದ ಸ್ವರೂಪಜ್ಞಾನದಿಂದ ಸಹಾಯ ವುಳ್ಳಂಥಾದ್ದಾಗಿ, ಬಹಿರಂಗದ ಈ ಜ್ಞಾನವು ಅನಾದಿಯಾಗಿರತಕ್ಕದ್ದಾದರೂ, ( ಉಪೋ ದ್ಬಲಿತ ) ಪ್ರವೃತ್ತವಾದ ಸ್ವಭಾವವು ಸರ್ವಕ್ಕಿಂತಲೂ ಪ್ರಬಲವಾದುದರಿಂದ, ವಾಸನಾ ಸಹಿತವಾದ ಅಜ್ಞಾನವನ್ನು ಸಮೂಲವಾಗಿ ನಾಶಪಡಿಸುತ್ತದೆ. ಹೀಗೆಂದರೆ ಪ್ರಮಾಣ ಗಳಿಗೂ, ವೈಯ್ಯರ್ಥವಿಲ್ಲ. ಬಾಹ್ಯ ಪ್ರಯತ್ನದಿಂದ ಯುಕ್ತವಾದ ಸ್ವಭಾವವೇ ಕಾರ್ಯ ಕಾರಿಯಾಗಿದೆ.

೮. ಇನ್ನೊಂದು ಕಾರಣವೇನಂದರೆ, ಈಶ್ವರಾನುಗ್ರಹವು ಸರ್ವಕ್ಕಿಂತಲೂ ಪ್ರಬಲವೆನ್ನುವದು, ಸುಪ್ರಸಿದ್ಧವು. ಅಂಥ ಈಶ್ವರಾನುಗ್ರಹವು ಮುಕ್ತಿಯೋಗ್ಯರಾದ ಜೀವರಲ್ಲಿ ಅನಾದಿಯಿಂದ ಇದೆ. ಮತ್ತು ಈಶ್ವರಾನುಗ್ರಹದಿಂದ ಯುಕ್ತವಾದ ಈ ವೃತ್ತಿ ಜ್ಞಾನವು ಅತಿ ಪ್ರಬಲ ಸಂಸ್ಕಾರದಿಂದ ಯುಕ್ತವಾದ, ಅನಾದಿ ಅಜ್ಞಾನವನ್ನು ಮುಕ್ತಿ ಯೋಗ್ಯರಿಗೆ ಸಮೂಲವಾಗಿ ನಾಶಪಡಿಸುತ್ತದೆ, ಆದ ಪ್ರಯುಕ್ತ ಸಮಯಗಳ ನಿರಾಕರಣೆ ವ್ಯರ್ಥವಲ್ಲ.

೯. ಈಶ್ವರಾನುಗ್ರಹದಿಂದಲೇ ಅವಿದ್ಯಾ ನಿವೃತ್ತಿಯಾಗುವದು. ತತ್ವಜ್ಞಾನವೇತ ಕ್ಕೆಂದು ಹೇಳಕೂಡದು. ಈಶ್ವರಾನುಗ್ರಹವು ಪುರುಷರಿಂದ ಪ್ರಯತ್ನ ಮಾಡಿಸಿ, ಆ ಪುರುಷರ ಪ್ರಯತ್ನ ಅನುಸರಿಸಿಯೇ ಫಲವನ್ನು ಕೊಡುವದೆಂದು ಭಾರತ ತಾತ್ಪರ್ಯ

ನಿರ್ಣಯದಲ್ಲಿ ಹೇಳಿರುವರು. "ಫಲಪ್ರದೋವಾಸುದೇವೋಽಖಿಲಸ್ಯ" ಯೋಗ್ಯತಾ ಕರ್ಮ ಪ್ರಯತ್ನಗಳಿಂದ ಯುಕ್ತವಾದದ್ದೆಲ್ಲಾದ್ದಕ್ಕೂ ವಾಸುದೇವನೇ ಫಲವನ್ನು ಕೊಡುವನು. ಒಂದೊಂದರಿಂದ ಫಲವನ್ನು ಕೊಡಲಾರನು.

೧೦. ಹೀಗೆ ಸಜ್ಜನರಿಗೆ ಕುಸಮಯದಿಂದುಂಟಾದ, ಅಜ್ಞಾನವನ್ನು ತೆಗೆಯಲಿಕ್ಕೆ ಶ್ರೀ ವೇದವ್ಯಾಸದೇವರು ಕುಸಮಗಳನ್ನು ನಿರಾಕರಿಸಿದ್ದಾರೆ. (ಅಂದರೆ, ಯುಕ್ತಿಶಾಣದಿಂದ ಬುದ್ಧಿಯೆಂಬ ಖಡ್ಗಕ್ಕೆ ತೀಕ್ಷ್ಣತ್ವ ಸಿದ್ಧಿಸಲುವಾಗಿ) ಮತ್ತು ಬ್ರಹ್ಮಾದಿಗಳಿಂದ ಆದರಿಸದೇ ಹೋಗಬೇಕಾದೀತೆಂದರೆ, ಬ್ರಹ್ಮಾದಿಗಳಿಗೆ ಕುಸುಮಯಗಳಿಂದ, ಅಜ್ಞಾನವು ಬಾರದಿರುವದರಿಂದ ಪ್ರಯೋಜನವೇ ಇಲ್ಲ. 'ತಥಾಚ' "ಏವಂ ವಿಧಾನಿ ಸೂತ್ರಾಣಿ ಕೃತ್ವಾ" ಇತ್ಯಾದ್ಯಾಗಮಗಳಿಂದ ವಿರೋಧವು ಎಂದರೆ, ಅದಕ್ಕೂ ಕುಸಮಯಗಳಿಂದುಟಾದ, ಅಜ್ಞಾನ ನಿರಸನರೂಪ ಪ್ರಯೋಜನವಿಲ್ಲವಾದರೂ (ಜ್ಞಾನ ವಿಶದರೂಪ) ಬ್ರಹ್ಮಾದಿಗಳ ಬುದ್ಧಿಯನ್ನು ಕರಿತು, ಯುಕ್ತಿಗಳಿಗೆ ಶಾಣತ್ವ ಸಿದ್ಧಿಸಲುವಾಗಿ, ಬ್ರಹ್ಮಾದಿಗಳು ಇದನ್ನು ಆದರಿಸಲೇಬೇಕು

೧೧. "ಅತೋ ಅಶೇಷ ಜಗದ್ಧಾತಾ ನಿರ್ದೋಷೋರು ಗುಣಾರ್ಣವಃ।
ನಾರಾಯಣಃ ಶ್ರುತಿಗಣ ತಾತ್ಪರ್ಯಾದವಸೀದತೇ ॥

ಆದಕಾರಣ ಸಾಂಖ್ಯ ಮೊದಲಾದ ವಿರೋಧಿ ಸಮಯಗಳನ್ನು ನಿರಾಕರಿಸುವದರಿಂದ ಶ್ರೀ ನಾರಾಯಣನು ಸರ್ವ ಜಗದಾಧಾರಕನೂ, ದೋಷ ಲೇಶರಹಿತನೂ, ಉತ್ಕೃಷ್ಟವಾದ ಗುಣಗಳಿಂದ ಸಮುದ್ರನಂತಿರುವನೂ, ಎಂದು ಶ್ರುತಿಗಳ ಸಮುದಾಯ ತಾತ್ಪರ್ಯದ್ದೆಶೆಯಿಂದ ನಿಶ್ಚಿತನಾಗುತ್ತಾನೆ. ಅಂದರೆ ಸಾಂಖ್ಯಾದಿ ವಿರೋಧಿ ಸಮಯಗಳನ್ನು ನಿರಾಕರಿಸುವದರಿಂದ, ಸಕಲ ಶ್ರುತಿಸಮನ್ವಯದಿಂದ ಶ್ರೀ ಹರಿಗೆ, ಜಗಜ್ಜನ್ಮಾದಿ ಕಾರಣತ್ವವು ಗುಣ ಪೂರ್ಣತ್ವವಾದ ಎರಡು ಗುಣ, ಲಕ್ಷಣಗಳು ಸಾಧಿಸಲ್ಪಟ್ಟಿವೆಯೋ ಅವು ನಿರ್ಣಿತವೇ ಆಗಿವೆ.

೧೨. ಇದೆಲ್ಲಾ ಆಗಬಹುದು. "ನವಿಗ್ರಹ್ಯ ಕಥಾಂ ಕುರ್ಯಾತ್ ಇತ್ಯಾದಿ ಸ್ಮೃತಿ ನಿಷಿದ್ಧವಾದ, ಈ ಪರನಿರಾಕರಣವನ್ನು ಮಾಡಕೂಡದು, ಆದಕಾರಣ ಸಾಂಖ್ಯಾದಿ ಸಮಯಗಳನ್ನು ಹೇಗೆ ನಿರಾಕರಣ ಮಾಡಿರುವದು ಹೇಗೆಂದರೆ ಈಶ್ರುತಿಗೆ ನಿಶ್ಚಯವಾದ ಅರ್ಥವೇನಂದರೆ, ಸದ್ವಿಷಯಕವಾದ ಮತವನ್ನು ನಿರಾಕರಣ ಮಾಡಬಾರದು. ಈ ರೀತಿ ಸಂಕೋಚಾರ್ಥವು ಯಾಕಂದರೆ, ಶ್ರುತಿ ಸ್ಮೃತಿಗಳಲ್ಲಿ ಶ್ರುತಿಯು ಬಲಿಷ್ಟವಾದುದರಿಂದ, ಆ ಬಲಿಷ್ಟವಾದ ಶ್ರುತಿಯಲ್ಲಿ ಪರನಿರಾಕರಣ ಅವಶ್ಯವಾಗಿ ಮಾಡಬೇಕೆಂದು ಹೇಳಿದೆ.

ಆ ಶ್ರುತಿಯು ಯಾವುದೆಂದರೆ,

"ಅಂಧಂತಮಃ ಪ್ರವಿಶಂತಿ, ಯೋಽವಿದ್ಯಾ ಮುಪಾಸತೇ।
ತತೋಭೂಯ ಇವತೇ ತಮೋಯಉ ವಿದ್ಯಾಯಾಂ ರತಾಃ ॥

ವಿದ್ಯಂಚಾ ವಿದ್ಯಾಂಚ ಯಸ್ತದ್ವೇದೋಭಯಂ ಸಹ।
ಅವಿದ್ಯಯಾ, ಮೃತ್ಯುಂತೀರ್ತ್ವಾ ವಿದ್ಯಾಯಾಽಮೃತಮಶ್ನುತೇ ||

ಈಶಾವಾಶೋಪನಿಷತ್ತಿನ ಈ ಎರಡು ಮಂತ್ರಗಳನ್ನು ಅರ್ಥತಃ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

"ಅಂಧಂತಮಃ ಪ್ರವಿಶಂತಿ, ಯೇತ್ವವಿದ್ಯಾ ಮುಪಾಸತೇ ।
ತತೋಭೂಯ ಇವಾಯಾಂ (ಸ್ಸ್ಯಂ)ತಿ, ಏತಸ್ಯಾನೈವನಿಂದಕಾಃ ||
ತತೋ ವಿದ್ಯಾಮವಿದ್ಯಾಂಚ ಯೋಜಾನಾತ್ಯುಭಯಂ ಸಹ।
ದೋಷಜ್ಞಾನಾದತೀತ್ಯೈತಾಂ (ತಾನ್) ವಿದ್ಯಯಾಽಮೃತಪ್ರಶ್ನುತೇ ||

ಯಾರು ಅವಿದ್ಯಾಕಲ್ಪಿತವಾದ, ಅವಿದ್ಯಮಾನವಾದ ಅರ್ಥವನ್ನು ಉಪಾಸನೆ ಮಾಡುತ್ತಾರೊ ಅವರು ಅಂಧಂತಮಸ್ಸನ್ನು ಪ್ರವೇಶ ಮಾಡುತ್ತಾರೆ. ಯಾರು ಈ ಅವಿದ್ಯಯನ್ನು ನಿಂದಾ ಮಾಡುವದಿಲ್ಲವೊ ಅವರು ಅವಿದ್ಯಯನ್ನು ಉಪಾಸನ ಮಾಡುವರಕ್ಕಿಂತಲೂ, ಅಧಿಕವಾಗಿಯೇ ತಮಸ್ಸನ್ನು ಹೊಂದುತ್ತಾರೆ. ಆದಕಾರಣ ಯಾವಾತನು, ವಿದ್ಯಯನ್ನೂ ಅವಿದ್ಯಯನ್ನೂ ಕೂಡ ಈ ಎರಡು ತಿಳಿಯುತ್ತಾನೋ ದೋಷಯುಕ್ತವೆಂದು ತಿಳಿಯಲ್ಪಟ್ಟ ಈ ಅವಿದ್ಯಯಿಂದ ದಾಟಿ, (ವಿದ್ಯಾಯಾಂ) ತತ್ವಜ್ಞಾನಗಳ ದ್ವಾರಾ ಮುಕ್ತಿಯನ್ನು ಹೊಂದುತ್ತಾನೆ.

ಯದ್ಯಪಿ ಸ್ವಶಾಸ್ತ್ರದಿಂದ ಉಂಟಾದ ಜ್ಞಾನವು ತತ್ವಜ್ಞಾನವಾಗಬೇಕಾದರೆ, ಕೇವಲ ಸ್ವಪಕ್ಷದಲ್ಲಿ ಪ್ರಮಾಣ ಹೇಳುವ ಮಾತ್ರದಿಂದ ಆಗಲಾರದು. ಆದಕಾರಣ, ಪರಪಕ್ಷ ಪ್ರಮಾಣವನ್ನು ಅವಶ್ಯವಾಗಿ ನಿರಾಕರಿಸಲೇಬೇಕು. ಪ್ರತಿಪಕ್ಷ ಭೂತವಾದ ಪರಪಕ್ಷ ಪ್ರಮಾಣದಿಂದ, ಸಹಿತವಾದ ಸ್ವಪಕ್ಷ ಪ್ರಮಾಣಗಳಿಗೆ ನಿರ್ಣಯಜನಕತ್ವವು ಬರಲಾರದು. ಆದಕಾರಣ ನಮ್ಮ ಶಾಸ್ತ್ರದಿಂದ ಉಂಟಾದ ಜ್ಞಾನವು ತತ್ವಜ್ಞಾನವೆಂದು ಇಚ್ಛೆಯುಳ್ಳ ಮನುಷ್ಯನಿಂದ, ಅವಶ್ಯವಾಗಿ ಸ್ವಪಕ್ಷ ಸಾಧನದಂತೆ ಪರಪಕ್ಷ ನಿರಾಕರಣವು ಮಾಡಿಯೇ ತೀರಬೇಕು. ಇದು ಯುಕ್ತಿ ಸಿದ್ಧಾಂತವಾದ ಮಾತು. ಆದಾಗ್ಯೂ ಆಗಮವನ್ನವಲಂಬಿಸಿ ಶಂಕೆಯನ್ನು ಮಾಡತಕ್ಕವನಿಗೆ, ಆಗಮದಿಂದಲೇವೆ ಬೋಧನ ಮಾಡತಕ್ಕದ್ದು. ಎಂಬ ಅಭಿಪ್ರಾಯದಿಂದ, ಶ್ರೀಮದಾಚಾರ್ಯರಿಂದ ಮೇಲೆ ವಿವರಿಸಿದ ಎರಡು ವೇದಮಂತ್ರಗಳು ಉದಾಹರಿಸಲ್ಪಟ್ಟಿವೆ. ಹೀಗೆ ಸರ್ವವೂ ನಿರ್ದುಷ್ಟವಾದಿತು. ಇದೇ ಅರ್ಥವನ್ನೇ ಶ್ರೀ ಜಗನ್ನಾಥದಾಸರು ಹರಿಕಥಾ ಮೃತಸಾರ ಸಂಧಿ (೧೬)ರಲ್ಲಿ.

"ಹೊತ್ತು ಹೊತ್ತಿಗೆ ಪಾಪಕರ್ಮ, ಪ್ರವರ್ತಕರ ನಿಂದಿಸದೆ ತನಗಿಂ।
ದುತ್ತುಮರ ಗುಣ ಕರ್ಮಗಳ ಕೊಂಡಾಡದಲೆಯಿಪ್ಪ ||
ಮರ್ತ್ಯರಿಗೆ ಗೋಬ್ರಾಹ್ಮಣ ಸ್ತ್ರೀ ಹತ್ಯ ಮೊದಲಾದಖಿಳ ದೋಷಗ।
ಳಿತ್ತಪನು ಸಂದೇಹಬಡಿಸಲ್ಲಖಿಳ ಶಾಸ್ತ್ರ ಮತ || ೯ ||

ಹೀಗೆ ಮೇಲೆ ವಿವರಿಸಿದಂತೆ, ಕುಶಾಸ್ತ್ರಗಳನ್ನು ನಿಂದಿಸುವದು. ಸ್ವಪಕ್ಷ ದಾರಢ್ಯಕ್ಕೆ ಸಾಧನವು. ಹೇಗಂದರೆ ಲೋಕದಲ್ಲಿ ಒಬ್ಬ ಉತ್ತಮ ನಡಾವಳಿಯ ಮನುಷ್ಯನು ತನ್ನ ಮಗನು ಕೆಟ್ಟ ಹುಡುಗರ ಸಹವಾಸದಲ್ಲಿ ಕೆಟ್ಟುಹೋಗುವನೆಂದು ಮರುಗಿ ಆ ಕೆಟ್ಟ ಹುಡುಗರಲ್ಲಿರತಕ್ಕ ಅನೇಕ ದುರ್ಗುಣಗಳನ್ನು ನಿಂದಿಸಿ, ಮಗನಿಗೆ ತಿಳಿಹೇಳಿ ಅಪ್ಪಾ ಆ ಕೆಟ್ಟ ಹುಡುಗರಲ್ಲಿ ಅನೇಕ ದುರ್ಗುಣಗಳುಂಟು ಅವರ ಜೊತೆಯಲ್ಲಿ ನೀನು ಅವರಂತೆ ಜಾರಚೋರನಾಗಿ ಉಡಾಳನಾಗುವನಲ್ಲದೇ ಪರಿಣಾಮ ಕೆಡಕಾಗಿ, ರಾಜದಂಡನಕ್ಕೆ ಅರ್ಹನಾಗುವಿ ಎಂದು ಆ ಕುಹಕರನ್ನು ನಿಂದಿಸಿ ತನ್ನ ಮಗುವನ್ನು ಸನ್ಮಾರ್ಗಕ್ಕೆ ಹಚ್ಚುವಂತೆ, ಅನ್ಯ ಕುಮತಗಳ, ನಿರಾಕರಣಪೂರ್ವಕವಾದ ಸಿದ್ಧಾಂತ ಜ್ಞಾನವೇ ಮೋಕ್ಷಕ್ಕೆ ಸಾಧನವಾಗುವದು. ಸಂಶಯ ಜ್ಞಾನವು ವಿನಾಶಕ್ಕೆ ಕಾರಣವಾಗುತ್ತದೆ. ಕಾರಣ ಪರಮತ ತತ್ವಗಳ ನಿರಾಕರಣಪೂರ್ವಕ ಸ್ವಮತ ಸಿದ್ಧಾಂತ ಜ್ಞಾನವೇ ಮುಖ್ಯವಾದದ್ದು.

## ಸರ್ವ ದರ್ಶನಗಳು ಏಕೇ ಗ್ರಾಹ್ಯವಲ್ಲ

ಹಿಂದೆ ಹೇಳಿದಂತೆ ಇನ್ನು ವೇದವನ್ನೊಪ್ಪದ ನಾಸ್ತಿಕ ಮತಗಳು. ಆರು, ೧ ಚಾರ್ವಾಕ, ಬೌದ್ಧರಲ್ಲಿ ೪ ಪಂಗಡ, ೨ ವೈಭಾಷಿಕರು, ೩ ಸೌತ್ರಾಂತಿಕರು, ೪ ಮಾಧ್ಯಮಿಕರು, ೫ ಯೋಗಚಾರರು, ೬ ಜೈನರು. ಈ ಆರು ಜನರು ವೇದವನ್ನು ನಿಂದಿಸಿದರು. ವೈದಿಕ ಕರ್ಮಗಳನ್ನು ತಿರಸ್ಕಾರ ಮಾಡಿದರು. ಮುಂದೆ.

ವೇದವನ್ನು ಪ್ರಮಾಣವೆಂದು ನಂಬಿದ, ವೈದೀಕ ಕರ್ಮಗಳಲ್ಲಿ ನಂಬಿಕೆಯುಳ್ಳವರು ಚಾರ್ವಾಕ ಮೊದಲಾದವರು ತಮ್ಮ ಯುಕ್ತಿಗಳಿಂದಲೇ ತಮ್ಮ ಸಿದ್ಧಾಂತವನ್ನು ಬಲಪಡಿಸಿದ ಕಾರಣ ವೇದಕ್ಕೆ ಸಮ್ಮಂಧಿಸಿದ ವಾದಿಗಳು ಸಹ ಯುಕ್ತಿಗಳಿಂದಲೇ ನಾಸ್ತಿಕಾದಿ ಮತಗಳನ್ನು ದೂಷಿಸಿ ತಮ್ಮ ಮತಗಳನ್ನು ಸ್ಥಾಪನೆ ಮಾಡುವ ಅತ್ಯಾವಶ್ಯಕತೆಯುಂಟಾದರೂ ಈ ಸಮಯದಲ್ಲಿ ವೈದೀಕ ವಾದಿಗಳೆಲ್ಲ ತಮ್ಮ ಮನಸಿನಂತೆ ಇದು ಪ್ರಮಾಣ ಅದು ಪ್ರಮಾಣವೆಂದು ತಮತಮಗೆ ಸಮ್ಮತವಾದ, ನಿಯಮಗಳನ್ನು ಏರ್ಪಡಿಸಿಕೊಂಡರು. ಹೀಗೆ ನಿಯಮಗಳಲ್ಲಿ ಭೇದಗಳುಂಟಾಗಿ ಅವುಗಳಿಂದ ಸಿದ್ಧವಾದ ಪ್ರಮೆಯಗಳಲ್ಲಿಯೂ ಪರಸ್ಪರ ಭೇದ ವಿರುದ್ಧಗಳುಂಟಾಗಿ ವೈದೀಕ ದರ್ಶನಗಳು ಅನೇಕಗಳಾದವು.

ವೈದೀಕ ಕೆಲವು ವಾದಿಗಳು ಯುಕ್ತಿಯಿಂದ ತತ್ವನಿರ್ಣಯ ಮಾಡಬೇಕೆಂದು ಆರಂಭ ಮಾಡುತ್ತ ವೇದಪ್ರಾಮಾಣ್ಯ ಸಾಧಿಸಬೇಕಾದ ಉದ್ದೇಶವುಳ್ಳವರಾದರೂ ಅನೇಕ ಸಂದರ್ಭದಲ್ಲಿ ವೇದಪ್ರಾಮಾಣ್ಯವನ್ನೇ ಬಿಟ್ಟುಬಿಡಬೇಕಾದಿತು. ಕಾರಣ ಈ ಹೊಸ ಮತಗಳು ಪೂರ್ವ ಸಂಪ್ರದಾಯಕ್ಕೆ ಅನುಗುಣವಾಗಲಿಲ್ಲ.

ಆಸ್ತಿಕ ದರ್ಶನಗಳಲ್ಲಿ ಆರು ಮತಗಳು ಪ್ರಸಿದ್ಧಿಗೆ ಬಂದವೆಂದು ಹಿಂದೆ ಹೇಳಿದೆ.

೧. ಗೌತುಮರ ನ್ಯಾಯ, ೨. ಕಣಾದರ ವೈಶೇಷಿಕ, ೩. ಕಪಿಲರ ಸಾಂಖ್ಯ, ೪. ಪತಂಜಲಿಗಳ ಯೋಗ, ೫. ಜೈನಮುನಿಗಳ ಪೂರ್ವ ಮೀಮಾಂಸಾ, ೬. ಶ್ರೀ ಬಾದರಾಯಣ ಭಗವಾನರ ಉತ್ತರ ಮೀಮಾಂಸಾ. ವೇದಾಂತಕ್ಕೆ ಸಮ್ಮಂಧಿಸಿದ ವೈದಿಕ ದರ್ಶನಗಳು, ಇವುಗಳೆಲ್ಲ ವೇದವನ್ನು ಪ್ರಮಾಣವೆಂದು ನಂಬುವದಾದುದರಿಂದ ಆಸ್ತಿಕ ದರ್ಶನಗಳೆಂದು ಕರೆಯಲ್ಪಟ್ಟವು. ಆದರೆ

ಯುಕ್ತಿ (ತರ್ಕ) ಶಾಸ್ತ್ರದಿಂದ ತತ್ವ ನಿರ್ಣಯ ಮಾಡುವ ಕಾಲದಲ್ಲಿ ಯುಕ್ತಿಯನ್ನು ಬಲಪಡಿಸಲು ಪ್ರಮಾಣವಾಗಿ ತೆಗೆದುಕೊಳ್ಳುವದೇ ವೇದಪ್ರಮಾಣವೆಂದು ಹೇಳುವದರ ಮುಖ್ಯ ಉದ್ದೇಶವಾದರೂ ಕೆಲವು ಆಸ್ತಿಕ ದರ್ಶನಗಳು ವೇದವನ್ನು ಸಂಪೂರ್ಣವಾಗಿ ನಂಬಿದಂತೆ ಕಾಣುವದಿಲ್ಲ. ಈ ಆಸ್ತಿಕ ದರ್ಶನಗಳಲ್ಲಿ ಕೆಲವು ದರ್ಶನಗಳಿಗೆ ಭಗವಂತನು ಇದ್ದಾನೆಂಬುದೇ ಸಮ್ಮತವಲ್ಲ. ಆಸ್ತಿಕ ಎಲ್ಲ ದರ್ಶನಗಳು ಸಾಮಾನ್ಯವಾಗಿ ವೇದ ಪ್ರಾಮಾಣ್ಯವನ್ನೊಪ್ಪಿದರೂ, ವೇದದ ಮುಖ್ಯೋಪಯೋಗವನ್ನು ಒಂದೇ ರೀತಿಯಾಗಿ ಹೊಂದಿರುವದಿಲ್ಲ.

(೧) ವೈಶೇಷಿಕರು, ಮತ್ತು ನೈಯ್ಯಾಯಿಕರು, ಯುಕ್ತಿ (ತರ್ಕ) ಯಿಂದ ಈಶ್ವರನಿರುವನೆಂದು ಹೇಳುವರು. (೨) ಸಾಂಖ್ಯರು ಈಶ್ವರನಿಲ್ಲವೆಂದು ಹೇಳುವರು. (೩) ಸಾಂಖ್ಯ ಯೋಗಿಗಳು ವೇದದ ಸಮ್ಮಂಧವೇ ಇಲ್ಲದೇ ಈಶ್ವರನನ್ನೇರ್ಪಡಿಸಿದರು.

ಇನ್ನು ಪೂರ್ವೋತ್ತರ ಮೀಮಾಂಸಾಗಳು ಸಾಕ್ಷಾತ್ತಾಗಿ ವೇದಕ್ಕೆ ಆಧೀನವಾದವುಗಳಾದರೂ, (೪) ಪೂರ್ವ ಮೀಮಾಂಸಾಕಾರರು, ಕರ್ಮಕ್ಕೆ ಪ್ರಾಧಾನ್ಯ ಹೇಳುತ್ತ ಈಶ್ವರನ ವಿಷಯದಲ್ಲಿ ಉದಾಸೀನರಾಗಿರುವರು.

ಉತ್ತರ ಮೀಮಾಂಸೆಯು ಶ್ರುತಿ ಪ್ರಮಾಣದ ಸಹಾಯವುಳ್ಳ ಯುಕ್ತಿಯ ಬಲದಿಂದ ಈಶ್ವರನಿರುವನೆನ್ನುವರು.

(೫) ಆದರೂ, ವೇದವನ್ನು ಪ್ರಮಾಣವೆಂದು ಒಪ್ಪಿದ ಮಾತ್ರದಿಂದ ಅದ್ವೈತ, ಶೈವ, ವಿಶಿಷ್ಟಾದ್ವೈತಗಳ ದರ್ಶನಗಳಿಗೆ, ವೇದ ವಿಚಾರಗಳಲ್ಲಿ ಸಂಪೂರ್ಣವಾಗಿ ಸರಿಯಾದ ವಿಚಾರಗಳೇ ಬರಲಿಲ್ಲ. ಪರಸ್ಪರ ವಿರೋಧವಾಗಿಯೂ, ವಿಭಿನ್ನಗಳಾಗಿಯೂ, ವೇದವಿರೋಧವಾಗಿಯೂ, ಯುಕ್ತಿ ವಿರೋಧವಾಗಿಯೂ ಇರುವವು. ಈ ಕು ಸಮಯಗಳು ಸರಿಯಾದವಲ್ಲವೆಂದು ತಿಳಿಸಿ, ಅನಾದಿ ಪೂರ್ವಸತ್‌ಸಂಪ್ರದಾಯವಾದ, ದ್ವೈತಮತ ತತ್ವಗಳನ್ನು ಶ್ರೀಮದಾಚಾರ್ಯರು ಸ್ಥಿರಪಡಿಸಿದರು.

(೬) ಬೌದ್ಧ ಜೈನಾಗಮೌ ಪೂರ್ವಪಕ್ಷೌ ಸರ್ವಾಗಮಸ್ಯಹಿ ।
ತತಃ ಪರಸ್ತಾಜ್ಜಾತೇಷು ಮತೇಷುಚ ಯಥಾ ಕ್ರಮಂ ॥
ಪೂರ್ವಃ ಪೂರ್ವಃ ಪಕ್ಷೋಯಾವನ್ಮಧ್ವಮತೋದಯಃ ॥
ಅಂತೇ ಸಿದ್ಧಸ್ತು ಸಿದ್ಧಾಂತೋ ಮಧ್ವಸ್ಯಾಗಮ ಏವಹಿ ॥

ನಿರ್ಣೀತುಂ ಶಕ್ಯತೇ ಯುಕ್ತಾಯುಕ್ತ ಪಕ್ಷ ವಿಮರ್ಶಿಭಿಃ ॥ ಅ(ತ)ಸ್ಮಾದು
ತ್ತರ ಪಕ್ಷೋನ್ಯೋ ಯಸ್ಮಾನ್ನಾದ್ಯಾಪಿ ದೃಶ್ಯತೆ ॥ ತಸ್ಮಾತ್ ಸಏವ
ಸಿದ್ಧಾಂತ ಇತಿ ನಿಶ್ಚಿತ್ಯ ಚೇತಸಾ ॥ ಇತ್ಯಾದಿ (ಯುಕ್ತಿ ಮಲ್ಲಿಕಾ)

ಇದರ ಸಾರಾಂಶ ವೇನಂದರೆ, ಬೌದ್ಧ ಜೈನಾದಿ (ಆಗಮ) ಸಮಯಗಳು. ಎಲ್ಲ ಮತಗಳಿಗೂ, ಪೂರ್ವದಲ್ಲಿಯೂ. ಮತ್ತು ಪೂರ್ವಪಕ್ಷ ರೂಪವಾಗಿಯೂ ಇರುವವು ಆತರು ವಾಯು ಹಿಂದಿನಿಂದ ಕ್ರಮವಾಗಿ ಪ್ರಚಲಿಸಿದ ಎಲ್ಲ ಮತಗಳು. ಹಿಂದೆ ಪ್ರಚಲಿಸಿದ ಎಲ್ಲ ಮತಗಳಿಗೆ ಮುಂದೆ ಪ್ರಚಾರವಾದ ಮತಗಳು ಮಧ್ವಮತೋದಯ ಪರ್ಯಂತ ಪೂರ್ವ ಪಕ್ಷವಾಗಿಯೇ ಇರುವವು. ಯುಕ್ತಾಯುಕ್ತ ಪಕ್ಷಗಳ ವಿಮರ್ಶ ಪೂರ್ವಕ ನಿರ್ಣೈಸಿದ ಸಿದ್ಧಾಂತವು. ಎಲ್ಲ ಮತಗಳ ಅಂತ್ಯ (ಕೊನೆಗೆ) ನಿರ್ಣಯಿಸಿದ ಸಿದ್ಧಾಂತವು ಮಧ್ವಾಗ ಮವು ಮಧ್ವಮತದ ಸಿದ್ಧಾಂತವು ಈ ಮಧ್ವಾಚಾರ್ಯರುದ್ಯೈನ್ವತ ಸಿದ್ಧಾಂತಕಾರರಾದ ಮೇಲೆ ಯಾರೂ ಮತಪ್ರವರ್ತಕ ಭಾಷ್ಯಕಾರರಾಗಿಲ್ಲ. ವೇದಗಳಿಂದಲೂ ಪ್ರಮಾಣ ದಿಂದಲೂ ನಿರ್ದುಷ್ಟವಾದ ಸಯುಕ್ತಿಗಳಿಂದಲೂ, ಅನ್ಯರಿಂದ ನಿರಾಕರಿಸಲಶಕ್ಯವಾದ ಸಿದ್ಧಾಂತವಿದು. ಕಾರಣ ಮಧ್ವಮತ ದ್ವೈತತತ್ವಗಳೆ ಮುಖ್ಯಸಿದ್ಧಾಂತವೆಂದು. ಶ್ರೀಸ್ವಾದೀ ಗುರುರಾಜರು ಯುಕ್ತಿ ಮಲ್ಲಿಕಾಗ್ರಂಥದಲ್ಲಿ. ಹೇಳಿರುವರು. ಆಸ್ತಿಕ ಮತಗಳೆಂದು. ಇತರ ಮತಗಳನ್ನು ಸರ್ವಥಾನಂಬಲಿಕ್ಕಾಗದು.

ಶ್ರೀಸರ್ವಜ್ಞರು, ಶ್ರೀಬಾದರಾಯಣ ದೇವರಿಗೆ ಸಮ್ಮತವಾಗಿ, ಅವರುರಚಿಸಿದ ಬ್ರಹ್ಮಸೂತ್ರಗಳಕ್ರಮದಂತೆ ಬ್ರಹ್ಮಸೂತ್ರಭಾಷ್ಯ ದ್ವಿತಿಯಾ ಧ್ಯಾಯ, ಮತ್ತು ಅನು ವ್ಯಾಖ್ಯಾನಎರಡನೇ ಅಧ್ಯಾಯದಲ್ಲಿ ಎಲ್ಲ ಕುಶಾಸ್ತ್ರಗಳನಿರಾಕರಣೆ ಮಾಡಿರುವರಲ್ಲದೆ. ಎರ ಡನೇ ಅಧ್ಯಾಯ ಸಮಯ ಪಾದದಲ್ಲಿ ಸಮಗ್ರವಾಗಿ ಎಲ್ಲ ಕುಮತಗಳನ್ನು ಖಂಡಿಸಿ ಸತ್ಪಕ್ಷ ವನ್ನು ಸಾಧಿಸಿರುವ. ಅದರಂತೆ ಭಾಷ್ಯ ಪ್ರವಚನಮಾಡಿ ತ್ರಿವಿಕ್ರಮ ಪಂಡಿತಾಚಾರ್ಯ ರೊಡನೆ ವಾದಮಾಡಿಗೆಲ್ದುರು. ಈ ಶ್ರೀಸರ್ವಜ್ಞರ ಚರಿತ್ರಾತ್ಮಕ ಮಹಾ ಕಾವ್ಯದಲ್ಲಿ ಶ್ರೀಮ ನ್ನಾರಾಯಣ ಪಂಡಿತಾಚಾರ್ಯರು, ಬ್ರಹ್ಮಸೂತ್ರಭಾಷ್ಯ ದ್ವಿತಿಯಾಧ್ಯಾಯ ಮೇಲ್ಪಂಕ್ತಿ ಯನ್ನೇ ಹಿಡಿದು ಸಾಧಾರಣವಾಗಿ, ಮತಗಳ ಪ್ರಕ್ರೀಯವನ್ನು ಹೇಳಿರುವರು.

ಸಾಮಾನ್ಯವಾಗಿ ಹಿಂದಿನ ಇತರ ಕೆಲವು ಗ್ರಂಥಗಳಲ್ಲಿ ಚಾರ್ವಾಕ ಬುದ್ಧ ಜೈನಾದಿ ನಾಸ್ತಿಕ ಮತಗಳ ವಿಚಾರ ಹೇಳುತ್ತ ನಂತರ ಆಸ್ತಿಕ ಮತಗಳನ್ನು ಉದಾಹರಿಸಿರುವರು. ಎದ್ಯಪಿ ಚಾರ್ವಾಕರ ಮತದೂಷಣೆಯು ಬೌದ್ಧಾದಿ ಗ್ರಂಥಗಳಲ್ಲಿ ಕಂಡುಬರುತ್ತದೆ. ಆ ಬೌದ್ಧಾದಿ ಮತಗಳ ನಿರಾಕರಣೆಯು, ಇತರ ಅದ್ವೈತಾದಿ ಮತಗಳಲ್ಲಿ ಕಂಡುಬರುತ್ತದೆ. ಹೀಗೆ ಪಾರಂಪರ್ಯದಿಂದ ಕಾಲವಿವಿಕ್ಷಾದಿಂದ ಚಾರ್ವಾಕಾದಿ ಮತಗಳು ಪ್ರವರ್ತಕ ವಾದರೂ, ಈ ಮತಗಳು ಕ್ರಮವಾಗಿ, ಭಾಷ್ಯದಲ್ಲಿ ಸರ್ವಜ್ಞರು ಹೇಳಲಿಲ್ಲ.

ಬ್ರಹ್ಮಸೂತ್ರ ಭಾಷ್ಯ ಅನುವ್ಯಾಖ್ಯಾನದಲ್ಲಿ ಶ್ರೀಬಾದಾರಾಯಣ ಪ್ರಣೀತ ಸೂತ್ರ ಗಳನುಸರಿಸಿ ಮತ ಪ್ರಕೀಯೆಗಳನ್ನು ಹೇಳಿರುವಂತೆ ಸಾಮಾನ್ಯ ಈ ಸುಮಧ್ವವಿಜಯಕಾವ್ಯ

ದಲ್ಲಿಯೂ ಮತಗಳ ಪ್ರಕ್ರಿಯೆಯನ್ನು ಹೇಳಿರುವರು. ಅದರಕ್ರಮವೇನಂದರೆ. ಆಸ್ತಿಕ ನಾಸ್ತಿಕರಲ್ಲಿ, ಈಶ್ವರನನ್ನು ಒಪ್ಪದ ಮೊದಲಿಗೆ ಮಹಾಪ್ರಬಲರಾದ

(೧) ನಿರೀಶ್ವರಸಾಂಖ್ಯ (೨) ಸೇಶ್ವರಸಾಂಖ್ಯ (೩) ಚಾರ್ವಾಕ, (೪) ಚೇತನೋಪಸರ್ಜನ ನಿರೀಶ್ವರ ಸಾಂಖ್ಯ, (೫) ಪ್ರಕೃತಿ ಪ್ರಧಾನೋಪಸರ್ಜನ ನಿರೀಶ್ವರ ಸಾಂಖ್ಯ, ಇವೆಲ್ಲ ಚಾರ್ವಾಕ ನಾಸ್ತಿಕ ಮತಕ್ಕೆ ಸಮವೆಂದು, ಕ್ರಮವಾಗಿ ಹೇಳಿರುವರು. ಸುಮಧ್ವ ವಿಜಯದಲ್ಲಿಯೂ ಇದೆ ಕ್ರಮವಾಗಿ ೯ನೇ ಶ್ಲೋಕದಿಂದ ೧೩ ಶ್ಲೋಕದವರಿಗೆ ಈ ಮತಗಳನ್ನು ನಿರಾಕರಿಸಿರುವರು, ಇದರಲ್ಲಿ ಈಶ್ವರನನ್ನೊಪ್ಪದ ೬ ಭಾಟ್ಟ, ೭ ಪ್ರಭಾಕರ ಮತವಾದರೂ ನಿರಾಕರಣವಾಡಿತು. ೧೪ನೇ ಶ್ಲೋಕದಲ್ಲಿ ಬ್ರಹ್ಮನೇ ಜಗದ್ರೂಪನಾಗಿ ಪರಿಣಮಿಸುವನೆಂದು ಪೇಳಿದ, ಅದ್ವೈತ ಪ್ರಭೇಧವಾದ ಭಾಸ್ಕರನ ಮತ ನಿರಾಕರಣಮಾಡುತ್ತ (೯) ಈಶ್ವರನಿಗೆ ಜಗತ್ಕರ್ತೃತ್ವನ್ನೊಪ್ಪದ, ಪಶುಪತಿ (ಶೈವ) ಗಣಗತಿ ಸೂರ್ಯಸ್ಕಂದ ಶಾಕ್ತೇಯ, ಶೈವ ಮೊದಲಾದವರ ಮತವನ್ನು ನಿರಾಕರಣ ಮಾಡಿರುವರು. ಸರ್ವಜ್ಞರು. ಬ್ರ, ಸೂ, ಭಾ, ಅ ೨, ಪಾದ ೨ ಅಧಿಕರಣ (೧೧-೧೨) ರಲ್ಲಿ ಜೈನಮತ ಪ್ರಕ್ರಿಯೆ ಆದಿಂದ ನಿರಾಕರಣ ಮಾಡಿದ್ದಾರೆ. (ಇಲ್ಲಿ ಸಜ್ಜನರ ವಿಚಾರಂಶವಾಗಿದೆ.)

ಮುಂದೆ ೧೬ನೇ ಶ್ಲೋಕ ಆರಂಭಿಸಿ ೨೩ನೇ ಶ್ಲೋಕದವರೆಗೆ (೧೦) ವೈಶೇಷಿಕ (೧೧) ನೈಯ್ಯಾಯಕರಾದ, ಪರಮಾಣು ಅಭ್ಯುದಯ ವಾದಿಗಳ ಮತವನ್ನು, ಬ್ರಹ್ಮ ಸೂ. ಭಾ. ಅ (೨) ಪಾದ (೨) ಅಧಿಕರಣ ಆರು (೬)ರಲ್ಲೇ ಹೇಳಿದಂತೆ ಹೇಳಿ ನಿರಾಕರಿಸಿರುವರು.

ಈ ಮತವನ್ನು ಪೋಲುವ ಬೌದ್ಧಮತ ಪ್ರಕ್ರಿಯಾ ಪರಮಾಣು ಪುಂಜವಾದಿಗಳಾದ ವೈಭಾಷಿಕ, ಮತ್ತು ಸೌತ್ರಾಂತಿಕ ಯೋಗಚಾರ ಪ್ರಭೇದಗಳನ್ನು ಅಧಿಕರಣ (೭) ರಲ್ಲೇ ವಿವರಿಸಿರುವರು. ಇದನ್ನು ಮಧ್ವವಿಜಯದಲ್ಲಿ ವಿಸ್ತಾರವಾಗಿ ಹೇಳದಿದ್ದರೂ ಅಕಡವಾಗಿವೆ. ಭಾಷ್ಯಕ್ರಮದಂತೆ

ಮುಂದೆ ಶ್ಲೋಕ ೨೪ ರಿಂದ ೪೨ ವರೆಗೆ, (೧೨) ಮಾಧ್ಯಮಿಕ ಬೌದ್ಧ ಶೂನ್ಯವಾದ, ಮತ್ತು ಇದಕ್ಕೆ ಸಮಾನವಾಗಿರುವ (೧೩) ಮಾಯಾವಾದ (ಅದ್ವೈತಿಗಳ) ಮತಗಳನ್ನು ವಿಸ್ತಾರವಾಗಿ ನಿರಾಕರಣ ಮಾಡುತ್ತ ಶ್ಲೋಕ ೪೧ರಲ್ಲಿ ಬೌದ್ಧ ಪಂಗಡ (೧೪) ವಿಜ್ಞಾನವಾದ, (೧೫) ವೈಯ್ಯಾಕರಣಿಗಳ ಸ್ಫೋಟವಾದವನ್ನು ನಿರಾಕರಿಸಿರುವರು.

## ವೇದ ಅಪೌರುಷೇಯತ್ವ

ಮುಂದೆ ಶ್ಲೋಕ ೪೩ ರಿಂದ ಆರಂಭ ಮಾಡಿ ೪೭ನೇ ಶ್ಲೋಕ ವರೆಗೆ ವೇದವೇ ಸುಳ್ಳೆನ್ನುವ ಚಾರ್ವಾಕ, ಬುದ್ಧ ಜಿನಾದಿಗಳ ಮತ್ತು ವೇದವನ್ನೊಪ್ಪಿದರೂ ಅದಕ್ಕೆ ಸರಿಯಾಗಿ ಅರ್ಥ ಮಾಡದೇಯಿದ್ದ ಎಲ್ಲ ಮತಗಳು ಇನ್ನು ವೇದ ವಿರುದ್ಧಾಚರಿಸುವ ಕೆಲ ಮತಗಳ ನಿರಾಕರಣಪೂರ್ವಕ, ವೇದಕ್ಕೆ ಅಪೌರುಷೇಯತ್ವ ಸಾಧಿಸಿ, ವೇದವೇ ಮುಖ್ಯ ಪ್ರಮಾಣವೆಂದು ಸಮರ್ಥನ ಮಾಡಿರುವರು.

## ಮೋಕ್ಷ ಸ್ವರೂಪ ತನ್ನಿರ್ಣಯ

ಬ್ರಹ್ಮಸೂತ್ರ ಭಾಷ್ಯದಲ್ಲಿ ಆಯಾ ಮತಗಳ ಪ್ರಕ್ರಿಯುಗಳೊಂದಿಗೆ ಅಲ್ಲಲ್ಲೆ. ಮೋಕ್ಷ ಸ್ವರೂಪ ಹೇಳುತ್ತಾ ನಿರಾಕರಿಸುತ್ತಾರೆ. ಆದರೆ ಈ ಸುಮಧ್ವ ವಿಜಯದಲ್ಲಿ ಶ್ಲೋಕ ೪೮ ರಿಂದ ಶ್ಲೋಕ ೬೩ ವರೆಗೆ ಮಾಯಾವಾದಿಗಳು, ವೈಶೇಷಿಕಾದಿಗಳು ಹೇಳುವ ಮುಕ್ತಿಯು ಕೂಡುವದಿಲ್ಲವೆಂದು ಸಯುಕ್ತಿಗಳಿಂದ ಖಂಡಿಸುತ್ತಾ ಜೀವರು ಮುಕ್ತಿಯಲ್ಲಿ ನಿರ್ದುಃಖಿಗಳಾಗಿ ಸ್ವ ಸ್ವರೂಪಾನಂದ ಸುಖವನ್ನು ಚಿನ್ಮಯ ದೇಹಕರಣಗಳಿಂದಲೇ ಅನುಭೋಗಿಸುವರು. ಇಂಥ ಮೋಕ್ಷ ಸುಖವನ್ನು ಕೊಡುವನಾದರೂ ಅಧೋಕ್ಷಜನೇ ಅನ್ಯರಾರಿಲ್ಲವೆಂದು ಸಮರ್ಥನ ಮಾಡಿರುವರು. ಮುಂದೆ ಆಚಾರ್ಯಕೃತ ಗ್ರಂಥಮಹಿಮಾ, ಶ್ರೀ ವಿಷ್ಣುತೀರ್ಥರ ಮಹಿಮಾ, ಶ್ರೀ ಪದ್ಮನಾಭತೀರ್ಥರ ಮಹಿಮಾ ಉಡುಪಿ ಅಷ್ಟಮಠ ಸ್ವಾಮಿಗಳ ಸಂಕ್ಷಿಪ್ತ ಚಾರಿತ್ರ ಹೇಳಿ ಮಂಗಳ ಮಾಡಿರುವರು.

ಇಂತು ಹದಿನೈದನೆ ಸರ್ಗಸಾರ ಶ್ರೀ ಮಧ್ವೇಶಾರ್ಪಿತವು.

---

## ಶ್ರೀ ಮಧ್ವಮತ ಮಹಿಮಾ ಸುಳಾದಿ

ಧ್ರುವ ತಾಳ .

ಒಬ್ಬ ಆಚಾರಿಯಾನೆ ದೈವವೆ ಇಲ್ಲವೆಂಬಾ ।
ಒಬ್ಬ ಆಚಾರಿಯಾನೆ ದೈವ ಕೆಂಟಿ ಗುಣವೆಂಬಾ ;
ಒಬ್ಬ ಆಚಾರಿಯಾನೆ ನಿರ್ಗುಣ ನಿರಾಕಾರ ನಿರವಯವೆಂದು,
ಮಬ್ಬಿಸಿಂ ಕಡೆಯಲಿ ತಾನೆ ದೈವವೆಂಬ ರವ ।
ರೊಬ್ಬರು ವೇದಾರ್ಥ ವರಿತು ವರಿಯಾರು, ಇವ ।
ರೊಬ್ಬಾರು ಶಾಸ್ತ್ರಾರ್ಥ ವರಿತು ವರಿಯಾರು ।
ಒಬ್ಬ ಮಧ್ವಾಚಾರಿಯಾರೆ ಪುರಂದರ ವಿಠಲನ್ನ ।
ಅಬ್ಬರ ದೈವವೆಂದು ತೋರಿ ಕೊಟ್ಟರಾಗಿ ॥ ೧ ॥

ಮಟ್ಟ ತಾಳ

ಹರಿ ಪರ ದೇವತಿ ಎಂಬ ಜ್ಞಾನವೆ ಜ್ಞಾನಾ ।
ಹರಿ ಅಡಿಗಳ ನೈದುವ ಭಕುತಿಯೆ ಮುಕುತಿ ।
ಹರಿ ವಿರಹಿತ ಜ್ಞಾನಾ ಮಿಥ್ಯ ಜ್ಞಾನಾ ।
ಹರಿ ವಿರಹಿತ ಮುಕುತಿ ಮಾತಿನ ಮುಕುತಿ ।
ಶಿರಿ ಮಧ್ವಾಚಾರ್ಯರೆ ಗುರುಗಳು ತ್ರೈಲೋಕಕ್ಕೆ ।
ಪುರಂದರ ವಿಠಲ ರಾಯನ ತೋರಿ ಕೊಟ್ಟರಾಗೆ ॥ ೨ ॥

### ತ್ರಿವಿಡಿ ತಾಳ

ಸೋಽಹಂ ಎಂತೆಂದು ಈ ಲೋಕವ ।
ಮೋಹಿಸುವರ ನಿರಾಕರಿಸಿ, ದಾ ।
ಸೋಽಹಂ ಎಂಬ ರಹಸ್ಯವ ನರುಪಿ ದಾ ।
ಸೋಽಹಂ ಎಂಬಾ ಸಿರಿ ಪುರಂದರ ವಿಠಲ ನಾಳು, ದಾ ।
ಸೋಽಹಂ ಎಂಬಾ ನಮ್ಮ ಮಧ್ವ ಮುನಿರಾಯ || ೩ ||

### ಅಟ್ಟ ತಾಳ

ಮರ ಯುಲವದ ಫಲಿಸಿರೆ ।
ಸುರತರು ಫಲಿಸಿಪ್ಪಂತೆ ।
ಗುರುಗಳಾದರು ನೋಡಾ ।
ಸಿರಿ ಪುರಂದರ ವಿಠಲನ್ನ ।
ನಿರೆ ತೋರಿದ ಮಧ್ವಾಚಾರ್ಯರು ।
ಗುರುಗಳಾದರು ನೋಡಾ || ೪ ||

### ಏಕ ತಾಳ

ವೈದಿಕ ಮತದಲ್ಲಿ ನಡದೆ ವೆಂದು ತಾವು ।
ವೈದಿಕ ವಂ ಬಿಟ್ಟು ಕೊಟ್ಟಾರು ಕೆಲವರು ।
ವೈಷ್ಣವ ಮತದಲ್ಲಿ ನಡದೆ ವೆಂದು ತಾವು ।
ವೈಷ್ಣವಂಬಿಟ್ಟು ಕೊಟ್ಟಾರು ಕೆಲವರು ।
ವೈದಿಕ ವೈಷ್ಣವ ವಂದೆ ಎಂದೂ ।
ಮಧ್ವಮುನಿ ಪ್ರತಿಪಾದಿಸಿದ ಪುರಂದರ ವಿಠಲ ಮೆಚ್ಚೆ || ೫ ||

### ರೂಪಕ ತಾಳ

ಹರಿ ಪರ ಮಗುರು ಪರಮೇಷ್ಟಿ ಗುರು ।
ಸುರ ಗುರು ಮಧ್ವಾಚಾರ್ಯ ಚಕ್ರವರ್ತಿ ।
ಪುರಂದರ ವಿಠಲನ್ನ ದಯದಿಂದ || ೬ ||

### ಜತ್ತೆ

ಪುರಂದರ ವಿಠಲಾಗೆ, ಗುರು ಮಧ್ವಾಚಾರ್ಯರಿಗೆ ।
ಶರಣು ಶರಣೆಂಬೆನೊ, ಅನವರತಾ || ೭ ||

ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು.

---

॥ ಶ್ರೀಲಕ್ಷ್ಮೀ ನರಸಿಂಹ ಪ್ರಸೀದ ॥

॥ ಶ್ರೀಗುರು ರಾಜೋವಿಜಯತೇ ॥

# ಶ್ರೀ ಸುಮಧ್ವ ವಿಜಯ

## ಅಥ ಪಂಚದಶಃ ಸರ್ಗಃ

ಕುಡಿಲು ದೇವಾಲಯದಲ್ಲಿ ಶ್ರೀಮದಾಚಾರ್ಯರು ಮಾಡಿದ, ಉಪನ್ಯಾಸ ಸಕಲ ಮತಗಳ ನಿರಾಕರಣ ಪೂರ್ವಕ ಶ್ರೀ ತ್ರಿವಿಕ್ರಮ ಪಂಡಿತಾರ್ಚರೊಡನೆ ಮಾಡಿ ವಾದದಲ್ಲಿ ಶ್ರೀ ತ್ರಿವಿಕ್ರ ಪಂಡಿತರನ್ನು ಸೋಲಿಸಿ ಶಿಷ್ಯರನ್ನು ಮಾಡಿಕೊಳ್ಳುವಿಕೆ.

**ಶ್ಲೋಕ ॥ ಭಯೋ ಬೋಧಸ್ತತೋ ಭೂಯೋ**
**ವ್ಯಾಚಖ್ಯೌ ಭಾಷ್ಯ ಮಾಧ್ಭುತಮ್ ॥**
**ಗಾಮೇಗ್ರಾಮಿಣಿ ಸಾಮಾನ್ಯೇ ।**
**ವಸಂಸ್ತತ್ರಾಮರಾಲಯೇ ॥ ೧ ॥**

( ಪಥ್ಯಾವಕ್ರಂ ವೃತ್ತ ) ಶ್ಲೋಕ ( ೧ ) ರಿಂದ (      ) ವರಿಗೆ.

ಭಾಮಿನಿ ॥ ವಿಷ್ಣು ಮಂಗಳ ದೇವ ಸವನದ ।
ಲಿಷ್ಟ ಕೆಲದಿನ ವಿದ್ದು ಮೇಲ್ಸಂ ।
ತುಷ್ಟ ಭೂಯೋಬೋಧ ರಾಗ್ರಾಮದಲಿ ಗ್ರಾಮಣಿಗೆ ॥
ಪ್ರೇಷ್ಟ ಸಾಮಾನ್ಕುಡಿಲು ಗುಡಿಯಲಿ ।
ಥೇಷ್ಟ ವಾಸಿಸಿ ತಾಂ ರಚಿತ ಭೂ ।
ಯಿಷ್ಟ ಸೂತ್ರದ ಭಾಷ್ಯ ಪ್ರವಚನ ಪುನಹಮಾಡಿದರ್ಕೆ ॥೧॥ ೮೦೧॥

ಭಾವಾರ್ಥ:— ವಿಷ್ಣು ಮಂಗಳ ಗ್ರಾಮದ ದೇವಾಲಯದಲ್ಲಿ ಇಷ್ಟ= ಶ್ರೀಹರಿ ಪ್ರೀತ್ಯರ್ಥವಾಗಿ, ಅಥವಾ ಶ್ರೀಹರಿ ಸೇವೆಗೆ ಕೆಲವು ದಿವಸ ವಾಸ ಮಾಡಿ ಸತ್ಕರ್ಮ ಗಳನ್ನಾಚರಿಸುತ್ತಾಯಿದ್ದ ಮೇಲೆ, ಸಜ್ಜನರ ಹಿತಾರ್ಥ ಸತ್ಕರ್ಮಾಚರಣೆಯಿಂದ, ಸಂತುಷ್ಟ= ಶ್ರೀ ಹರಿಯ ಪ್ರೀತಿಯೆಂದು ತಿಳಿದ, ಭೂಯೋಭೋಧ= ಭೂಯಾನ್,

ಪೂರ್ಣಭೋಧಯಸ್ಯಸ:, ಶ್ರೀಪೂರ್ಣ ಪ್ರಜ್ಞರು, ಆ ವಿಷ್ಣು ಮಂಗಳ ಗ್ರಾಮದಲ್ಲಿರುವ, ಎಲ್ಲ ಗ್ರಾಮದ ಜನರಿಗೆ ಪ್ರೇಷ್ಟ= ಪ್ರೀತ್ಯಾಸ್ಪದ ವಾದುದು. ಸಾಮಾನ್ಯ= ಸಾಧಾರಣವಾಗಿ ಎಲ್ಲಜನರಿಗೆ ಸೇರಲು ಅವಕಾಶ ವಿರುವ ಎರಡನೆಯ, ಕುಡಿಲ್ ಎಂಬ ದೇವಾಲಯದಲ್ಲಿ ಯಥೇಷ್ಟೇ= ತಮ್ಮ ಮನಸಿನಂತೆ ವಾಸ ಮಾಡುತ್ತ ತಾವು ರಚಿಸಿದ ಬ್ರಹ್ಮ ಸೂತ್ರಗಳ, ಭೂಯಷ್ಟ= ಅದ್ಭುತವಾದ ಆಶ್ಚರ್ಯಕರವಾದ ಬಹು ಪ್ರಮೆಯ ಉಳ್ಳ ದ್ವೈತ ಭಾಷ್ಯವನ್ನು ಪುನಹ ಮತ್ತು ಉಪನ್ಯಾಸ ರೂಪ ಹೇಳುತ್ತ ಉಪದೇಶ ಮಾಡಿದರು. ವಿಷ್ಣು ಮಂಗಳ ದೇವಸ್ಥಾನವು ಚಿಕ್ಕಧಾಗಿರುವದರಿಂದ ಶ್ರೀಮಧ್ವರ ವ್ಯಾಖ್ಯಾನ ಕೇಳಲು ಬಹುಜನರು ಸೇರುವ ಕಾರಣದಿಂದ ಕುಡಿಲ ಗುಡಿ ಬಹು ದೊಡ್ಡದು ಸಾಮಾನ್ಯ ಎಲ್ಲ ಜನರಿಗೆ ಸೇರಲು ಅವಕಾಶ ವಿದ್ದುದರಿಂದ ಆ ದೊಡ್ಡ ಎರಡನೇ ಕುಡಿಲ ದೇವಾಲಯದಲ್ಲಿಯೇ ಉಪನ್ಯಾಸ ಹೇಳಿದರೆಂದು ತಾತ್ಪರ್ಯ.

**ಶ್ಲೋಕ ||** **ಪರ (ಪ್ರತಿ) ಪಕ್ಷರಥಾರೂಢಂ**
**ಖರತರ್ಕ ಮಹಾಯುಧಂ**
**ತ್ರಿವಿಕ್ರಮಾರ್ಯಂ ಸೋಽಪಶ್ಯತ್**
**ಪ್ರತಿವೀರ ಮಿವಾಗ್ರತಃ** || ೨ ||

ಭಾಮಿನಿ || ಭರದಿ ಮಧ್ವರು ತಮ್ಮ ಎದುರಿಲಿ |
ಪರರ ಪಕ್ಷನೊ ರಥದಿ ಕುಳಿತಿಹ |
ಖರತರದ ಮಹ ತರ್ಕ ತೀಕ್ಷಣ ಯುಕ್ತಿ ಆಯುಧವ ||
ಧರಿಸಿರುವ ವರ ತ್ರಿವಿಕ್ರಮಾರ್ಯರ |
ನಿರುತ ಅದ್ವೈತಾವಲಂಬಿಯ |
ಖರೆಯ ಪ್ರತಿಭಟತೆರದಿ ನೋಡಿದರಂದು ವೀರವರ || ೨ || ೯೧೧||

ಭಾವಾರ್ಥ:— ಭರದಿ,= ಭಾಷ್ಯ ಪ್ರವಚನ ಮಾಡುವ ಕಾಲದಲ್ಲಿ ತ್ವರದಿಂದ ಶ್ರೀಮದಾಚಾರ್ಯರು, ತಮ್ಮ ಎದುರಿಗೆ ಕುಳಿತ ತ್ರಿವಿಕ್ರಮ ಪಂಡಿತರು, ಪರರ ಪಕ್ಷದ, ರಥದಿ ಕುಳಿತು, ತಮ್ಮ ದ್ವೈತಸಿದ್ಧಾಂತವಲ್ಲದ ಎರಡನೇ ಪಕ್ಷ, ಅದ್ವೈತ ಸಿದ್ಧಾಂತವೆಂಬ, ರಥವನ್ನು ಆಶ್ರಯ ಮಾಡಿ= ರಥವನ್ನೇರಿ, ಖರತರದ ಮಹತರ್ಕ,= ಭಹು ತೀಕ್ಷಣವಾದ ಪ್ರಬಲತರವಾದ ಯುಕ್ತಿಗಳೆಂಬ ಶ್ರೇಷ್ಠ ಆಯುಧವನ್ನು ಧಾರಣ ಮಾಡಿಕೊಂಡಿರುವ, ನಿತ್ಯದಲ್ಲಿ ಅದ್ವೈತ ಮತವನ್ನೇ ಅವಲಂಬಿಸಿ= ಆಶ್ರಯ ಮಾಡಿದ, ಆ ತ್ರಿವಿಕ್ರಮ ಪಂಡಿತ ಶ್ರೇಷ್ಠರನ್ನು, ತಮಗೆ ಎದುರಾಗಿ ಯುದ್ಧ ಮಾಡಲಿಕ್ಕೆ ಬಂದ ಪ್ರತಿಭಟ=ವಿರುದ್ಧ

ಪಕ್ಷದ ವೀರನಂತೆಯೇ, ವೀರವರ= ಜ್ಞಾನ ಬಲಜೇಷ್ಟ ಶ್ರೇಷ್ಠರಾದ ಶ್ರೀ ಮಧ್ವಾಚಾರ್ಯರು ನೋಡಿದರು.

ತಾತ್ಪರ್ಯ= ಶ್ರೀಮಾನ್ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ದೃಢವಾಗಿ ಹೇಳುತ್ತ, ಪರಸಿದ್ಧಾಂತವಾದ ಅದ್ವೈತವನ್ನು ನಿರಾಕರಣ ಮಾಡುವ ಸಮರ್ಥರಾದ ಶ್ರೀ ಪೂರ್ಣಪ್ರಜ್ಞರು, ತಮ್ಮ ಪಕ್ಷ ವಿರುದ್ಧವಾದ ಪರಪಕ್ಷವಾದ ಅದ್ವೈತ ಪಕ್ಷಾವಲಂಬಿಗಳಾಗಿ, ಅತಿ ತರ್ಕ= ಕರ್ಕಶ ಯುಕ್ತಿಗಳನ್ನು ಹೇಳ್ವ, ತಮ್ಮೆದುರಿಗೆ ಕುಳಿತ ತ್ರಿವಿಕ್ರಮ ಪಂಡಿತಾಚಾರ್ಯರನ್ನು ನೋಡಿ ಯಾವ ಪ್ರಕಾರವಾಗಿ ಪ್ರತಿಭಟನಾದ ವೈರಿಯು, ರಥವನ್ನೇರಿ ಅನೇಕ ಹದನಾದ ಅಸ್ತ್ರಗಳನ್ನು ಕೈಲಿ ಹಿಡಿದು ತನ್ನ ಕೂಡ ಯುದ್ಧ ಮಾಡಲು ಬಂದ ಪ್ರತಿಭಟನನ್ನು ವೀರ ವರನು ಹೇಗೆ ನೋಡುವನೋ ಅದರಂತೆಯೇ ತ್ರಿವಿಕ್ರಮರನ್ನು ನೋಡಿದರೆಂತ ಭಾವ.

**ಶ್ಲೋಕ ॥ ತದಾ ತದಾನನಾಂ ಭೋಜಾ**
**ದ್ವೃತ್ತೋಪನ್ಯಾಸ ಭಾರತೀ ॥**
**ಸೇನಾ ಸೇನಾಗ್ರಹಾದಿವ್ಯಾ ।**
**ಶಿಬಿರಾದಿವ ನಿರ್ಯಯೌ ॥ ೩ ॥**

ಭಾಮಿನಿ ॥ ಕವಿ ತ್ರಿವಿಕ್ರಮ ಮಧ್ವ ಪ್ರವಚನ ।
ಶ್ರವಣ ಮಾಡುವಕಾಲ ನಡೆದದು ।
ವಿವರ ವದ್ಭುತ ಸರ್ವಜಗ ಸೃಷ್ಟ್ಯಾದಿ ಕರ್ತೃಹರೆ ॥
ಪ್ರವರ ದೃಢಉಪನ್ಯಾಸ ಭಾರತಿ ।
ದ್ರವಿಣರಾನನ ಕಮಲ ನಿರ್ಗತ ।
ಜವ ಶಿಬಿರದಿಂ ಸ್ವಾಮಿ ಭಕುತಿಯ ಸೇನೆ ಪೊರಟಂತೆ ॥೩॥ ೮೧೨॥

ಭಾವಾರ್ಥ:— ಯುದ್ಧ ಮಾಡಲು ಸೈನ್ಯಾದಿ ಸಾಮಗ್ರಿಗಳು ಬೇಕು ಅದರಂತೆಯೇ, ಶ್ರೀ ಸರ್ವಜ್ಞರ ಉಪನ್ಯಾಸ ಭಾರತಿಯನ್ನು ಸೇನೆಯ ದೃಷ್ಟಾಂತದಿಂದ ವರ್ಣಿಸುತ್ತಾರೆ.

ಕವಿ= ಕವಿತಾ ಚಮತ್ಕೃತಿಗಳಲ್ಲಿ ಪಂಡಿತರಾದ ತ್ರಿವಿಕ್ರಮ ಪಂಡಿತಾಚಾರ್ಯರು, ಶ್ರೀ ಸರ್ವಜ್ಞರಾದ ಮಧ್ವಾಚಾರ್ಯರ ಉಪನ್ಯಾಸವನ್ನು ಕೇಳುತ್ತಿರುವ ಕಾಲದಲ್ಲಿ, ನಡೆದುದು= ಹೇಳುವ ಆ ವ್ಯಾಖ್ಯಾನವು, ವಿವರ= ವಿಸ್ತಾರವಾದದ್ದು, ಅದ್ಭುತ= ಆಶ್ಚರ್ಯಕರವಾದುದು, ಎರಡನೇದವರಿಂದ ಪರಿಹರಿಸಲು ಅಶಕ್ಯವಾದುದು ಜಗತ್ತು

ಸೃಷ್ಟಿ ಮಾಡುವ ಹರಿರೂಪಿಯಾದ ಶ್ರೀಮನ್ನಾರಾಯಣನೇ, ಪ್ರವರ= ಸರ್ವೋತ್ತಮ ನೆಂದು, ದೃಢ= ನಿಶ್ಚಯವಾಗಿ ಸಾಧಿಸುವ, ಉಪನ್ಯಾಸ ಭಾರತೀ= ವಾಙ್ಮಯರೂ ವಾದ ವಾಣಿಯು ದ್ರವಿಣ= ಪ್ರವಚನ ಗೈವಲ್ಲಿ ಪರಾಕ್ರಮಶಾಲಿಗಳಾದ ಶ್ರೀ ಸರ್ವಜ್ಞ ಆನನ ಕಮಲ= ಮುಖವೆಂಬ ಕಮಲದಿಂದ, ಜವ= ತ್ವರದಿಂದ, ಶಿಬಿರದಿಂ= ದಂಡ ಯಿಳಿದ ಛಾವಣಿಯ ಡೇರೆಗಳಿಂದ, ಸ್ವಾಮಿ ಭಕ್ತಿಯುಳ್ಳ ಸೈನ್ಯವು ಹೊರಗೆ ಹೊರಟಂತೆ ನಿರ್ಗತ= ಹೊರಟಿತು.

ವೈರಿಗಳಾದ ಶತ್ರುಗಳನ್ನು ಕಂಡಾಕ್ಷಣವೇ ಉತ್ಸಾಹದಿಂದ ಸ್ವಾಮಿಯಾದ ತನ್ನ ರಾಜನಿಗೆ ಜಯ ತಂದುಕೊಡಲು ಹಟವುಳ್ಳದ್ದಾಗಿ, ಸೇನಾಗ್ರಹ= ದಂಡುಯಿಳಿದ ಸ್ಥ ವಾದ ಶಿಬಿರದಿಂದ-ಗಜ, ರಥ, ಅಶ್ವಸಮುದಾಯವಾದ ಸೇನೆಯು ಇದಿರು ಹೊರಟಂತೆ ಪ್ರತಿಭಟರಾದ ತ್ರಿವಿಕ್ರಮರನ್ನು ನೋಡಿದಕೂಡಲೇ ಸಮರ್ಥರಾದ ಶ್ರೀ ಸರ್ವಜ್ಞರ ಮುಖ ಕಮಲವೆಂಬ ಶಿಬಿರದಿಂದ ತನ್ನ ಸ್ವಾಮಿಯಾದ ಶ್ರೀಮನ್ನಾರಾಯಣನೇ ಸರ್ವೋತ್ತಮ ಜಗತ್ತಿಗೆ ಸೃಷ್ಟ್ಯಾದ್ಯಷ್ಟಕರ್ತನೆಂದು ನಿಶ್ಚಯವಾಗಿ, ಸ್ವಾಮಿಭಕ್ತಿಯಿಂದ ಸಾಧಿಸುವ ವಾಙ್ಮಯ ರೂಪವಾದ ಪ್ರವಚನವು ಹೊರಹೊರಟಿತು.

**ಶ್ಲೋಕ ॥ ನಾತ್ಯತ್ವರಾ ನಾತಿರಯಾ ।**
**ನಸ್ಖಲಂತೀ ನಿರಂತರಾ ॥**
**ಅನಾನಾವಯವೇತ್ಯೇವ ।**
**ದವೀಯೋಭಿಃ ಪ್ರತರ್ಕಿತಾ ॥** ॥ ೪ ॥

ಭಾಮಿನಿ ॥ ಉಪ ವಚನ ಬಾರತಿ ಸುಸೇನೆಯು ।
ದಿಪ್ರುತ ವತಿ ಮಂದಾತಿ ಜವ ವಿರ ।
ದ್ವಿಫಲ ಶಬ್ದಾರ್ಥಗಳ ತಪ್ಪದೆ ಮಧ್ಯನಿಲ್ಲದಲಿ ॥
ಸಫಲ ಸಾಗಿರೆ ದೂರಜನರಿಂ ।
ದಪಘನಂ ಸ್ವರ ವರ್ಣ ಮೊದಲೆನೆ ।
ಅಪರ ಗಜತುರಗಾದಿ ಅಂಗಿಲ್ಲೆನುತ ಊಹಿಸಿತು ॥ ೪ ॥ ೮೧೩ ॥

ಭಾವಾರ್ಥ :— ಆ ಉಪನ್ಯಾಸ ಸೇನೆಯು ಹೇಗಿತ್ತೆಂದರೆ ವರ್ಣಿಸುತ್ತಾರೆ. ಉಪನ್ಯಾಸ ಭಾರತಿಯೆಂಬ ಸೇನೆಯು, ದಿಪುತ= ಬಹು ಪ್ರಕಾಶಮಾನವಾಗಿ ತನ್ನ ಬಲದಿಂದೊಪ್ಪುತ್ತ ಬಹು ಮೆಲ್ಲಗೂ ಮತ್ತು ಬಹುತ್ವರವೂ ಇಲ್ಲದೇಯಿದ್ದು ಸಾವಕಾಶವಾಗಿ, ವಿಫಲ= ಬಹಳವಾದ ಶಬ್ದಾರ್ಥಗಳನ್ನು ಬಿಡದೇ ಮತ್ತು ನಡು ನಡುವೆ ತಡೆಯದೇ ನಿಲ್ಲದೇ, ಸಫಲ=ಅರ್ಥವತ್ತಾಗಿ ಮುಂದೆ ಸಾಗಲು ಈ ಕಾರಣದಿಂದ, ದೂರದಲ್ಲಿರುವ ಜನರಿಂದ ಆ ಉಪನ್ಯಾಸ ಭಾರತಿಯು ಸ್ವರ ವರ್ಣ

ದಾದಿ ರೂಪವಾದ, ಅಪಘನಂ= ಅವಯುವಗಳು ಯಿಲ್ಲೆಂದು ಊಹಿಸಿತು.= ತರ್ಕ ಾಡಲ್ಪಟ್ಟಿತು. ಶಿಬಿರದಿಂದ ಹೊರಟ ಸೈನ್ಯವಾದರೂ ಅತಿ ಮೆಲ್ಲಗಲ್ಲದೇ ಅತಿವೇಗ ಂದಲ್ಲದೇ ಸಾವಕಾಶವಾಗಿ, ನಡುವೆ ಎಡವದೇ ಮುಗ್ಗದೇ ಪರರಿಂದ ತಡೆಯದೇ ಮೂಹಿಕವಾಗಿ ನಡೆಯುತ್ತಾ ನಡೆಯುವಾಗ ದೂರದಲ್ಲಿರುವ ಜನರಿಂದ, ಆನೆ ಕುದುರೆ ಥ ಕಾಲಾಳುಗಳು ಮೊದಲಾದ ಬೇರೆ ಬೇರೆ, ಅಂಗಗಳಿಲ್ಲದ್ದೆಂದು ಊಹಿಸಿತು. ಸೈನ್ಯವು ರುತ್ತಿರುವಾಗ ದೂರದಲ್ಲಿದ್ದವರು ಸೈನ್ಯದಲ್ಲಿದ್ದ ಆನೆ, ಕುದುರೆ, ಮುಂತಾದವುಗಳನ್ನು ೇರೆ ಬೇರೆ ಹೇಗೆ ತಿಳಿಯಲಾರರೋ, ಅದರಂತೆಯೆ ಶ್ರೀಮದಾಚಾರ್ಯರ ಉಪನ್ಯಾಸ ಾಲದಲ್ಲಿ, ದೂರ ಕುಳಿತಿದ್ದವರು ಶ್ರೀ ಸರ್ವಜ್ಞರ ಉಪನ್ಯಾಸದಲ್ಲಿ, ಹೃಸ್ವ ಧೀರ್ಘ, ಸ್ವರ ರ್ಣ, ಪದಾದಿ ಭೇದಗಳಿದ್ದರೂ, ಈ ಸ್ವರಾದಿ ಅವಯುವಗಳನ್ನು ತಿಳಿದು ಊಹಿಸಲಿಕ್ಕೆ ಕ್ತರಾಗಲಿಲ್ಲ.

**ಶ್ಲೋಕ ॥ ಸೂತ್ರಸ್ಯಂದನವೃಂದಾಢ್ಯಾ ।**
**ದುರ್ವಾರಶ್ರುತಿವಾರಣಾ ॥**
**ಸೂಪಪತ್ತಿ ಮಹಾಪತ್ತಿ ।**
**ರ್ವಿಚಿತ್ರ ಸ್ಮೃತಿಸಪ್ತಿಕಾ ॥ ೫ ॥**

ಭಾಮಿನಿ ॥ ಸೂತ್ರಸ್ಯಂದನ ವೃಂದ ವಾಢ್ಯವು ।
ಜೈತ್ರದುರ್ವಾರ ಶ್ರುತಿಯೆಕರಿ ।
ಅತ್ರ ಮಹಯುಕ್ತಿಗಳೆ ಕಾಲಾಳುಗಳು ಎಂತೆನೊ ವಿ ॥
ಚಿತ್ರ ತರದಸ್ಮೃತಿ ಹಯಂಗಳು
ಪಾತ್ರವಿದು ಚತುರಂಗ ಸೇನೆ ಪ ।
ವಿತ್ರ ಪ್ರವಚನ ತನ್ನ ಪಕ್ಷವ ಸಾಧಿಸುತದೃಢದಿ ॥ ೫ ॥ ೮೧೪ ॥

ಭಾವಾರ್ಥ:— ಈ ಉಪನ್ಯಾಸ ಸೇನೆಯು ಹೇಗಿತ್ತೆಂದರೆ ವರ್ಣಿಸುತ್ತಾರೆ. ಸೂತ್ರ ಸ್ಯಂದನ ವೃಂದ ದಾಢ್ಯ= ಬ್ರಹ್ಮಸೂತ್ರಗಳೇವೆ ರಥ ಸಮೂಹಗಳಂತೊಪ್ಪುತ್ತ ಸಂಪನ್ನ ರಾಗಿ ಶೋಭಿಸುತ್ತಿರುವವು. ಮತ್ತು ಜೈತ್ರ= ಪರರನ್ನು ಜಯಮಾಡಲಿಕ್ಕೆ ಯೋಗ್ಯವಾದ, ದುರ್ವಾರ ಶ್ರುತಿ= ಪುರುಷ ಪ್ರಣೀತವಲ್ಲದೆ ನಿತ್ಯವಾಗಿ ಪ್ರವರ್ತಿಸುವ ಪ್ರಬಲತರವಾದುದ ರಿಂದ ಅನ್ಯರಿಂದ ನಿರಾಕರಿಸಲು ಅಶಕ್ಯವಾದ ಶ್ರುತಿಗಳು, ವೇದಋಚಾ ಸಮೂಹಗಳೇ, ರಿ= ಆನೆಗಳಂತೊಪ್ಪಿದವು. ಅತ್ರ ಉಪನ್ಯಾಸ ಭಾರತಿಯಲ್ಲಿ, (ತರ್ಕ)= ಮಹಾಯುಕ್ತಿ ಗಳೇ ಕಾಲಾಳುಗಳು. ( ಅಂದರೆ ಸೈನ್ಯದಲ್ಲಿ ಯುದ್ಧಾನುಸಾರವಾಗಿ ಬಹು ಜಾಣತನವೆಂಬ ಸಮಯಾನುಸಾರ ಯುಕ್ತಿಯಿಂದ ಯುದ್ಧವನ್ನು ಸಾಗಿಸುವ ಹಂಚಿಕೆಯು ಪದಾತಿಗಳಾದ

ಸೈನಿಕ ವರ್ಗದಲ್ಲಿರುವದರಿಂದ ಇಲ್ಲಿ ಯುಕ್ತಿಗಳಿಗೂ, ಕಾಲಾಳುಗಳಿಗೂ ಹೋಲಿಕೆ) ವಿಚಿತ್ರ ಸ್ಮೃತಿ ಸಪ್ತಿಕಾ= ವಿಚಿತ್ರತರದ ಸ್ಮೃತಿಹಯಂಗಳು=ವಿವಿಕ್ಷಾರ್ಥ ಅನೇಕ ಪ್ರಕಾರವಾಗಿ ಹೇಳತಕ್ಕ ಅರ್ಥಗಳನ್ನು ಸಮರ್ಥನ ಮಾಡಿ ಪೇಳುವ ನಾನಾ ವಿಧವಾದ ಸ್ಮೃತಿ= ಪುರಾಣ ವಾಕ್ಯಗಳೆನ್ನುವ ಶ್ರೀ ವ್ಯಾಸಪ್ರಣೀತ ಪೌರುಷೇಯ ಗ್ರಂಥಗಳ ಪ್ರಮಾಣಗಳೇ ಕುದುರೆಗಳಂತೆ ತೋರಿದವು. ಹೀಗೆ ಚತುರಂಗಸೇನೆ= ರಥ, ಆನೆ, ಕುದುರೆ, ಕಾಲಾಳು ನಾಲ್ಕು ವಿಧವಿಧವಾಗಿ ಸೇನಾಕ್ಕೆ ಪಾತ್ರವಿದು= ಯೋಗ್ಯವಾದುದು. ಹೀಗೆ ಚತುರಂಗ ಸೇನೆಯಂತೊಪ್ಪುವ, ಪವಿತ್ರಪ್ರವಚನ=ನಿರ್ದುಷ್ಟವಾದ ಉಪನ್ಯಾಸವು ಶ್ರೀಹರಿ ಸರ್ವೋತ್ತಮನೆಂಬ ತನ್ನ ಸ್ವಸಿದ್ಧಾಂತ ಸಾಧಿಸಲಿಕ್ಕೆ ಬ್ರಹ್ಮಸೂತ್ರಗಳೂ, ವೇದವಾಕ್ಯಗಳೂ, ಪುರಾಣವಚನಗಳೂ, ಅವುಗಳಿಗೆ ಸರಿಯಾದ ಯುಕ್ತಿಗಳಿಂದ ಪೂರ್ಣವಾಗಿ ಶೋಭಿಸಿದವು.

೧. ಬ್ರಹ್ಮಸೂತ್ರಗಳೇ = ರಥಗಳು, ೨. ವೇದಗಳೇ=ಆನೆಗಳು, ೩. ಯುಕ್ತಿಗಳೇ =ಕಾಲಾಳು, ೪. ಸ್ಮೃತಿವಚನಗಳೇ= ಕುದುರೆಗಳೆಂದು, ಸೇನೆಗೂ ಉಪನ್ಯಾಸಕ್ಕೂ ಹೋಲಿಸುವ ಕವಿ ಚಮತ್ಕೃತಿಯು, ಎಲ್ಲ ವಿಧದಿಂದಲೂ ಬಹು ಅರ್ಥ ಗರ್ಭಿತವಾದುದು ಬಲ್ಲ ಗುರುಗಳಿಂದ ತಿಳಿಯುವದು.

ಶ್ಲೋಕ ॥ ವರ್ಧಿತೋರ್ಮಿ ಹರಿಪ್ರೇಷ್ಠಾ
ಸುಪಯೋಧರ ಸುಸ್ವನಾ
ಸವಿಶಾನ ಪ್ರಕಾಶಾರ್ಥಾ
ಸಾಗರೀ ಶ್ರೀರಿವಾಪರಾ ॥ ೬ ॥

ವಾರ್ಧಿಕ || ಸುಮತಿಭಕ್ತ ಷಡೂರ್ಮಿ ಛೇದಿಪ ಹರಿಗಿಷ್ಟವೊ |
ಅಮಿತ ಮೇಘಸ್ವನವೊ ವಿಸ್ತಾರ ಅರ್ಥವಂ |
ಪ್ರಮೆಯ ಪೇಳ್ವದ ಕನಿತೆ ಅಪರ ಪಯಸಾಗರೀ ರಮೆಯ
ಸುಪಯೋದರರ್ಥಂ ||
ಕ್ರಮದಿ ಮಹಸಗರರಾಟ್ ಸೇನೆ ಸಗರಾಪತ್ಯ |
ಪ್ರಮುದ ಸಿರಿ ವರ್ಧಿತಲೆ ಸಾಗರದ ಕಾಂತಿಯಂ
ತ್ಯಮಲರತ್ನಾಖ್ಯ ವಸ್ತುವಿಗೆ ಸುಪ್ರಕಾಶ್ಯಉದಯೇಂದು
ಪ್ರಿಯೋಪನ್ಯಾಸಂ || ೬ ॥ ೮೧೫ ||

ಭಾವಾರ್ಥ:— ಶ್ರೀಮದಾಚಾರ್ಯರ ೧. ಉಪನ್ಯಾಸವು, ೨. ಶ್ರೀ ಲಕ್ಷ್ಮೀದೇವಿಯಂತೆಯೂ ೩. ಸಗರರಾಜನ ಸೇನೆಯಂತೆಯೂ ೪. ಸಗರಪುತ್ರನ ಸಮ್ಮಂಧಿಯಾದ ಸೇನಾ ಸಂಪತ್ತಿನ ಕಾಂತಿಯಂತೆಯೂ, ೫. ಸಾಗರದಂತೆಯೂ, ಇರುವದೆಂದು ವರ್ಣಿಸುತ್ತಾರೆ.

ಮೂಲ ಸಂಸ್ಕೃತ ಶ್ಲೋಕ ಅನ್ವಯಾರ್ಥ (೬೩) ಶ್ಲೋಕ ವರಿಗೆ ಬರೆಯುತ್ತದೆ.

೧. ಅನ್ವಯಾರ್ಥ=ವರ್ಧಿತೋರ್ಮಿ ವರ್ದಿತಾ= ಛೇದಿತಾ, ಊರ್ಮಯಃ= ವೃದ್ಧಿ ಹ್ರಾಸಾದಿ ಷಡ್ವಿಕಾರಾಃ ಯಸ್ಯಸಚಾಸೌ ಹರಿಶ್ಚ, ತಸ್ಯಪ್ರೇಷ್ಠಾ = ವೃದ್ಧಿಹ್ರಾಸ ಮೊದಲಾದ ಷಡ್ವಿಕಾರ ರಹಿತನಾದ ಶ್ರೀಹರಿಗೆ ಅತಿ ಪ್ರೀತ್ಯಾಸ್ಪದವಾದ ಅಥವಾ ತನ್ನ ಭಕ್ತಿ ವಿಷಯದಲ್ಲಿ ಖಂಡಿತವಾದ ಷಡೂರ್ಮಿಗಳುಳ್ಳ ಶ್ರೀಹರಿಗೆ ಪ್ರೀತಿಕರವಾದುದು. ಸುಪಯೋಧರ= ಮಹಾ ಮೇಘದಂತೆ, ಸುಸ್ವನಾ= ದಿವ್ಯ ಗಂಭೀರ ಧ್ವನಿಯುಳ್ಳಂಥ, ಸವಿತಾನ =ವಿಸ್ತಾರದಿಂದ ಸಹಿತವಾದ ಅರ್ಥವನ್ನು, ವಿಸ್ತಾರದಿಂದ ಸಹಿತ ಹೇಗೆ ಆಗ ಬೇಕೋ ಹಾಂಗೆ ಪ್ರಕಾಶ ಮಾಡುವಲ್ಲಿ, ಅರ್ಥ= ಅಭಿಪ್ರಾಯವುಳ್ಳದ್ದು.

೨. ಆ ಉಪನ್ಯಾಸವು, ಅಪರಾ =ಮತ್ತೊಂದು, ಸಾಗರೀ ಶ್ರೀಃ ಇವಃ =ಸಮುದ್ರ ದಿಂದುದಿಸಿದ ಸಂಪತ್ತಿನಂತೆ, ಅಂದರೆ ಸಾಗರೀ =ಸಮುದ್ರದಿಂದ ಜಾತಳಾದಂಥ, ಶ್ರೀ ರಿವಸ್ಥಿತಾ =ರಮಾದೇವಿಯೋ ಪಾದೇಲಿ ಯಿರತಕ್ಕಂಥಾ ಉಪನ್ಯಾಸವು, ರಮಾದೇವಿಯು ಹೇಗಿರುವಳೆಂದರೆ, ವರ್ದಿತೋರ್ಮಿ =ಸುಮತಿ, ಸಮೀಚೀನ ಭಕ್ತರುಗಳ ಜನನ ಮರ ಣಾದಿ ಆರು ಊರ್ಮಿಗಳನ್ನು ಛೇದಿಸುವಂಥಾ, ಹರಿಪ್ರೇಷ್ಠಾ= ಪರಮಾತ್ಮಗೆ ಪ್ರೀತಾ ಸ್ಪದಳು, ಸುಪಯೋದರರ್ಥ= ಸಮೀಚೀನವಾದ ಸ್ತನಗಳುಳ್ಳಂಥ ಮತ್ತು ಸುಸ್ವನಾ = ಮನೋಹರವಾದ ಧ್ವನಿಯುಳ್ಳಂಥ, ಸವಿತಾನ ಪ್ರಕಾಶಾರ್ಥ =ವಿಸ್ತಾರ ಸಹಿತವಾದ ಪ್ರಕಾಶ ಸಹಿತವಾದ, ಧನಾದಿಗಳುಳ್ಳ ವಸ್ತುರೂಪ, "ಸವಿಸ್ತಾರ ಸ್ವರೂಪ ತೇಜೋ ದ್ರವ್ಯಾತ್ಮಿಕಾರಮಾ" ಯಾವ ರಮೆಯ ಕಾಂತಿಯ ಪದಾರ್ಥಗಳು ವಿಸ್ತಾರವಾಗಿವೇಯೊ, ಆ ರಮೆಯು. ಅಥವಾ

೩. ಅಪರಾ = ಅನ್ಯವಾದ, ಸಾಗರೀರವ = ಸಗರರಾಜನ ಸಮ್ಮಂಧಿಯಾದ ಸೇನಾಸಂಪತ್ತಿನಂತೆ, ಸ್ಥಿತಾಃ= ಈ ಉಪನ್ಯಾಸವು ಇರುವದಾಗಿತ್ತು. ಸಗರ ರಾಜನ ಸೇನಾ ಸನ್ನಿವೇಶ ಹೇಗಂದರೆ, ವರ್ಧಿತೋರ್ಮಿ= ಅಭಿವೃದ್ಧಿಯಾಗುವ ಊರ್ಮಿ ಎಂಬ ಗತಿ ವಿಶೇಷವುಳ್ಳ, ಹರಿಗಿಷ್ಟ= ಅಶ್ವಗಳಿಗೆ ಇಷ್ಟವೆಂದರೆ ಅಶ್ವಾರೂಢ ಪುರುಷರಿಂದ ಅತಿ ವರ್ಧಿತವಾದ ಗತಿಯುಳ್ಳದ್ದು, ಸುಪಯೋದರರ್ಥ= ಸಮೀಚೀನ ಮೇಘದೋಪಾದೆಲಿ, ಸುಸ್ವನಾ= ಧ್ವನಿಯುಳ್ಳಂಥಾದ್ದು, ಸವಿತಾನ ಪ್ರಕಾಶಾರ್ಥ= ಅತ್ಯಂತ, ವಿಸ್ತಾರ ಪ್ರಾದುರ್ಭಾವದಿಂದ, ಶತ್ರುಭೀಷಣಾಖ್ಯ ಪ್ರಯೋಜನವುಳ್ಳಂಥ, ಅಥವಾ

೪. ಅಪರಾ= ಮತ್ತೊಂದರ್ಥ, ಸಾಗರೀ= ಸಗರಾಪತ್ಯ ಸಮ್ಮಂಧಿನೀ ಶ್ರೀ ರಿವ, ಸಗರ ಪುತ್ರ ಸಮ್ಮಂಧಿಯಾದ ಸೇನೆಯ ಸಂಪತ್ತಿನೋಪಾದೆಯಲಿ, ಸ್ಥಿತಾಃ= ಇರುವ (ಉಪನ್ಯಾಸ ಭಾರತಿಯು) ವರ್ಧಿತೋರ್ಮಿ= ವೃದ್ಧಿ ಹೊಂದಲ್ಪಟ್ಟ ಗತಿ ವಿಶೇಷಗಳುಳ್ಳ, ಹರಿಪ್ರೇಷ್ಠಾ= ಮೇಧ್ಯಾಶ್ವಸ್ಯ ಪ್ರೇಷ್ಠಾ= ಈ ಸೇನೆಯು, ಯಜ್ಞ ಸಮ್ಮಂಧಿ ಅಶ್ವವನ್ನು ಹುಡುಕುವದರಲ್ಲಿ ಇಷ್ಟವಾದಂಥಾದ್ದು, ಸುಸ್ವನಾ= ಮೇಘೋಪಾದೆಯಲಿ, ಗಂಭೀರ

ಧ್ವನಿಯುಳ್ಳಂಥಾದ್ದು, ಸವಿತಾನ ಪ್ರಕಾಶಾರ್ಥಃ= ಯಜ್ಞದ ಪ್ರಕಾಶವೇ ಪ್ರಯೋಜನವಾಗಿರುವಂಥಾದ್ದು. ಅಂದರೆ ಯಜ್ಞ ಕುದುರೆಯನ್ನು ಹುಡುಕಿ ಸಗರರಾಜನ ಅಶ್ವಮೇಧ ಯಜ್ಞವನ್ನು ಪೂರೈಸಿ ಯಜ್ಞಪ್ರಕಾಶ ಮಾಡುವ ಪ್ರಯೋಜನವುಳ್ಳದ್ದು.

೫. ಪುನಹ, ಅಪರಾ= ಮತ್ತೊಂದರ್ಥ, ಸಾಗರೀ=ಸಮುದ್ರಕ್ಕೆ ಸಮ್ಮಂಧಿಯಾದ ಪ್ರಮುದ= ಸಂತೋಷಕೊಡುವ, ಶ್ರೀ ರವ= ಕಾಂತಿಯೋಪಾದೆಯಲಿ, ವರ್ಧಿತೋರ್ಮಿ= ಸಮುದ್ರವು ಅಭಿವೃದ್ಧಿಸುವ ತೆರೆಗಳಿಂದ ಯುಕ್ತವಾದದ್ದು, ಹರಿಪ್ರೇಷ್ಠಾ= ಯಾವಾತನಿಂದ ಸಮುದ್ರ ತೆರೆಗಳು ಅಭಿವೃದ್ಧಿಯಾಗುವವೊ ಅಂಥ ಹರಿಪ್ರೇಷ್ಠಾ=ಚಂದ್ರನಿಗೆ ಅತಿ ಪ್ರೀಯವಾದದ್ದು, ಚಂದ್ರೋದಯದಿಂದ ಸಮುದ್ರ ತೆರೆಗಳು ಹೆಚ್ಚಿಸುವವು, ಸುಸ್ವಾನಾ= ಮೇಘಗಂಭೀರವಾದ ಧ್ವನಿಯುಳ್ಳದ್ದು, ಸವಿತಾನ ಪ್ರಕಾಶಾರ್ಥ= ಸವಿಸ್ತರ ಪ್ರಕಾಶವುಳ್ಳ ರತ್ನಾದಿ ವಸ್ತುಗಳುಳ್ಳದ್ದು. ಇಂಥ ಸಮುದ್ರದ ಕಾಂತಿಯಂತೆ ಗಾಂಭೀರ್ಯಾದಿ ಗುಣದಿಂದ ಉಪನ್ಯಾಸ ಭಾರತೀಯು, ಶೋಭಿಸಿತೆಂದು ಶ್ಲೇಷಾಲಂಕಾರದೊಡನೆ ಈ ಐದು ಅರ್ಥಗಳನ್ನು ಶ್ರೀಮನ್ನಾರಾಯಣ ಪಂಡಿತಾಚಾರ್ಯರೆ ಭಾವ ಪ್ರಕಾಶಕೆಯಲ್ಲಿ ಸೂಚಿಸಿರುವರು.

ಸುಮತಿ= ಸಮೀಚೀನಮತಿಯುಳ್ಳ, ಅಮಿತ= ಹೆಚ್ಚಾದ, ಪ್ರಮದ= ಸಂತೋಷ, ಅಮಲ= ನಿರ್ದುಷ್ಟ ಪ್ರಕಾಶವುಳ್ಳ

**ಶ್ಲೋಕ ||** **ಪದ್ಮೇಶ ಪದಪದ್ಮ ಶ್ರಿ**
**ತ್ಕೃತ್ಯಾಂಗಂ ಪದ್ಮಜನ್ಮನಃ ||**
**ಲಾಲಿತಾ ಶಿರಸೇಶೇನ |**
**ಗಂಗೇವಾಶೇಷ ಪಾವನೀ** || ೭ ||

ವಾರ್ಧಿಕ || ಪದ್ಮೇಶ ಲಕ್ಷ್ಮಿಪತಿ ಪದಪದ್ಮ ವಾಶ್ರಿತಂ |
ಪದ್ಮ–ಜನ್ಮನಃ ಚತುರ ಮುಖಕೆ ಕೃತ್ಯಾಂಗದಂ |
ಪದ್ಮಜನಸುತ ಈಶ ಬದ್ಧಾಂಜಲಿಂ ಶಿರಸಿ ಆದೃತ
ಮಶೇಷ ಜನರಂ ||

ಶುಧ್ಧಾತ್ಮರಂ ಗೈಸೆ ಗಂಗೆಯೋಲ್ ಶೋಭಿತಂ |
ಮಧ್ವಭಾಷ್ಯ ಪ್ರವಹ ವಿಷ್ಣು ಪಾದೋತ್ಕರ್ಷ |
ಪದ್ಮಭವ ಪದಪ್ರಾಪ್ತ್ಯ ನಂತರಂ ಬ್ರಹ್ಮವ್ಯಾಖ್ಯಾಸಾರ
ಕೃತಸಾಧಿತಂ || ೭ || ೮೧೬ ||

ಇನ್ನು ಶ್ರೀ ಸರ್ವಜ್ಞರ ಉಪನ್ಯಾಸವು ಗಂಗೆಯಂತೆ ಇರುವದೆಂದು ವರ್ಣಿಸು ತ್ತಾರೆ.

ಮೂಲ ಶ್ಲೋಕಾನ್ವಯಃ=ಪದ್ಮೇಶ, ಪದಪದ್ಮಶ್ರಿತ್, ಪದ್ಮ ಜನ್ಮನಃ ಕೃತ್ಯ ಅಂಗಂ, ಈಶೇನ, ಶಿರಸಾ, ಲಾಲಿತಾ, ಗಂಗಾ ಇವ ಅಶೇಷಪಾವನೀ || ಪದ್ಮಾಯಾಃ= ಲಕ್ಷ್ಮ್ಯಾ, ಈಶಃ= ಪತಿ, ಲಕ್ಷ್ಮೀಪತಿಯಾದ ಶ್ರೀ ಹರಿಯ ಪದಪದ್ಮ ಶ್ರಿತ್= ಲಕ್ಷ್ಮ್ಯಾ, ಈಶಃ= ಪತಿ, ಲಕ್ಷ್ಮೀಪತಿಯಾದ ಶ್ರೀ ಹರಿಯ ಪಾದಾರವಿಂದವನ್ನು ಆಶ್ರಯ ಮಾಡಿದಂಥಾದ್ದು ಎಂದರೆ ಶ್ರೀಮದಾಚಾರ್ಯರ ಉಪನ್ಯಾಸವು ವಿಷ್ಣೋತ್ಕರ್ಷ ಪ್ರತಿಪಾದಕವಾದುದೆಂದು ಭಾವ, ಪದ್ಮಜನ್ಮನಃ= ಪದ್ಮಾತ್ ಕಮಲಾತ್ ಜನ್ಮ ಉತ್ಪತ್ತಿರ್ಯಸ್ಯ ತಸ್ಯ, ಚತುರ್ಮು ಖಸ್ಯ= ಶ್ರೀ ಹರಿಯನಾಭಿ ಕಮಲದಿಂದ ಹುಟ್ಟಿದ ನಾಲ್ಕು ಮೊಗವುಳ್ಳ ಬ್ರಹ್ಮದೇವರ ಅಧಿಕಾರಕ್ಕೆ, ಕೃತ್ಯಾಂಗ= ಬ್ರಹ್ಮಪದ ಪ್ರಾಪ್ತವಾದನಂತರದಲ್ಲಿ ಅಪಾರವಾದಂಥ ವ್ಯಾಖ್ಯಾನವನ್ನು ಮಾಡಲು ಸಾಧನಭೂತವಾದಂಥಾದ್ದು. ಅಂದರೆ (ಇಂಥ ಸಚ್ಛಾಸ್ತ್ರ ವ್ಯಾಖ್ಯಾನ ಮಾಡುವದು ಬ್ರಹ್ಮಪದ ಯೋಗ್ಯರಾದ ವಾಯುದೇವರು; ಈ ವಾಯು ದೇವರಿಗೆ ಆ ಬ್ರಹ್ಮಪದ ಪ್ರಾಪ್ತಿಗೆ ಕಾರಣವೆಂದು ಹೇಳಿದಂತಾಯಿತು. ಇಂಥ ವ್ಯಾಖ್ಯಾ ನವು, ಈಶೇನ ಶಿರಸಾ ಲಾಲಿತಾ= ಮಹಾ ಭಕ್ತಿಯಿಂದ ಕೃತಾಂಜಲಿ ಪುಟರಾದ ರುದ್ರ ದೇವರಿಂದ ಅತ್ಯಂತ ಮಾನ್ಯಮಾಡಿ ಆದರಿಸಲ್ ಪಡುವಂಥಾದ್ದು, ಅಶೇಷ ಪಾವನೀ= ಅಶೇಷಾನ್, ಈ ಮಧ್ವರ ಭಾಷ್ಯಾರ್ಥವನ್ನು ಶ್ರೋತೃ ಜನರುಗಳನ್ನು ಪವಿತ್ರ ಮಾಡು ವಂಥ ಈ ಉಪನ್ಯಾಸವು ಗಂಗಾದೇವಿಯಂತೆ ಶೋಭಿಸಿತು.

ಗಂಗೆಯಾದರೂ, ಪದ್ಮೇಶ ಪದಪದ್ಮಶ್ರಿತ್= ವಿಷ್ಣು ಪಾದಾಶ್ರಿತಳಾಗಿ ತ್ರಿವಿಕ್ರಮ ರೂಪಿ ಪರಮಾತ್ಮನ ಪಾದ ನಖಸ್ಪರ್ಶದಿಂದ, ಬ್ರಹ್ಮಾಂಡ ಕಟಹಾ ಒಡೆದು ಬಹಿರಾ ವರಣ ಉದಕವು ಬ್ರಹ್ಮಾಂಡದಲ್ಲಿ ಪ್ರವೇಶಿಸಲಾಗಿ ಆಗ್ಗೆ ಪದ್ಮಜನ್ಮನಃ ಕೃತ್ಯಾಂಗಂ= ಶ್ರೀಹರಿ ಚರಣ ಪಾದ ಪ್ರಕ್ಷಾಲನಾತ್ಮಕ, ಬ್ರಹ್ಮದೇವರ ವ್ಯಾಪಾರಕ್ಕೆ ಅಂಗಭೂತಳಾಗಿ ಗಂಗೆಯು ಅಂಡದಲ್ಲಿ ಪ್ರವೇಶಿಸಲು, ಬ್ರಹ್ಮದೇವರು ಕಮಂಡುಲದಲ್ಲಿ ಹಿಡಿದು, ಆ ಉದಕ ದಿಂದ, ಶ್ರೀ ಹರಿಯ ಪಾದಪ್ರಕ್ಷಾಲನೆ ಮಾಡಿದರು. ಹೀಗೆ ಬ್ರಹ್ಮದೇವರು ಮಾಡತಕ್ಕ ಹರಿಯ ಪಾದಪ್ರಕ್ಷಾಲನಿಗೆ ಅನುಕೂಲವಾದಳು. ಈಶೇನ ಶಿರಸಾಲಾಲಿತಾ= ಹರಿ ಪಾದೋದಕವು ದೊರಕುವದು ಮಹಾ ದುರ್ಲಭವೆಂದು, ರುದ್ರದೇವರು ಮಹಾ ಭಕ್ತಿ ಯಿಂದ ತನ್ನ ಶಿರಸ್ಸಿನಲ್ಲಿ ಧಾರಣ ಮಾಡಿಕೊಂಡಂಥ, ಅಶೇಷ ಪಾವನೀ= ಗಂಗಾದೇವಿಯು ದರ್ಶನಮಾತ್ರದಿಂದಲೇ ದರ್ಶನ ಮಾಡುವ ಎಲ್ಲ ಜನಗಳ ಪಾಪಗಳನ್ನು ಕಳೆದು ಪವಿತ್ರ ಮಾಡತಕ್ಕಂಥ "ಕಾಣಲು ಪಾಪಹರವು ಮುಕ್ತಿಯಾಹುದು, ಸ್ನಾನದ ಫಲವು ಕಂಡವ ರಿಲ್ಲ" ಎಂಬ ಶ್ರೀ ಪ್ರಾಣೇಶದಾಸರ ಉಕ್ತಿ, ಹೀಗೆ ಸಕಲ ಪಾಪ ಪರಿಹಾರಕಗಳಾದ ಗಂಗೆಯಂತೆ, ಶ್ರೀಮದಾಚಾರ್ಯರ ಉಪನ್ಯಾಸವು ಶೋಭಿಸಿತು.

ಶ್ಲೋಕ ॥ ನಾರಾಯಣೋಽನಂತಗುಣೋ ।
ಬ್ರಹ್ಮಾಖ್ಯೋ ವೇದ ವೇದಿತಃ ॥
ವಿಶ್ವಕರ್ತೇತಿ ವಿಶ್ವಜ್ಞಃ ।
ಶ್ರುತ್ಯಾ ಯುಕ್ತ್ಯಾಪ್ಯ ಸೀಷಧತ್ ॥ ೮ ॥

ವಾರ್ಧಿಕ ॥ ವಿಶ್ವಜ್ಞಃ ನಾರೆಯಣನಂತ ಗುಣ ಕಾಲತಃ ।
ಸುಸ್ವಗುಣ ದೇಶತಃ ಜ್ಞಾನಬಲ ಶಕ್ತ್ಯನೈ ।
ನಶ್ವರಿಲ್ಲದ ವೀರ್ಯ ಸಿರಿಯು ತೇಜಾದಿ ಪರಿಪೂರ್ಣ
ಬ್ರಹ್ಮಾಖ್ಯಮುಖ್ಯ ॥

ವಿಶ್ವಸೃಷ್ಟ್ಯಾದಿ ಕರ್ತನು ವೇದ ವೇದಿತನು ।
ಈ ಶ್ರುತಿ " ಪರೋಮಾತ್ರಯಾತನ್ವಾ ವೃಧಾನಃ " ।
"ವಿಷ್ಣೋನಕಂವೀರ್ಯ" "ಸತ್ಯಂ ಜ್ಞಾನಮನಂತಂ
ಬ್ರಹ್ಮ" ಯುಕುತಿಂ ಸಾಧಿಸೆ ॥ ೮ ॥ ೮೧೭ ॥

ಇನ್ನು ಶ್ರೀಮದಾಚಾರ್ಯರ ಉಪನ್ಯಾಸವನ್ನು ಹೇಳುತ್ತಾರೆ.

**ಅನ್ವಯಃ** ವಿಶ್ವಜ್ಞಃ, ನಾರಾಯಣಃ, ಅನಂತಗುಣಃ, ಬ್ರಹ್ಮಾಖ್ಯ, ವೇದವೇದಿತಃ, ವಿಶ್ವಕರ್ತಾಃ, ಇತಿ, ಶ್ರುತ್ಯಾ, ಯುಕ್ತ್ಯಾ, ಅಪಿ, ಅಸೀಷಧತ್,

ವಿಶ್ವಜ್ಞಃ = ಸರ್ವವನ್ನು ಬಲ್ಲ ಶ್ರೀ ಪೂರ್ಣಪ್ರಜ್ಞಾಚಾರ್ಯರು, ನಾರಾಯಣಃ= ಮುಕ್ತರುಗಳಿಗೆ ಆಶ್ರಯನಾದ, ಮತ್ತು ಮುಕ್ತಿ ಪ್ರದಾತೃನಾದ ಶ್ರೀಹರಿಯು, ಅನಂತ ಗುಣಃ= ನವಿವ್ಯತೇ ಅಂತಃ ಸದ್ಗುಣಗಳು ಯಿಷ್ಟೇ ಯೆಂದು ಕೊನೆಗಾಣದ, ಅನೇಕ ಜ್ಞಾನಾ ನಂದಾದಿ ಗುಣಗಳುಳ್ಳಾತನು. ಕಾಲತಃ,= ಕಾಲದಿಂದ ಪರಿಚ್ಛೇದರಹಿತನಾದವ, ಸರ್ವ ಕಾಲದಲ್ಲಿ ಶಶ್ವದೇಕಪ್ರಕಾರವಾಗಿ ಇರುವ ಗುಣವುಳ್ಳ, ಕಾಲಾತೀತನೂ, (ಕಾಲಬಾಧೆರಹಿತನು) ದೇಶತಃ= ಜೀವರ ಸೂಕ್ಷ್ಮಹೃದಯಾರಂಭಿಸಿ, ಮಹಾ ಅವ್ಯಾಕೃತಾಕಾಶದಲ್ಲಿಯೂ ಸಹ ಒಂದೇ ರೀತಿ ವ್ಯಾಪ್ತತ್ವಾದಿ ಗುಣಗಳಿಂದಲೂ, ಪರಿಮಿತಿಯಿಲ್ಲದ, ಇಷ್ಟೇಯೆಂದು ಸಂಖ್ಯಾದಿಂದ ಎಣಿಸಲಿಕ್ಕೆ ಸಾಧ್ಯವಿಲ್ಲದೇ ಮಿತಿಇಲ್ಲದ, ತಾದೃಶವಾದ ಜ್ಞಾನ, ಶಕ್ತಿ, ಬಲ, ಐಶ್ವರ್ಯ ವೀರ್ಯ, ತೇಜಸ್ಸು ಇವೇ ಮೊದಲಾದ ಶುಭ ಗುಣಾನಂತ್ಯ ಕಲ್ಯಾಣಗುಣ ಪರಿಪೂರ್ಣನು, ಬ್ರಹ್ಮಾಖ್ಯಂ = ಬ್ರಹ್ಮೇತಿ ಆಖ್ಯ= ಬ್ರಹ್ಮನೆಂಬ ಶಬ್ದನಾಮದಿಂದ ಹೇಳಲ್ಪಡುವನು' ಸಕಲ ಸದ್ಗುಣಗಳಿಂದಲೂ, ಪರಿಪೂರ್ಣನಾದ ಕಾರಣ ಬ್ರಹ್ಮನೆಂದು ಹೆಸರು. ವೇದವೇದಿತಃ= ಪರಮ ಮುಖ್ಯವಾಗಿ ವೇದಗಳಿಂದ,

ಪ್ರತಿಪಾದ್ಯನು (ತಿಳಿಯಲ್ಪಡುವರು) ಬರಿ ಅನುಮಾನದಿಂದ ಬ್ರಹ್ಮನನ್ನು ತಿಳಿಯಲು ಶಕ್ಯವಿಲ್ಲ. ವೇದಗಳೇ ಆ ಬ್ರಹ್ಮಾಖ್ಯ ವಸ್ತುವನ್ನು ವಿವರಿಸಿ ನಮಗೆ ತಿಳಿಸುತ್ತವೆ. ವಿಶ್ವ ಕರ್ತಾ= ಜಗತ್ತಿನ ಸೃಷ್ಟಿ ಸ್ಥಿತಿಲಯಾದ್ಯಷ್ಟಕರ್ತ, ಅಂದರೆ ಸಕಲ ಜಗತ್ತಿನ ಉತ್ಪತ್ತಿ, ಪಾಲನ ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಾದಿ ಅಷ್ಟಕರ್ತ, ಸರ್ವಜ್ಞಃ= ಸರ್ವವನ್ನು ಬಲ್ಲವನು. ಇತಿ= ಈ ಪ್ರಕಾರವಾಗಿ, ಶ್ರುತ್ಯಾ ವೇದಗಳಿಂದ ಯುಕ್ತ್ಯಾ= ಆಗಮಾನುಗ್ರಹೀತ ಅನುಮಾನ ಸಯುಕ್ತಿಗಳಿಂದಲೂ, ಅಪಿ =ಸಹಿತವಾಗಿ ಸಿಷಧತ್ =ಸಾಧನ ಮಾಡಿದರು.

ಅನಂತಗುಣ, ಬ್ರಹ್ಮಾಖ್ಯ, ವೇದವೇದಿತಃ, ವಿಶ್ವಕರ್ತಾ, ಈ ನಾಲ್ಕು ಪದಗಳಿಂದ ಬ್ರಹ್ಮಸೂತ್ರ ನಾಲ್ಕು ಅಧ್ಯಾಯ ಭಾಷ್ಯವೇ ಪೇಳಿದಂತಾಯಿತು. ''ನಾರಾಯಣಂ ಗುಣೈ ಸರ್ವೈರುದೀರ್ಣಂ, ದೋಷವಿರ್ಜಿತಂ, ಜ್ಞೇಯಂ, ಗಮ್ಯಂ, ಎಂಬುವ ಈ ಶ್ಲೋಕಾಭಿ ಪ್ರಾಯವೇ ಇರುವದು. ಇಲ್ಲಿ ಸವಿಸ್ತರ ಬರೆಯಲು ಗ್ರಂಥ ಬಾಹುಲ್ಯ ಭಯದಿಂದ, ದಿಗ್‌ದರ್ಶನ ಮಾಡಿದೆ. ಜ್ಞಾನಿಗಳಿಂದ ತಿಳಿಯುವದು.

ಶ್ರೀ ಸರ್ವಜ್ಞರು ಪೇಳಿದ ಶ್ರುತಿಗಳಾವಂದರೆ,

೧. 'ಪರೋಮಾತ್ರಯಾತನ್ವಾವೃಧಾನ', 'ವಿಷ್ಣೋನಕಂ ವೀರ್ಯಾಣಿ ಪ್ರವೋಚಂ' ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನು ಅನಂತಗುಣ ನೆಂದು.

೨. 'ಸರ್ವೇಷು ಭೂತೇಷು ಏಕಮೇವ ಬ್ರಹ್ಮೇತ್ಯಾಕ್ಷತೇ' 'ಏಷಪಂಥಾ ಏಷವು ಏವ ಬ್ರಹ್ಮ' ಇತ್ಯಾದಿಗಳಿಂದ ಬ್ರಹ್ಮಾಖ್ಯತ್ವಂಚ, ಈ ಶ್ರುತಿಗಳಿಂದ ಬ್ರಹ್ಮನೆನಿಸಿ ವನೆಂದು.

೩. 'ತಾವಾಏತಾಃ ಸರ್ವಾಋಚಃ ಸಏವ ಸರ್ವವೇದ್ಯಃ' ಇತ್ಯಾದಿ ಶ್ರುತಿಗಳಿಂದ, ವೇದವೇದ್ಯನೆಂದು.

೪. 'ಯೋನಃ ಪಿತಾ, ಜನಿತಾ ಯೋವಿಧಾತಾ' 'ಆತ್ಮಾವಾ ಇದಮೇಕ ಏವಾಗ್ರ ಆಸೀತ್' ಇತ್ಯಾದಿ ಶ್ರುತಿಗಳಿಂದ ಜಗತ್ಕರ್ತನೆಂದೂ ಸಾಧಿಸಿದನೆಂದು ಛಲಾರಿ ಆಚಾರ್ಯರ ಟಿಪ್ಪಣಿ.

೫. ವಿಶ್ವಜ್ಞಃ ನಾರಾಯಣ, ಎಂಬುವ ಒಂದೇ ಪದವನ್ನು ಆವರ್ತನ ಮಾಡಿ ಎರಡು, ವಿಶ್ವಜ್ಞಃ= ಸರ್ವವನ್ನು ಬಲ್ಲವನೆಂಬ ವಿಶೇಷಣವನ್ನು ನಾರಾಯಣನಿಗೇವೆ ಇಟ್ಟುಕೊಂಡರೆ, ಸರ್ವಜ್ಞತ್ವವನ್ನು, 'ಯಸ್ಸರ್ವಜ್ಞಃ ಸರ್ವವಿತ್' ಇತ್ಯಾದಿ ಶ್ರುತಿಗಳಿಂದ ಸರ್ವಜ್ಞನೆಂದು ಸಾಧಿಸಿದರು.

**ಶ್ಲೋಕ ॥ ಪ್ರಧಾನ ಮುಪರಾಧೀನಂ (ನ) ।**
**ಕಾರಣಂ ಪರಿಣಾಮಿಯತ್ ॥**
**ಪಯೋವದಿತಿ ಚೇತ್ ಸಾಧ್ಯ ।**
**ವೈಕಲ್ಯಂ ಸ್ಯಾನ್ನಿದರ್ಶನೇ ॥ ೯**

ವಾರ್ಧಿಕ ॥ ನರೆಯುಣನಿ ಗಾನಂತ ಗುಣವ ಸಹಿಸದ ನಿರೀ ।
ಶ್ವರ ಸಾಂಖ್ಯರೆ ಪ್ರಧಾನ ಜಡಪ್ರಕೃತಿಯೇ ಸ್ವತಃ ।
ಪರಿಣಾಮುವಾಗುವದು ಜಗವೆನೇಂ ಕ್ಷೀರದಧಿ ।
ರೂಪಪೊಂದ್ವ ತೆರಪ್ರಧಾನ ॥
ವಿರೆಪಕ್ಷ ಸ್ವಾತಂತ್ರಸಾಧ್ಯ ಪರಿಣತಹೇತು ।
ಭರದಿಲ್ಲಿ ಕಾಣವಂ ಕ್ಷೀರವು ಪರಾಧೀನ ।
ಉರೆದಧಿಯು ಆಗುವುದು ವಿಷ್ಣುವಿನ ಆಧೀನ
ಸಾಧ್ಯವಿಕಲಿದು ಕೂಡದು ॥ ೯ ॥ ೬೧೮ ।

ಪ್ರಧಾನಮುಪರಾಧೀನಂ ಈ (೯) ಶ್ಲೋಕದಿಂದ ಅರಂಭ ಮಾಡಿ ವಿಷ್ಣುರ್ಹಿವರ್ಮೋ ಕ್ಷದಾತೇತಿ, ಎಂಬುವ (೬೩) ಶ್ಲೋಕದವರೆಗೆ ಶ್ರೀ ನಾರಾಯಣನು ಅನಂತಗುಣಪೂರ್ಣ ನೆಂದು ಹಿಂದೆ ೮ನೇ ಶ್ಲೋಕದಲ್ಲಿ ಹೇಳಿದ್ದನ್ನೇ ವಿಸ್ತಾರವಾಗಿ ಹೇಳಲು, ಮೊದಲಿಗೆ ಶ್ರೀ ಹರಿಯು ಅನಂತ ಗುಣನಲ್ಲವೆಂದು ಹೇಳುವ ಪ್ರಬಲರಾದ ನಿರೀಶ್ವರ ಸಾಂಖ್ಯ ಮತ ವನ್ನು ನಿರಾಕರಿಸುತ್ತಾರೆ.

**ಅನ್ವಯ:**— ಯತ, ಪ್ರಧಾನಂ, ಪರಿಣಾಮಿ, (ತಸ್ಮಾತ್) ಅಪರಾಧೀನ ಕಾರಣಂ, ಪಯೋವತ್, ಇತಿ, ಚೇತ್, ನಿದರ್ಶನೇ, ಸಾಧ್ಯ, ವೈಕಲ್ಯ್ಯಂಸ್ಯಾತ್,

ಯತ= ಯಾವ ಕಾರಣ, ಪ್ರಧಾನಂ= ಜಡಪ್ರಕೃತಿ, ಪರಿಣಾಮಿ=ವಿಕಾರವಾ ಗುವ ಸ್ವಭಾವವುಳ್ಳದ್ದು, ತಸ್ಮಾತ್= ಆ ಕಾರಣ ಆ ಜಡಪ್ರಕೃತಿಯೇ ಜಗತ್ತಿಗೆ, ಅಪರಾ ಧೀನ ಕಾರಣಂ= ಸ್ವತಂತ್ರ ಕಾರಣವು, ಪಯೋವತ್ ಇತಿಚೇತ್= ಹಾಲು ಹೇಗೆ ದಧಿಗೆ ಕಾರಣ ಅದರಂತೆಯೇ, ಜಡಪ್ರಕೃತಿಯೇ ಜಗತ್ತಿಗೆ ಸ್ವತಂತ್ರ ಕಾರಣವಾಗುತ್ತದೆ. ಹೀಗೆಂದ ಪಕ್ಷದಲ್ಲಿ ನಿದರ್ಶನೇ ಈ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯಂ= ಸಾಧಿಸಬೇಕಾದ ಸ್ವತಂತ್ರ ಕಾರಣವೆಂಬ ಅಂಶವು ಇಲ್ಲವೆಂಬ ದೋಷವು ಸ್ಯಾತ್ =ಆಗಲಿ.

**ಭಾವಾರ್ಥ:**— ಇಲ್ಲಿ ಅನುಮಾನ ಪ್ರಕಾರವು.

ಈ ನಿರೀಶ್ವರ ಸಾಂಖ್ಯರು, ತಮ್ಮ ಅನುಮಾನವನ್ನು ಹೇಳುತ್ತಾರೇನಂದರೆ,

ಪ್ರಧಾನಂ ಸ್ವತಂತ್ರ ಕಾರಣಂ ಭವಿತುಮರ್ಹತಿ, ಕುತಃ ಪರಿಣಾಮಿತ್ವಾತ್' ಪ್ರಧಾನವು= ಜಡ ಪ್ರಕೃತಿ, ಜಗಸೃಷ್ಟ್ಯಾದಿ ವಿಷಯದಲ್ಲಿ ವಿಕಾರವುಳ್ಳದ್ದಾದ ಪ್ರಯುಕ್ತ ಸ್ವತಂತ್ರ ಕಾರಣವು ಹೇಗಂದರೆ ಹಾಲಿನಂತೆ. ಅಂದರೆ ಹಾಲು ಅನ್ಯಾಧೀನವಾಗದೆ ವಿಕಾರಹೊಂದಿ ಮೊಸರು ಆಗುತ್ತದೊ ಅದರಂತೆ. ಪ್ರಧಾನ =ಮೂಲಜಡಪ್ರಕೃತಿಯು, ಸ್ವತಂತ್ರವಾಗಿಯೇ ಅನೇಕ ವಿಧವಾಗಿ ವಿಕಾರ ಹೊಂದಿ, ರೂಪಾಂತರವುಳ್ಳದ್ದಾಗಿ ಜಗತ್ತಿನಲ್ಲಿರುವ ಅನೇಕ ವಸ್ತುಗಳಾಗಿ ಜಗತ್ತಿಗೆ ಪರಿಣಾಮ ಕಾರಣವೆನಿಸುತ್ತದೆ. ಕಾರಣ ಈ ಜಗತ್ತಿನ ಸೃಷ್ಟಿಗೆ ಈಶ್ವರನೇ ಬೇಡವೆಂಬ, ಅನುಮಾನ ಪ್ರಮಾಣದಿಂದ, ಸಾಧಿಸಲ್ಪಟ್ಟಿದೆ.

ಪ್ರಧಾನ ( ಜಡಪ್ರಕೃತಿಯು, ಹಾಲಿನಂತೆ ವಿಕಾರ ಹೇಗೆ ಹೊಂದುತ್ತದೋ ಹಾಗೆ ವಿಕಾರ ಹೊಂದುವವದರಿಂದ ಸ್ವತಂತ್ರ ಕಾರಣವೆಂದು ಈ ಅನುಮಾನದಲ್ಲಿ ದೃಷ್ಟಾಂತೀಕರಿಸಿದ ಹಾಲಿನಲ್ಲಿ ಮೊಸರಾಗಿ ಪರಿಣಾಮ ಹೊಂದುವ ವಿಕಾರವಿದ್ದರೂ, 'ಸ್ವತಂತ್ರ ಕಾರಣತ್ವವೆಂಬ ಸಾಧ್ಯವಿಲ್ಲದ್ದರಿಂದ ಈ ದೃಷ್ಟಾಂತವು ದೋಷಯುಕ್ತವಾದಿತು.

ಇಲ್ಲಿ **ಪ್ರಧಾನಂ**= ಜಡಪ್ರಕೃತಿ ಪಕ್ಷ= ಸಂದಿಗ್ಧ ಸಾಧ್ಯವಾನ್ **ಪಕ್ಷ**= ಸಂಶಯ ವಿಷಯವಾದ ಸಾಧ್ಯರೂಪಧರ್ಮ.

**ಸಾಧ್ಯ**= ಸಾಧನ ಮಾಡಿಸಿಕೊಳ್ಳಲಿಕ್ಕೆ ಯೋಗ್ಯವಾದದ್ದು. ಪರಿಣಾಮಿತ್ವ= ವಿಕಾರಹೊಂದುವಿಕೆ, **ಹೇತು**= ಒಂದು ವಸ್ತುವಿನನ್ನು ಸಾಧನ ಮಾಡತಕ್ಕದ್ದಕ್ಕೆ ಹೇತು ಎಂದು ಕರೆಸುವದು.

ಈ ತೆರದಿ ಪ್ರಧಾನ ( ಜಡಪ್ರಕೃತಿಯು ) ಜಗದ್ರೂಪದಿಂದ ವಿಕಾರ ಹೊಂದುವದಾದರೂ, ಸ್ವತಂತ್ರ ಕಾರಣನೆಂದು ಹೇಳುವದಕ್ಕೆ ಬರುವದಿಲ್ಲ. 'ವಿಕೇನಹವಾದ ಪಯೋಮುಂಡಂ ಭವತಿ ' ' ನಋತೇ ತ್ವತ್ ಕ್ರಿಯತೇ ಕಿಂಚನಾರೆ ' ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋಜೀದ ಏವಚ" ಇತ್ಯಾದಿ ಪ್ರಮಾಣಗಳಿಂದ, ಕ್ಷೀರದಧಿರೂಪವಾಗುವದು ವಿಷ್ಣುವಿನ ಆಧೀನವೆಂದು ಅಂಗೀಕಾರ ಮಾಡಿದ್ದಕ್ಕೆ ಪ್ರಧಾನ= ಜಡಪ್ರಕೃತಿಯು ಪ್ರಪಂಚರೂಪವಾಗಿ, ವಿಕಾರಹೊಂದುವದಕ್ಕಾಗಿ ಸ್ವತಂತ್ರ ಕಾರಣನಾದ ಪರಮಾತ್ಮನನ್ನು ಒಪ್ಪಲೇಬೇಕು. ಸಾಮಾನ್ಯ ಹಾಲು ಒಬ್ಬ ಪುರುಷನಿಂದ ಹೆಪ್ಪು ಹಾಕದೇ ಮೊಸರು ಆಗುವದಿಲ್ಲ. ಇದಾದರೂ ಕಿಂಚಿತ ಉಪಮೆ ಜಡಪ್ರಕೃತಿಯಲ್ಲಿ ವಿಷ್ಣುತಾನುನಿಂತು, ಅದನ್ನು ವಿಕಾರ ಹೊಂದಿಸಲು ಸಹ ವಿಷ್ಣುವು ಮುಖ್ಯ ಕಾರಣನು. ಜಡಪ್ರಕೃತಿ ಸ್ವತಂತ್ರ ಕಾರಣವಲ್ಲ ಕಾರಣ ಇದರಲ್ಲಿ **ಸಾಧ್ಯ ವೈಕಲ್ಯ**= ಪಕ್ಷವಾದ ಜಡಪ್ರಕೃತಿಯಲ್ಲಿ ಸಾಧನ ಮಾಡಲಿಕ್ಕೆ ಯೋಗ್ಯವಾದ, ಸ್ವತಂತ್ರ ಕಾರಣತ್ವವು ದೃಷ್ಟಾಂತವಾದ ಕ್ಷೀರದಲ್ಲಿ ಬರುವದಿಲ್ಲಾದ ಪ್ರಯುಕ್ತ **ಸಾಧ್ಯವಿಕಲ** =ತಸ್ಯಭಾವ, ಸಾಧ್ಯ ವೈಕಲ್ಯವೆಂಬ ದೋಷವು ಈ ಅನುಮಾನಕ್ಕೆ ಬರುತ್ತದೆಂದು ಭಾವ.

**ಶ್ಲೋಕ ॥ ವಿವಾದಾಧ್ಯಾಸಿತಾಸೃಷ್ಟಿ ।**
**ಶ್ಚೇತನೇಚ್ಛಾನುಸಾರಿಣೀ ॥**
**ಸೃಷ್ಟಿತ್ವಾತ್ ಪಟಸೃಷ್ಟಿರ್ವ್ವಾ ।**
**ತ್ಯನುಮಾ ಪಕ್ಷಸಾಧಿಕಾ:** ॥೧೦॥

ವಾರ್ದಿಕ ॥ ಸಾಧಕ ಪ್ರಮಾಣವಿದು ಕೇಳಿಲೋ ವಾದಿಯೆ ವಿ ।
ವಾದುದಂ ಸೃಷ್ಟಿಯದು ಚೇತನನಿಗನುಸರಿಸಿ ॥
ಆದುದಂ ಸೃಷ್ಟ್ವಾದ ಪಟದ ತೆರ ಸಾಧಕಂ ಸೃಷ್ಟಿಯೇ ಪಕ್ಷವಿದು ನೋಡ್ ॥
ಸಾಧ್ಯ ಚೇತನ ಯಿಚ್ಛೆಯಂತೆ ಸೃಷ್ಟಿತ್ವ ಹೇ ।
ತ್ವಾದ ಅನುಮಾನ ಲೋಕದಲಿ ಕಂಡೆದೆ ನಿಜ ಘ ।
ಟಾದಿಗಳ ಜಗಸೃಷ್ಟಿಪರಮು ಚೇತನನ ಆಧೀನ–ಪುರುಷೇಚ್ಛ ಮುಖ್ಯ ॥ ೧೦ ॥ ೮೧೯ ॥

ಆ ಸಾಧಕ ಪ್ರಮಾಣವು ಆಗಮಾನುಗ್ರಹಿತವಿದ್ದರೂ ಅನುಮಾನದಿಂದ ಶಂಕಿಸ ತಕ್ಕ ಆ ನಿರೀಶ್ವರ ಸಾಂಖ್ಯರನ್ನು ಕುರಿತು, ಅನುಮಾನ ಉಪನ್ಯಾಸವೇ ಉಚಿತವೆಂದು ಸಾಧಕ ಅನುಮಾನರೂಪ ಪ್ರಮಾಣವನ್ನೆ ಉಪನ್ಯಾಸ ಮಾಡುತ್ತಾರೆ.

ಅನ್ವಯ= ವಿವಾದಾಧ್ಯಾಸಿತಾ ಸೃಷ್ಟಿ, (ಪಕ್ಷ) ಚೇತನೇಚ್ಛಾನುಸಾರಣೀ, (ಸಾಧ್ಯ) ಸೃಷ್ಟಿ ತ್ವಾತ (ಹೇತು) ಪಟಸೃಷ್ಟಿವತ್, (ವಾ= ಉಪಮಾನಾರ್ಥಕ.) ಇತಿ, ಅನುಮಾ, ಪಕ್ಷಸಾಧಿಕಾ,

ಅರ್ಥ:— ವಿವಾದಾಧ್ಯಾಸಿತಾ= ಚೇತನಾಧಿನವೊ ಜಡಾಧೀನವೊ ಎಂಬ ವಿವಾದ ವುಳ್ಳದ್ದಾಗಿ ಆರೂಢವಾಗಿರುವ, ಸೃಷ್ಟಿಃ= ಜಗಸೃಷ್ಟಿಯು, ಚೇತನೇಚ್ಛಾನು ಸಾರಿಣೀ= ಚೇತನನ ಯಿಚ್ಛಾಕ್ಕೆ ಅನುಸರಿಸಿ, ಸೃಷ್ಟತ್ವಾತ್= ಸೃಷ್ಟಿತ್ವ ಇರೋಣದಿಂದ, ಪಟಸೃಷ್ಟಿರ್ವಾ= ವಸ್ತ್ರದ ಸೃಷ್ಟಿಯಂತೆ, ಆದೃಷ್ಟಾಂತವಾದ ಪಟಸೃಷ್ಟಿಯಲ್ಲಿ ಸೃಷ್ಟಿತ್ವ ಇರೋಣದಿಂದ, ಕುವಿಂದನಾದ ( ನೇಕಾರನ ) ಚೇತನ ಇಚ್ಛಾನು ಸಾರಿತ್ವ ಅಲ್ಲಿಕಂಡದೆ ಅದರಂತೆ ವಿವಾದ ವಿಷಯ ಭೂತವಾದ ಸೃಷ್ಟಿಯಲ್ಲಿ ಸೃಷ್ಟತ್ವ ( ಉತ್ಪತ್ತಿ) ಇರೋಣದ ರಿಂದ ಒಬ್ಬ ಚೇತನಿಚ್ಛಾನು ಸಾರಿತ್ವವನ್ನು ಸಾಧನ ಮಾಡುತ್ತೇವೆ. ಈ ಅನುಮಾನವು ನಮ್ಮ ಮತವನ್ನು ಸಾಧನ ಮಾಡತಕ್ಕದ್ದು.

ಭಾವಾರ್ಥ:— ಈ ಜಗತ್ತಿನ ಸೃಷ್ಟಿಯು ಜಡಾಧೀನವೋ ಅಥವಾ ಚೇತನಾ ಧೀನವೊಯೆಂಬ ಸಂಶಯಯುಕ್ತವಾದದ್ದು. ಚೇತನನೆಂದರೆ ಜ್ಞಾನವುಳ್ಳವನ ಇಚ್ಛೆಯಂತೆ

ಅನುಸರಿಸಿ ಚೇತನನ ಅಧೀನವಾಗಿರುವದು. ಹೇಗೆಂದರೆ, ಪಟ= ಬಟ್ಟೆಯ ಸೃಷ್ಟಿಯಂತೆ ಎಂಬ ಯುಕ್ತಿಯು ನಮ್ಮ ಸಿದ್ಧಾಂತವನ್ನು ಸಾಧಿಸುತ್ತದೆ. ಯಾವ ಪ್ರಕಾರವಾಗಿ ಒಂದು ವಸ್ತ್ರ ಗಡಿಗೆ ಮುಂತಾದವುಗಳು ಆಗಬೇಕಾದರೆ, ಒಬ್ಬ ಮನಸ್ಯನು ತಾನು ಆ ವಸ್ತುವನ್ನು ಮಾಡಬೇಕೆಂದು ಇಚ್ಛಿಸಿ, ತನ್ನ ಇಚ್ಛಾನುಸಾರವಾಗಿ ಆ ಪದಾರ್ಥವನ್ನು ನಿರ್ಮಿಸುವ ನಲ್ಲದೇ ಅದು ತಾನಾಗಿ ಪುರುಷ ಪ್ರಯತ್ನವಿಲ್ಲದೇ ಒಂದು ವಸ್ತುವಾದರೂ ಹುಟ್ಟಲಾರದು. ಇಲ್ಲಿ ಸಾಧಕವಾದ ಸೃಷ್ಟಿಯೇ= **ಪಕ್ಷ** ಚೇತನನ ಇಚ್ಛೆಯೇ= **ಸಾಧ್ಯ, ಸೃಷ್ಟಿತ್ವ**=ಸರ್ಜನ ದಲ್ಲಿರತಕ್ಕ ಧರ್ಮ= **ಹೇತು.**

ಈ ಅನುಮಾನ ಯುಕ್ತಿಗಳು ಲೋಕದಲ್ಲಿ ಕಂಡು ಬಂದಿದೆ. ನಿಜವಾಗಿ ಇದರಂತೆ ಈ ಪ್ರಪಂಚದ ಸೃಷ್ಟಿ ಪ್ರಧಾನ= ಜಡ ಪ್ರಕೃತಿಯೆ ಜಗದ್ರೂಪದಿಂದ ಪರಿಣಮಿಸುವ ದೆಂದು ಸೃಷ್ಟಿಯು, ಪರಮ= ಉತ್ತಮ ಚೇತನ ಜ್ಞಾನವುಳ್ಳವನಾದ, ಶ್ರೀವಿಷ್ಣುವಿನ ಆಧೀನವಾಗಿ ನಡೆಯುತ್ತದೆ. ಹೊರ್ತಾಗಿ, ತಾನಾಗಿ ಸ್ವತಂತ್ರದಿಂದ ನಡೆಯುವದಿಲ್ಲ. ಪುರುಷರೂಪಿಯಾದ ಶ್ರೀಹರಿಯ ಇಚ್ಛಾ ಮುಖ್ಯವಾದದು.

ಹೀಗೆ ಬ್ರಹ್ಮಸೂತ್ರ ಭಾಷ್ಯ ಅದ್ಯಾಯ (೨) ಪಾದ (೨) ರಚನಾಧಿ ಕರಣದಲ್ಲಿ ಪೇಳಿದ (೧) ಓಂ ರಚನಾನು ಪತ್ತೇಶ್ಚಾನು ಮಾನಂ ಓಂ, (೨) ಓಂ ಪ್ರವೃತ್ತೇಶ್ಚಓಂ, (೩) ಓಂಪಯೋಂಬು ವಚ್ಛೇ ತತ್ರಾಪಿ ಓಂ, (೪) ಓಂ ವ್ಯತಿರೇಕಾನವಸ್ಥಿತೇಶ್ಚಾನ ಪೇಕ್ಷ ತ್ವಾತ್ ಓಂ, ಈ ನಾಲ್ಕು ಸೂತ್ರಾರ್ಥ ಭಾಷ್ಯಾರ್ಥವನ್ನು ಹೇಳಿ, ನಿರೀಶ್ವರ ಸಾಂಖ್ಯರ ಮತವನ್ನು ನಿರಾಕರಿಸಿದ್ದಾರೆ

**ಶ್ಲೋಕ ||** **ಯಚ್ಚೇತ ನಾಚೇತನಯೋ |**
**ರಂಗಾಂಗಿ ತ್ವಾದಿಮುನ್ನತೇ ||**
**ಸೃಷ್ಟಾ ವೀಶಾನಪೇಕ್ಷಾಯಾಂ |**
**ತನ್ನ ಶೋಭನತಾಂ ವ್ರಜೇತ್** || ೧೧ ||

ವಾರ್ಧಿಕ | ಸೇಶ್ವರಂ ಸಾಂಖ್ಯ ಭಾಟ್ಟ ಪ್ರಭಾಕರ ಪ್ರಥಾ |
ನೀಶ್ವರನು ಜಡ ಪ್ರಕೃತಿಯೇ ಪ್ರಧಾನ ಚೇತನುಂ |
ಈಶ್ವರ ನಚೇತನಂ ಪ್ರಕೃತಿಂಗೆ ಅಂಗಾಂಗಿ ಭಾವ ಪೇಳ್ವೀಶನಲ್ಲ ||
ತಾಸ್ವ ಭಾವದಿ ಭಿನ್ನ ವನ್ಯೋನ್ಯದಾಪೇಕ್ಷ |
ಆಶು ಯಿಲ್ಲದೆ ಅನ್ಯೋನ್ಯಾಶ್ರಯದ ದೋಷ ವಿದು ||
ಈಶ್ವರಾ ಪೇಕ್ಷ ವಿರದಿರೆ ವಿವೇಕ ಜನರಿಂ ಅಂಗಿ ಕಾರಾ-
ರ್ಹವಲ್ಲ || ೧೧ || ೮೨೦ ||

ಈಗ, ಸೇಶ್ವರಸಾಂಖ್ಯ ಮತಾದಿಗಳನ್ನು ನಿರಾಕರಿಸುತ್ತಾರೆ.

**ಅನ್ವಯ :—** ಸೃಷ್ಟಾ, ಚೇತನ, ಅಚೇತನಯೋ, ಅಂಗ, ಅಂಗಿತ್ವಾದಿ, ಯತ್, ಮನ್ವತೇ, ತತ್, ಈನಾಶಾಪೇಕ್ಷಯಾಂ, ಶೋಭನತಾಂ ನವ್ರಜೇತ್,

ಸೃಷ್ಟಾ =ಪ್ರಪಂಚ ಸೃಷ್ಟಿ ವಿಷಯದಲ್ಲಿ, ಚೇತನ= ಜ್ಞಾನವುಳ್ಳ ಚೇತನ, ಅಚೇತನಯೋ= ಜಡವಾದ ಅಚೇತನಗಳಲ್ಲಿ, ಅಂಗಾಂಗಿತ್ವಾದಿ = ಒಂದು ಅಂಗ ಅಮುಖ್ಯ ಮತ್ತೊಂದು, ಅಂಗಿತ್ವ= ಮುಖ್ಯವೆಂದು, ಯತ್ ಮನ್ವತೇ,= ಇವೇ ಮೊದಲಾದ ಪ್ರಮೇಯವನ್ನು ಒಪ್ಪಿರುತ್ತಾರೋ, ತತ್ =ಹೀಗೆ ಅಂಗೀಕಾರ ಮಾಡುವದು, ಈಶಾನಾಪೇಕ್ಷಯಾಂ= ಈಶ್ವರಸ್ಯ ಅನಪೇಕ್ಷಯಾಂ= ಸ್ವತಂತ್ರ ಕರ್ತೃ ಒಬ್ಬನು ಬೇಡವೆಂದ ಪಕ್ಷದಲ್ಲಿ, ಶೋಭನತಾಂ ನವ್ರಜೇತ್ =ವಿವೇಕ ಜನರಿಂದ ಅಂಗೀಕಾರ ಮಾಡಲಿಕ್ಕೆ ಯೋಗ್ಯತೆಯನ್ನು ಹೊಂದಲಾರದು.

ಭಾವಾರ್ಥ :— ಸ್ವತಂತ್ರವಾಗಿ ಜಡವೇ ಚೇತನ ಸಮ್ಮಂಧ ರೂಪ ಕಾರ್ಯ ಮಾಡುತ್ತಿದ್ದರೆ, ಅದರಂತೆ ಜಗತ್ ಸೃಷ್ಟ್ಯಾದಿ ಕಾರ್ಯವನ್ನು ಮಾಡಬೇಕಾಗಿತ್ತು. ಹಾಗೆಯೆ ಜಗತ್ ಸೃಷ್ಟ್ಯಾದಿ ಕಾರ್ಯವನ್ನು ಮಾಡುವದಾಗಿದ್ದರೆ, ಅಪ್ರಧಾನವಾದ ಚೇತನವನ್ನು ಅಂಗೀಕಾರ ಮಾಡುವದು ವ್ಯರ್ಥವಾಗುವದು. ಕಾರಣ ಚೇತನಕ್ಕೆ ಆಗಲಿ ಅಚೇತನಕ್ಕೆ ಆಗಲಿ ಪರಸ್ಪರವಾಗಿ ಸಮ್ಮಂಧ ಮಾಡುವದಕ್ಕೆ ಪರಸ್ಪರ ಅಪೇಕ್ಷಾವನ್ನು ಬಯಸಿದರೆ, 'ಅನ್ಯೋನ್ಯಾಶ್ರಯ ದೋಷ ಬರುವದು. ಆದುದರಿಂದ ಈ ಚೇತನಾಚೇತನ ನಿಯಾಮಕನಾದ ಸ್ವತಂತ್ರನಾದ ಈಶ್ವರನನ್ನು ಚೇತನಾಚೇತನಗಳ ಪರಸ್ಪರ ಸಮ್ಮಂಧ ಮಾಡತಕ್ಕವನನ್ನು ಒಪ್ಪಲೇಬೇಕು. ಅಂದರೆ ಚೇತನ ಅಚೇತ ಇವೆರಡಕ್ಕೂ ಅಂಗಾಂಗಿ ಭಾವದಿಂದ ಕರ್ತೃತ್ವವನ್ನು ಹೇಳತಕ್ಕದ್ದು. ಅವೆರಡರ ಪರಸ್ಪರ ಸಂಸರ್ಗಾಖ್ಯ ಮೊದಲನೇ ಕಾರ್ಯ ಚೇತನ ಅಪೇಕ್ಷ ಇಲ್ಲದೇ, ಜಡ, ದೇಹಾದಿಗಳ್ನು ಹುಟ್ಟಿಸಲಾರದು. ಇದರಿಂದ ಕೇವಲ ಜಡಪ್ರಕೃತಿಗೆ ಒಪ್ಪದೇ ಇದ್ದರೆ, ಚೇತನಕ್ಕಾದರೂ ಇದೇ ರೀತಿಯಾಗಿ ಹೇಳಬೇಕಾಗುವದು. ಈ ಪ್ರಕಾರ ಚೇತನಕ್ಕಾದರೂ ಜಡಾನುಗ್ರಹವು ಬೇಕಾದಿತು ಅಂದಮೇಲೆ, ಅನ್ಯೋನ್ಯಶ್ರಾಯ ಪ್ರಸಂಗ ಬಂದಿತು, ಆದ ಕಾರಣ ಚೇತನಾಚೇತನ ನಿಯಾಮಕ, ಸ್ವತಂತ್ರ ಈಶ್ವರನನ್ನೊಪ್ಪದಿದ್ದರೆ, ಒಂದಕ್ಕೊಂದರ ಸತ್ತಾನೇ ಉಳಿಯಲಿಕ್ಕಿಲ್ಲ ಕಾರಣ ಸಾಂಖ್ಯ ಮತವು ಅಶೋಭನಂ

ಅಂಗಾಂಗಿತ್ವ ಆದಿ ಶಬ್ದದಿಂದ ಪೃಥಿವ್ಯಾದಿ ಭೂತ ಚತುಷ್ಟಯದಿಂದಲೇ ಸರ್ವ ಕಾರ್ಯವು ಆಗುವದೆಂದು ಹೇಳತಕ್ಕ ಚಾರ್ವಾಕನ ಮತವಾದರೂ, ಈಶ್ವರನನ್ನು ಅಂಗಿಕಾರ ಮಾಡದೇ ಯಿರುವದರಿಂದ ಅದು ಶೋಭಿಸುವದಿಲ್ಲ. ಮತ್ತು ಆದಿ ಶಬ್ದದಿಂದ ಸೇಶ್ವರಸಾಂಖ್ಯ ಮತವಾದರೂ ಈಶ್ವರನಲ್ಲಿ ಸರ್ವ ಕರ್ತೃತ್ವ, ಸರ್ವಜ್ಞತ್ವಾದಿ ಧರ್ಮ ಒಪ್ಪುವದಿಲ್ಲ ಪ್ರಯುಕ್ತ ಇದು ಸಹ ಸುಸಂಗವಾಗಲಾರದು. ಮತ್ತು ಈ ವಿಷಯವನ್ನು “ನವಿಶ್ವಕೃತ ಪಶುಪತಿ” ಎಂಬ ಶ್ಲೋಕದಿಂದ ಹೇಳುವದು.

ಈಶಾನಾಪೇಕ್ಷಯಾ ಎಂಬುವ ಶಬ್ದದಿಂದ, ನಿರೀಶ್ವರ ಭಾಟ್ಟ ಪ್ರಭಾಕರಾದಿ ಮತಗಳಲ್ಲಿ ಈ ದೋಷವು ಬಂದೇ ಬರುತ್ತದೆ. ಕಾರಣ ವಿದ್ವಜ್ಜನರ ಸಭೆಯಲ್ಲಿ ಶೋಭಿಸಲಾರದು.

ಅನ್ಯೋನ್ಯಾಶ್ರಯವು ಎರಡು ವಿಧವು.

೧. ಜ್ಞಪ್ತಿಯಲ್ಲಿ ಅನ್ಯೋನ್ಯಾಶ್ರಯವು ೨. ಉತ್ಪತ್ತಿಯಲ್ಲಿ ಅನ್ಯೋನ್ಯಾಶ್ರಯವು.

೧. ಘಟಜ್ಞಾನದಲ್ಲಿ ಪಟಜ್ಞಾನ ಕಾರಣ, ಮತ್ತು ಪಟಜ್ಞಾನದಲ್ಲಿ ಘಟಜ್ಞಾನ ಕಾರಣವೆಂದರೆ, ಜ್ಞಾನದಲ್ಲಿ ಅನ್ಯೋನ್ಯಾಶ್ರಯವು. ಜ್ಞಪ್ತಿಯಲ್ಲಿ ಅನ್ಯೋನ್ಯಾಶ್ರಯ.

೨. ಉತ್ಪತ್ತಿಯಲ್ಲಿ ಅನ್ಯೋನ್ಯಾಶ್ರಯವೆಂದರೆ, ಘಟೋತ್ಪತ್ತಿಯನ್ನು ಕುರಿತು ಪಟ ಕಾರಣ ಪಟೋತ್ಪತ್ತಿಯನ್ನು ಕುರಿತು ಘಟಕಾರಣವೆಂದರೆ, ಉತ್ಪತ್ತಿಯಲ್ಲಿ ಅನ್ಯೋನ್ಯಾಶ್ರಯವು.

ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ (೨) ಪಾದ (೨) ಅಧಿಕರಣ ೨-೪-೫ರಲ್ಲಿ ಹೇಳಿದ ಸೇಶ್ವರ ಸಾಂಖ್ಯಮತ ಮತ್ತು ನಿರೀಶ್ವರ ಸಾಂಖ್ಯ ಪ್ರಭೇಧ ನಿರಾಕರಣ ಮಾಡಿದ್ದಾರೆ.

**ಶ್ಲೋಕ || ಸರ್ವ ವಿನ್ನಿರ್ಮಿತಂ ಸರ್ವಂ |**
**ಕಾದಾಚಿತ್ಕತ್ವ ಹೇತುತಃ**
**ನಯದೇವಂ ನೋತದೇವಂ ||**
**ಯಥಾತ್ಮೇತೀಶ್ವರಾನುಮಾ** || ೧೨ ||

ವಾರ್ಧಿಕ || ಈಶ್ವರನು ಇಹನೆನ್ನೆ ವೇದಪ್ರಮಾಣಲ್ಲ !
ಈಶ್ವರನತೀಂದ್ರಿಯನು ಪ್ರತ್ಯಕ್ಷ ಮಾನಲ್ಲ !
ಈಶನದ್ವಿತಿಯ ಅಸದೃಶನಿಹನು ಅನುಮಾನ
ಸಿದ್ಧಿಸದೆನೆ ನಿರೀಶ್ವರಂ ||
ಹೇಸಿಯೆ ಅನಿತ್ಯಾದ ಸರ್ವಜಗ ಸರ್ವಜ್ಞ |
ಈಶ ನಿರ್ಮಿತವ್ಯಾವ ವಸ್ತು ಅಲ್ಲದು ನಿತ್ಯ ||
ನೈಸೆ ಜೀವನ ತೆರದಿ ಈಶನಿತ್ಯತ್ವ ಸಾಧಿತನುಮಾನೆಮ್ಮ
ಪಕ್ಷ || ೧೨ || ೬೨೧ ||

ಇನ್ನು ಚಾರ್ವಾಕ ಮತವನ್ನು ನಿರಾಕರಿಸುತ್ತಾರೆ.

**ಅನ್ವಯ:— ಸರ್ವಂ, ಸರ್ವವಿತ್, ನಿರ್ಮಿತಂ, ಕಾದಾಚಿತ್ಕತ್ವಹೇತುತಃ, ಯತ್ ಏವಂ, ನಃ, ತತ್, ಏವಂ, ನೋ, ಯಥಾ, ಆತ್ಮಾ, ಇತಿ ಈಶ್ವರಾನುಮಾ,—**

ಅರ್ಥ:— ಸರ್ವಂ=ಉತ್ಪನ್ನವಾದ ಸರ್ವ ಪದಾರ್ಥವು, ಸರ್ವವಿತ ನಿರ್ಮಿತಂ= ಸರ್ವಜ್ಞನಾದ ಈಶ್ವರನಿಂದ ನಿರ್ಮಿತವು, ಕಾದಾಚಿತ್ಕತ್ವಹೇತುತಃ ಕೆಲವು ಕಾಲ ಇರುವದೆಂಬ ಕಾರಣದಿಂದ, ಯತ್ ಏವಂನೋ,=ಯಾವುದು ಸರ್ವಜ್ಞನಿಂದ ಹೀಗೆ ನಿರ್ಮಿತವಲ್ಲವೋ, ತತ್ ಏವಂನೋ,=ಅದು ಕಾದಾ ಚಿತ್ಕಮಪಿ,=ಕೆಲವು ಕಾಲ ಇರತಕ್ಕಂಥಾದ್ದು ಆಗುವದಿಲ್ಲ. (ಅನಿತ್ಯವಲ್ಲ, ನಿತ್ಯ) ಯಥಾ ಆತ್ಮಾ.= ದೃಷ್ಟಾಂತ ಹೇಗಂದರೆ ಜೀವನಂತೆ, ಇತಿ ಈಶ್ವರಾನುಮಾ= ಹೀಗೆ ಸ್ವತಂತ್ರನಾದ ಈಶ್ವರ ಇದ್ದಾನೆಂತ ನಮ್ಮ ಪಕ್ಷದ ಸಾಧಿಸುವ ಅನುಮಾನವು ಇರುವದು.

ಭಾವಾರ್ಥ:— ಈಶ್ವರನು ಇರುವನೆಂಬುವದಕ್ಕೆ ಪ್ರಮಾಣವೇ ಇಲ್ಲವಾದ ಕಾರಣ ಹೇಗೆ ಈಶ್ವರನಿರುವನೆಂದು ಅಂಗೀಕಾರ ಮಾಡಬೇಕು ? ಈಶ್ವರನು ಇರುವನೆಂಬುದಕ್ಕೆ ವೇದವಂತೂ, ಪ್ರಮಾಣವೇ ಅಲ್ಲ. ಕಾರಣವೇನೆಂದರೆ ವೇದವೇ ಅಪ್ರಮಾಣವೆನ್ನುವ ಚಾರ್ವಾಕನಿಗೆ, ವೇದದಿಂದ ಈಶ್ವರನಿರುವನೆಂದು ಸಾಧಿಸಲಾಗದು. ಕಣ್ಣಿಗೆ ಕಾಣಿಸುವದೊಂದೆ ಸತ್ಯ, ಪ್ರತ್ಯಕ್ಷವೆಂಬುವ ಒಂದೇ ಪ್ರಮಾಣವೆನ್ನುವ, ಚಾರ್ವಾಕನಿಗೆ ಈಶ್ವರನು ಕಣ್ಣಿಗೆ ಕಾಣಿಸದವನು, ಅಗೋಚರನಾದ ಕಾರಣ ಪ್ರತ್ಯಕ್ಷ ಪ್ರಮಾಣವು ಸಹ ಕೂಡುವದಿಲ್ಲ.

ಈಶ್ವರನು, ಅದ್ವಿತೀಯ= ಅವನ ಸಮಾನರಿಲ್ಲ ಅಸದೃಶನಾದ ಕಾರಣ, ದೃಷ್ಟಾಂತ ಕೂಡುವದಿಲ್ಲಾದ ಪ್ರಯುಕ್ತ ಅನುಮಾನವು, ಈಶ್ವರ ವಿಷಯದಲ್ಲಿ ಸಾಧಕವಾಗುವದಿಲ್ಲ. ಆಗಮ, ಪ್ರತ್ಯಕ್ಷ, ಅನುಮಾನ (ಯುಕ್ತಿ)ಗಳಿಂದ ಈಶ್ವರನನ್ನು ಸಾಧಿಸುವದಿಲ್ಲೆಂದು ನಿರೀಶ್ವರರಾದ ಚಾರ್ವಕರು ಹೀಗೆ ಪೂರ್ವ ಪಕ್ಷ ಮಾಡಲು ಅವನ ಪೂರ್ವ ಪಕ್ಷಗಳನ್ನು ಮುಂದೆ ಹೇಳುವ ಯುಕ್ತಿಗಳಿಂದ ಖಂಡಿಸುತ್ತಾರೆ. ಹೇಸಿಯೇ= ಎಲೈ ಹೊಲಸು ಮನಸ್ಸುಳ್ಳ, ವೇದ ನಿಂದಕನೆ, ಕೇವಲ ವ್ಯತಿರೇಕ ಅನುಮಾನ ಲಕ್ಷಣವೆಂದರೆ ಸರ್ವ ಪಕ್ಷದಲ್ಲಿಯಿದ್ದಂಥಾದ್ದು. ಅವಿದ್ಯಮಾನ ಸಪಕ್ಷವುಳ್ಳದ್ದು, ಸರ್ವ ವಿಪಕ್ಷ ದೆಶೆಯಿಂದ ವ್ಯಾವೃತವಾದ ಹೇತು. ಇಂಥ ಅನುಮಾನ ಯಾವುದೆಂದರೆ, ಜೀವವುಳ್ಳ ಶರೀರ ಸಮೂಹವು (**ಪಕ್ಷ**) ಆತ್ಮಸಹಿತವಾದದ್ದು (**ಸಾಧ್ಯ**) ಪ್ರಾಣಾದಿಗಳುಳ್ಳದ್ದಾದ್ದರಿಂದ (**ಹೇತು**) ಇದಕ್ಕೆ ಯಾವುದು ಸಾತ್ಮಕವಲ್ಲವೊ ಅದು ಪ್ರಾಣಾದಿಗಳುಳ್ಳಂಥಾದ್ದಲ್ಲ. ದೃಷ್ಟಾಂತ= ಘಟ ಈ ವ್ಯತಿರೇಕ ಅನುಮಾನದಿಂದ ಸಮುಸ್ತ ಕಾರ್ಯಜಾತ ಸಕಲ ಜಗತ್ತು, ಸರ್ವಜ್ಞನಾದ ಈಶ್ವರನಿಂದ ಹುಟ್ಟಿಸಿದ್ದು. ಕೆಲವು ಕಾಲದಲ್ಲಿ ಇರುವದು, ಕೆಲಕಾಲ ಇಲ್ಲದಿರುವದು, ಇರುವದರಿಂದ ಯಾವ ವಸ್ತು ಈಶ್ವರನಿಂದ ನಿರ್ಮಿತವಲ್ಲವೋ ಅದು ಕಾದಾಚಿತ್ಕವಲ್ಲವೆಂದರೆ, ಅನಿತ್ಯವಲ್ಲ ನಿತ್ಯವಸ್ತು, ಐಸೆ= ಅಷ್ಟೆ? ಹೇಗಂದರೆ ಜೀವನಂತೆ ಜೀವನು ಈಶ್ವರನಿಂದ ನಿರ್ಮಿತನಲ್ಲವಾದುದರಿಂದ, ಕಾದಾಚಿತ್ಕವೂ ಅಲ್ಲ. ಅದಕ್ಕೆ ವಿರುದ್ಧವಾಗಿ, ಸರ್ವ ಪ್ರಪಂಚ ಕಾರ್ಯವು ಅನಿತ್ಯವಾದುದರಿಂದ, ಈಶ್ವರನಿಂದ ನಿರ್ಮಿಸಲ್ಪಟ್ಟ ಕಾರಣ

ಕಾರ್ಯರೂಪವಾದ ಜಗತ್ ಸೃಷ್ಟಿ ಮಾಡತಕ್ಕ ವಸ್ತುವಿನಿಂದ ಸಹಿತವಾದದ್ದೆಂದು ಹೇಳ ಬೇಕಾಗುವದು. ಕಾರಣ ಈಶ್ವರನನ್ನು ಒಪ್ಪಲೇಬೇಕಾಗುವದು. ಈ ಅನುಮಾನವೇ (ಯುಕ್ತಿಯಿಂದಲೇ) ನಮ್ಮ ಪಕ್ಷದಿಂದ ಈಶ್ವರನನ್ನು ಸಾಧಿಸುತ್ತದೆ. ಹೇಗಂದರೆ, ಸರ್ವಜ್ಞನು ಸರ್ವ ಕರ್ತೃನು (ಅದ್ವಿತೀಯ, ಅಸದೃಶ) ಇವನ ಸಮಾನ ಇನ್ನೊಬ್ಬರಿಲ್ಲ ದಿದ್ದರೂ; ಅಸರ್ವಜ್ಞ ಸರ್ವ ಕರ್ತೃನಲ್ಲದ ಈ ಜೀವನ ದೃಷ್ಟಾಂತದಿಂದಲೇ ಈಶ್ವರನು ಸಿದ್ಧಿಸುವನು.

**ಶ್ಲೋಕ ॥ ಬಲಾಯು ಸರ್ವಾನುಮಾನಾಂ ।**
**ವೇದಾ ಸ್ಯುರ್ಯೈರ ಪಾಲಿತಾಃ ॥**
**ಕಾಮಾದೇತಾಃ ಪ್ರವರ್ತಂತೇ ।**
**ಕಾಮಿನ್ಯ ಇವಭರ್ತೃಭಿಃ ॥ ೧೩ ॥**

ವಾರ್ಧಿಕ ॥ ಆವ ವೇದವು ಅಪ್ರಾಮಾಣ್ಯೆಂದು ಪೇಳಲವ ।
ಯಾವವೇದವು ಸರ್ವ ಅನುಮಾನಕಂ ಬಲವು ।
ಆವ ವೇದಗಳಿಂ ಅಪಾಲಿತನುಮಾನವಂ ತನ್ನಪತಿಯಿಂ ಅರಕ್ಷ ॥
ಕೇವಲಂ ಸ್ವೇಚ್ಛೆಯಲಿ ಚರಿಪ ಕಾಮಿನಿಯು ತೆರ ।
ಭಾವ ವಿಲ್ಲದೆ ವಾದಿ ಮನಸಿನಂತೊರ್ತಿಸುತ ।
ಯಾವದನು ಸಾಧಿಸಲಶಕ್ತತಿಪ್ರಸಂಗವಿಮು ವೇದ
ಪ್ರಮಾಣ ಮುಖ್ಯ ॥ ೧೩ ॥ ೮೨ ॥

ವ್ಯತಿರೇಕ ದೃಷ್ಟಾಂತ, ಯುಕ್ತನಾದ ಅನುಮಾನದಿಂದ ಈಶ್ವರನ ಇರುವಿಕೆಯುನ್ನು ಸಾಧಿಸಿ, ವೇದಪ್ರಮಾಣಯಿಲ್ಲಾದ ಕಾರಣ, ವೇದದಿಂದ ಈಶ್ವರ ಸಿದ್ಧಿಯಾಗಲಾರದು, ಹೀಗೆಂದರೆ ಆ ಈಶ್ವರ ಸಿದ್ಧಿಯಲ್ಲಿ ಕೇವಲ ವ್ಯತಿರೇಕ ಅನುಮಾನರೂಪ ಪ್ರಮಾಣವನ್ನು ಹೇಳಿ, ವೇದಪ್ರಾಮಾಣ್ಯವನ್ನು ಅಂಗೀಕರಿಸಿ ಕೇವಲ ಅನುಮಾನ ಮಾತ್ರದಿಂದ ಅಭಿಲ ಷಿತವಾದ ಪ್ರಮೇಯ ಸಿದ್ಧಿಯನ್ನು, ಅಂಗೀಕರಿಸಿದರೆ "ಅತಿ ಪ್ರಸಂಗ" ಬರುವದೆಂದು ಹೇಳುವರು.

**ಅನ್ವಯ:–ವೇದಾಃ, ಸರ್ವಾನುಮಾನಾಂ, ಬಲಾಯುಃ, ಸ್ಯುಃ, ಯೈಃ, ಅಪಾಲಿತಾಃ, ಏತಾಃ, ಭರ್ತೃಭಿ ಅಪಾಲಿತಾ, ಕಾಮಿನ್ಯಾ, ಇವ, ಕಾಮಾತ್, ಪ್ರವರ್ತಂತೆ ॥**

**ಅರ್ಥ:— ವೇದಾಃ= ವೇದಗಳು, ಸರ್ವ ಅನುಮಾನಾಃ= ಎಲ್ಲಾ ಯುಕ್ತಿಗಳಿಗೂ ಬಲಾಯಸ್ಯುಃ= ಪ್ರಾಬಲ್ಯಕ್ಕೆ ಕಾರಣವಾಗುವವು. ಯೈಃ ಅಪಾಲಿತಾಃ= ಆ ವೇದಗಳಿಂದ**

ರಕ್ಷಿತವಲ್ಲದ ಏತಾ= ಈ ಅನುಮಾನ (ಯುಕ್ತಿಗಳು) ಭರ್ತೃಭಿಃ ಅಪಾಲಿತಾ= ಸ್ವಪತಿಗಳಿಂದ ರಕ್ಷಿತದಲ್ಲದ, ಕಾಮಿನ್ಯಾ ಇವ= ಸ್ವೇಚ್ಛಾಚಾರರಾಗಿ ಚರಿಸತಕ್ಕ ಕಾಮುಕ ಸ್ತ್ರೀಯರಂತೆ, ಕಾಮಾತ್, ಪ್ರವರ್ತಂತೇ = ಆಯಾ ವಾದಿಗಳ ಇಚ್ಛಾನುಸಾರವಾಗಿ ಪ್ರವರ್ತಿಸುವವು.

ಭಾವಾರ್ಥ:—ವೇದಗಳು ಎಲ್ಲ ಅನುಮಾನಗಳಿಗೆ, (ಸಯುಕ್ತಿಗಳಿಗೆ) ಪ್ರಾಬಲ್ಯ= ಬಲಕೊಡಲು, ಮೂಲ ಆಧಾರವಾಗಿರುತ್ತವೆ. ವೇದಗಳಿಗೆ ಅನುಕೂಲವಾದ, ವೇದವೆಂಬುವ ಪ್ರಮಾಣದ ಬಲದಿಂದಲೇ ಅನುಮಾನಗಳು, ಅತೀಂದ್ರಿಯ ಧರ್ಮಾದಿಗಳು= ಕಣ್ಣಿಗೆ ಕಾಣಿಸದೆಯಿದ್ದ ಗುಣಧರ್ಮಗಳು ಆಯಾ ಅಭಿಲಷಿತ ಪ್ರಮೆಯ ಸಿದ್ಧಿಗೆ, ಕಾರಣವಾಗುತ್ತವೆ. ಇಲ್ಲದಿದ್ದರೆ ಆಗುವದಿಲ್ಲ. ಯಾಕಂದರೆ ಇಂತಹ ವೇದಗಳಿಂದ, ಅನುಗ್ರಹಿತಾಃ= ರಕ್ಷಿಸದೇ ಇರುವ ಎಲ್ಲ ಅನುಮಾನಗಳು ತಮ್ಮ ತಮ್ಮ ಪತಿಗಳಿಂದ ರಕ್ಷಿಸಲ್ಪಡದೇ ಇರುವ ಸ್ತ್ರೀಯರಂತೆ ಮನಬಂದಂತೆ ವರ್ತಿಸುತ್ತವೆ. ಯಾವ ಪ್ರಕಾರವಾಗಿ ತಮ್ಮ ಗಂಡಂದಿರ ರಕ್ಷಣಕ್ಕೆ ಸೇರದೆಯಿದ್ದ ಕಾಮುಕ ಸ್ತ್ರೀಯರು ವ್ಯಭಿಚಾರಿಗಳಾಗಿ ತಮ್ಮ ಮನಸಿಗೆ ಬಂದಂತೆ ಇರುವಂತೆ, ವೇದಗಳನ್ನಾಶ್ರಯಿಸದ ಸಕಲ ಅನುಮಾನಗಳು ಆಯಾ ವಾದಿ ಪ್ರತಿವಾದಿಗಳ ಮನಸ್ಸಿನಂತೆ ವರ್ತಿಸುವವು. ಯಾವ ಪಕ್ಷವನ್ನು ಸಾಧಿಸಲಿಕ್ಕೂ ಅಶಕ್ತಗಳೇ ಆಗಿರುವವು. ಈ ಕಾರಣದಿಂದ, ವೇದಪ್ರಾಮಾಣ್ಯವನ್ನು ಅಂಗೀಕರಿಸಲೇ ಬೇಕು. ಪ್ರಮಾಣಭೂತವಾದ ವೇದವೇ ಈಶ್ವರನ ಅಸ್ತಿತ್ವವನ್ನು ಸಾಧಿಸಿಕೊಡುವದು. ಶ್ರುತಿ ಸಹಾಯರಹಿತವಾದ ಅನುಮಾನದಿಂದ ಅಭಿಲಷತವಾದ ಅತೀಂದ್ರಿಯ ಪದಾರ್ಥವು ಸಿದ್ಧವಾಗಲಾರದು. ಯಾಕಂದರೆ "ಅತಿ ಪ್ರಸಂಗ"ವೆಂಬ ದೋಷ ಬರುವದು.

ಹೇಗಂದರೆ, ಧರ್ಮಾದಿಕಂ, (ಪ್ರತ್ಯಕ್ಷಂ) ವಸ್ತುತ್ವಾತ್= (ಹೇತು) ಘಟವತ್ ಹೀಗಾದರೂ ಅನುಮಾನ ಮಾಡಲಿಕ್ಕೆ ಬರುವದು. ಈ ಅನುಮಾನದಿಂದ ಅತೀಂದ್ರಿಯವಾದ ಧರ್ಮಾದಿಗಳು ಪ್ರತ್ಯಕ್ಷ ವಿಷಯವಾಗಬೇಕಾದೀತು. "**ಅತಿ ಪ್ರಸಂಗವೆಂದರೆ**= ಯಾದೃಶಾನುಮಾನೇನ ಅನಪೇಕ್ಷಿತಾರ್ಥ ಸಿದ್ಧಿಸ್ಸ್ಯಾತ್" ಏತತ್‍ದ್ರೂಪ ಅತಿ ಪ್ರಸಂಗೋ ನಾಮ ತರ್ಕಃ ಅಂದರೆ ಶ್ರುತಿಬೋಧಿತ ಸ್ಥಳದಲ್ಲಿ ಅದಕ್ಕೆ ವಿರುದ್ಧ ಕಲ್ಪನಾಕ್ಕೆ ಅತಿ ಪ್ರಸಂಗವೆಂದು ಶಾಸ್ತ್ರ ಮರ್ಯಾದಾ.

ಹೀಗೆ ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ (೨) ಪಾದ (೨) ಅಧಿಕರಣ (೩) ಅಭ್ಯುಪಗಮಾಧಿ ಕರಣದಲ್ಲಿ, "ಓಂ ಅಭ್ಯುಪಗಮೇಪ್ಯರ್ಥಾ ಭಾವಾತ್ ಓಂ" ಎಂಬ ಸೂತ್ರ ಭಾಷ್ಯ ರೀತ್ಯಾ, ಲೋಕಾಯತನಮತ ಚಾರ್ವಾಕರಾದ ನಾಸ್ತಿಕ ಮತವನ್ನು ಮೇಲೆ ವಿವರಿಸಿದಂತೆ ನಿರಾಕರಣ ಮಾಡಿದ್ದಾರೆ.

**ಶ್ಲೋಕ ॥ ಕಾರಣಂ ಪರಿಣಾಮಿಸ್ಯಾ ।**
**ದ್ಬ್ರಹ್ಮಣೋ ಚೇತನತ್ವತಃ ॥**
**ನ ಯದಿತ್ಥಂ ನೋತದಿತ್ಥಂ ।**
**ಯಥಾಕ್ಷೀರ ಪುರಸ್ಸರಮ್ ॥ ೪೧ ॥**

ವಾರ್ಧಿಕ ॥ ಆ ಮಹದ್ಬ್ರಹ್ಮ ಜಗದಾಕಾರದಿಂದ ಪರಿ ।
ಣಾಮಿಸುವನೆಂಬ ಭಾಸ್ಕರ ಮತದ ವಾದಿಗಳೆ ।
ಸ್ವಾಮಿ ಬಹ್ಮಗೆ ವಿಕಾರದ ಕಾರಣೆಲ್ಲ ಪರಮ ಸುಚೆತ ನಾದುದ್ದರಿಂ ॥
ನೇಮವಿದು ಯಾವದದುಪರಿಣಾಮ ವಾಗುವದು ।
ಪ್ರಾಮೆಯಲಿ ಆವಸ್ತು ಚಿತುವಲ್ಲ ಜಡವು ಪರಿ ।
ಣಾಮಿಸುವ ದೆಂಬುವದೆ ಸಿದ್ಧ ಪಾಲು ಮೊದಲಾದಂತೆ ಜಡನಲ್ಲ ಬ್ರಹ್ಮ ॥ ೧೪ ॥ ೮೨೩ ॥

ಭಾಸ್ಕರಾದಿ ಕೇಚನ ವಾದಿಗಳು ಬ್ರಹ್ಮನೇವೆ ಜಗದಾಕಾರನಾಗಿ ಪರಿಣಮಿಸಿ, ವಿಕಾರ ಹೊಂದುತ್ತಾನೆಂದು ಹೇಳುವ ಮತವನ್ನು ಖಂಡಿಸುತ್ತಾರೆ.

**ಅನ್ವಯ:—** ಬ್ರಹ್ಮಂ, ಪರಿಣಾಮಿ ಕಾರಣಂ, ನೋಸ್ಯಾತ್, ಚೇತನತ್ವತಃ, ಯತ ಇಥ್ಥಂ, ನ ಇತಿನ, (ನಭವತಿ) ತತ್, ಇಥ್ಥಂನೋ, ಯಥಾ, ಕ್ಷೀರ ಪುರಸ್ಸರಂ.

**ಅರ್ಥ:—** ಬ್ರಹ್ಮ= ಪರಬ್ರಹ್ಮನು ಪರಿಣಾಮಿಕಾರಣಂ= ಸ್ವಯಂ ತಾನೆ ವಿಕಾರ ವಾಗುವ ಕಾರಣನು, ನೋಸ್ಯಾತ್=ಆಗಲಾರನು, ಚೇತನತ್ವತಃ= ಜ್ಞಾನವುಳ್ಳ ಸಚ್ಚೇತನ ನಾದ ಕಾರಣ, ಯತ= ಯಾವುದು, ಇಥ್ಥಂ= ಹೀಗೆ ಪರಿಣಾಮಿಕಾರಣ, ನ, ಇತಿನ= ಆಗುವದಿಲ್ಲವೆಂತಲ್ಲವೊ, ತತ್ = ಆ ವಸ್ತು ಇಥ್ಥಂನೋ = ಚೇತನ ಆಗುವದಿಲ್ಲ. ಯಥಾ= ಯಾವ ದೃಷ್ಟಾಂತವೆಂದರೆ, ಕ್ಷೀರ= ಹಾಲು, ಪುರಸ್ಸರಂ= ಮೊದಲಾದದ್ದು.

ಬ್ರಹ್ಮ ಪರಿಣಾಮಿ ಕಾರಣಂ, ನ, ಭವತಿ, ಚೇತನತ್ವಾತ್, ಯತ್ ಪರಿಣಾಮಿ ಕಾರಣಂ, ತತ್ ಅಚೇತನಂ ಯಥಾಕ್ಷೀರಾದಿಕಂ, ವ್ಯತಿರೇಕ ದೃಷ್ಟಾಂತ:

**ಭಾವಾರ್ಥ:—** ಪರಬ್ರಹ್ಮನು ಸಚ್ಚೇತನಾದುದರಿಂದ, ಜಗದಾಕಾರನಾಗಿ ವಿಕಾರ ಹೊಂದಲಿಕ್ಕೆ ಕಾರಣನಾಗಲಾರನು. ಯಾವ ಪದಾರ್ಥವು ವಿಕಾರ ಹೊಂದುವ ಕಾರಣ ವಾಗುವದಿಲ್ಲವೆಂತಲ್ಲವೊ ಅಂದರೆ, ಪರಿಣಮಿಸುತ್ತಿದೆಯೊ, ಆ ವಸ್ತುವು ಸರ್ವಥಾ ಚೇತನವಾಗಲಾರದು, ಹೇಗಂದರೆ ದೃಷ್ಟಾಂತ ಹೇಳುತ್ತಾರೆ. ಹಾಲು ಮೊದಲಾದ

ಅಚೇತನ ಜಡ ವಸ್ತುವು ಮೊಸರು ಮೊದಲಾದ ರೂಪದಿಂದ ವಿಕಾರ ಹೊಂದುತ್ತದೆ. ಅದು ಹೇಗೆ ಚೇತನವಾಗಿಲ್ಲವೊ, ಪರಬ್ರಹ್ಮ ವಸ್ತುವು ಜಡವಾಗದೆ ಪರಮ ಮುಖ್ಯ ಚೇತನವಾದುದರಿಂದ, ಜಗತ್ತಿನ ರೂಪದಿಂದ ಪರಿಣಮಿಸಲಾರನು. ಆದಕಾರಣ ಬ್ರಹ್ಮನು ನಿಮಿತ್ಯ ಕಾರಣನಾದುದರಿಂದ, ಪರಿಣಾಮಿಕಾರಣನಾಗುವದಿಲ್ಲ. ಹೀಗಿಲ್ಲವಾದರೆ, ವ್ಯತಿರೇಕ ದಿಂದ ಬ್ರಹ್ಮನು ಅಚೇತನ (ಜಡ) ವೆಂದೆಯೆ ಪ್ರಾಪ್ತವಾಗುತ್ತದೆ. ಸಕಲ ಕಾರ್ಯಕ್ಕೂ ಪರಬ್ರಹ್ಮನೆ ಕಾರಣನೆಂದು ದ್ವೈತ ಸಿದ್ಧಾಂತಿಗಳು ನಾವು ಒಪ್ಪುತ್ತೇವೆ ಹೊರ್ತಾಗಿ ಬ್ರಹ್ಮನು ಜಗದಾಕಾರ ಪರಿಣಮಿಸುವನೆಂಬುದು ಕೂಡುವದಿಲ್ಲ. ಚೇತನ ವಸ್ತುವು ನಿತ್ಯ ನಿರ್ವಿಕಾರವೆಂದು ಅನೇಕ ಶ್ರುತಿಗಳು ಹೊಗಳುವದರಿಂದಲೂ, ಬ್ರಹ್ಮನು ಪರಿಣಾಮಿ ಕಾರಣನೆಂಬುದು "**ಸಾಧ್ಯ ವಿಶೇಷಣ ಪ್ರಕ್ಷೇಪಃ**= ವೆಂದರೆ ಬ್ರಹ್ಮನು ಜಗದಾಕಾರ ನಾಗಿ ಪರಿಣಮಿಸುವನೆಂಬುದು ಕಲ್ಪಿತವು.

ಈ ಭಾಸ್ಕರಮತ ಪರಿಣಾಮವಾದಿಗಳ, ಮತವನ್ನು ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ (೧) ಪಾದ (೪) ೬ನೇ ಪ್ರಕೃತ್ಯಧಿಕರಣದಲ್ಲಿ (೫) ಸೂತ್ರಗಳಿಂದ ಈ ಪರಿಣಾಮವಾದಗಳ ಮತವನ್ನು ನಿರಾಕರಿಸಿದ್ದಾರೆ. ಇದೇ ವಿಷಯವನ್ನೇ ಅನುವ್ಯಾಖ್ಯಾನದಲ್ಲಿ ಹೆಚ್ಚಾಗಿ ವಿವರಿಸಿದ್ದಾರೆ.

**ಶ್ಲೋಕ ॥ ನ ವಿಶ್ವ ಕೃತತ್ಪಶುಪತಿಃ ।**
**ಶ್ರೂಯಮಾಣ (ಣಾ) ಗುಣತ್ವತಃ ॥**
**ಚೈತ್ರವತ್ ಕಿಂಪುನರ್ವಿಘ್ನ ।**
**ಬ್ರಧ್ನಾದ್ಯಾ ಬಾಲಶಂಕಿತಾಃ** ॥ ೧೫ ॥

ವಾರ್ಧಿಕ ॥ ಆವ ನಾರಾಯಣಗೆ ವಿಶ್ವ ಕರ್ತೃತ್ವೇಳುವದು ।
ನಾವಂಗಿ ಕರಿಪರಲ್ಲನೆ ಪಾಶುಪತ ಪಕ್ಷ ।
ಕೇವಲದು ಬಾಲಶಂಕಿತ ಪಶುಪತೀಗಣಪ ಸೂರ್ಯಾದಿ
ಜಗಕರ್ತೃನ ॥
ಆವ "ಸೋರೋದೀತ" "ಯಂಕಾಮಯೇ ತಂತ" ।
ಮೇವಶ್ರುತಿ ಚೈತ್ರತೆರ ದುಃಖಿತರು ಪರತಂತ್ರ ॥
ಜೀವರಿರೆ ವಿಷ್ಣುವೇ ನಿರ್ದುಷ್ಟ ಸ್ವಾತಂತ್ರ ಸರ್ವಜ್ಞ
ಜಗಕರ್ತನು ॥ ೧೫ ॥ ೮೨೪ ॥

ಹಿಂದೆ ೮ನೇ ಶ್ಲೋಕದಲ್ಲಿ ಶ್ರೀಮನ್ನಾರಾಯಣನೇ ವಿಶ್ವಕರ್ತೃನೆಂದು ಹೇಳಿದ್ದು ಅಯುಕ್ತವು ರುದ್ರ, ಗಣಪತಿ, ಸೂರ್ಯ, ಸ್ಕಂದ, ಶಕ್ತಿ ಮೊದಲಾದವರೆ, ಜಗತ್ಕರ್ತೃರೆಂದು

ಪ್ರತಿಪಾದಿಸುವದು, ಆಗಮ ವಿರುದ್ಧವಾದ ಕಾರಣ ಅವರವರ ಆಕ್ಷೇಪವನ್ನು ಪರಿಹರಿಸಿ, ಆಯಾ ಮತಗಳೆಳನ್ನು ಚನ್ನಾಗಿ ಖಂಡಿಸುತ್ತಾರೆ.

ಮತ್ತು ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ (೨) ಪಾದ (೨) ೧೧ನೇ ಪತ್ಯುರಧಿಕರಣದಲ್ಲಿ ವೈದಿಕ ಪಾಷಂಡಿ, ಪಾಶುಪತರ ಮತವನ್ನು ೧೨ನೇ ಉತ್ಪತ್ತ್ಯಧಿಕರಣದಲ್ಲಿ ಶಾಕ್ತರ ಮತ ವನ್ನು ಖಂಡಿಸಿದ ಪ್ರಮೇಯವನ್ನೇ ಇಲ್ಲಿ ಉದಾಹರಿಸುತ್ತಾರೆ.

ಅನ್ವಯ:— ಪಶುಪತಿಃ, ವಿಶ್ವಕೃತ್‌ನ, ಶ್ರೂಯಮಾಣಾ ಗುಣತ್ವತಃ, ಚೈತ್ರವತ್, ಕಿಂ ಪುನಃ, ಬಾಲಶಂಕಿತಾ, ವಿಘ್ನ ಬ್ರಧ್ನಾದ್ಯಾ ವಿಶ್ವಕರ್ತಾರ, ನಭವಂತಿ, ಕಿಂ ವಕ್ತವ್ಯಂ,

ಅರ್ಥ:— ಪಶುಪತಿ= ರುದ್ರದೇವರು, ನ ವಿಶ್ವಕೃತ=ಪ್ರಪಂಚಕ್ಕೆ ಕರ್ತೃ ಅಲ್ಲ. ಶ್ರೂಯಮಾಣಾ ಗುಣತ್ವತಃ= ವೇದದಿಂದ ಕೇಳಲ್ಪಡುವ ದುಃಖಿತ್ವ ಅಸ್ವಾತಂತ್ರಾದಿ ದೋಷವುಳ್ಳವರಾದ್ದರಿಂದ, ಚೈತ್ರವತ್= ಚೈತ್ರನೆಂಬ ಒಬ್ಬ ಸಾಮಾನ್ಯ ಪುರುಷನಂತೆ, ಕಿಂ ಪುನರಿತಿ, ಬಾಲಶಂಕಿತಾ= ಪಶುಪತ್ಯಾದಿಗಳು ವಿಶ್ವಕರ್ತೃನೆಂದು ಹೇಳುವದು ವಿವೇಕರಹಿತರು, ಅವಿವೇಕಿಗಳು ಬಾಹುಲ್ಯವಾಗಿ ಮೇಲೆ ಕಾಣುವ ಅಪಾತತ ಅರ್ಥವನ್ನು ಸ್ವಪ್ರೀತಿಗೋಸುಗ ನಿಶ್ಚಯ ಮಾಡಿಕೊಂಡದ್ದೆ ಹೊರ್ತಾಗಿ ಮತ್ತೊಂದಲ್ಲ. ಆಯಾ ವಾದಿಗಳು ಸರ್ವ ಕರ್ತೃತ್ವಾದಿ ಗುಣತ್ವೇನ ಸಮರ್ಥನ ಮಾಡಿಕೊಂಡ ಅರ್ಥವು. ವಿಘ್ನ= ಗಣಪತಿ, ಬ್ರಧ್ನ= ಸೂರ್ಯ, ಆದ್ಯಾ= ಸ್ಕಂದ ಶಕ್ತ್ಯಾದಿಗಳು ವಿಶ್ವಕಾರ್ತರ ನಭವಂತಿ ಕಿಂ ವಕ್ತವ್ಯಂ= ಜಗತ್ಕರ್ತೃರುಗಳು ಅಲ್ಲವೆಂದು ಏನು ಹೇಳುವದು.

ಭಾವಾರ್ಥ:— ಪಾಶುಪತಾದಿ ಕೆಲವು ಆಗಮಗಳಲ್ಲಿ ರುದ್ರಾದಿಗಳು ಜಗತ್ಕರ್ತೃ ನೆಂದು ಹೇಳುತ್ತವೆ. ಆದರೆ ರುದ್ರದೇವರು ಸಮಸ್ತಕಾರ್ಯ ಜಾತವಾದ ಜಗತ್ತನ್ನು ಹುಟ್ಟಿ ಸತಕ್ಕವನಲ್ಲ. ಕಾರಣವೇನಂದರೆ, ''ಸೋರೋದೀ ದ್ಯದರೋದಿ ದ್ರುದ್ರಸ್ಯ ರುದ್ರತ್ವ'' ''ಯಂಕಾಮಯೇ ತಂತಮುಗ್ರಂ ಕೃಣೋಮಿ'' ಇತ್ಯಾದಿ ವೇದವಾಕ್ಯಗಳಲ್ಲಿ ಪೇಳುವ ಗುಣವಿರುದ್ಧವಾದ, ದುಃಖಿತ್ವ ಶ್ರೀ ಲಕ್ಷ್ಮೀದೇವಿ ಮೊದಲಾದವರ ಆಧೀನವುಳ್ಳವನೆಂದು ಹೇಳಿದಕಾರಣ ರುದ್ರನಿಗೆ, ಜಗಕ್ಕರ್ತೃತ್ವವು ಕೂಡುವದಿಲ್ಲ. ಇದಕ್ಕೆ ಉಪಮೆ ಚೈತ್ರ ನೆಂಬುವ ಒಬ್ಬ ಜೀವನಂತೆ, ಚೈತ್ರನೆಂಬ ಒಬ್ಬ ಜೀವನು ದುಃಖವುಳ್ಳವನೂ, ಮತ್ತು ಪರಾಧೀನನಾದುದರಿಂದ ಜಗತ್ತಿಗೆ ಕರ್ತೃನಾಗಲಾರನು. ಈ ದೋಷಗಳುಳ್ಳವನಾದುದ ರಿಂದ, ಚೈತ್ರನೆಂಬ ಜೀವನಂತೆಯೆ ರುದ್ರನು ಜಗತ್ತಿಗೆ ಕರ್ತೃನಾಗಲಾರನು. ಎಂದು ಹೇಳುವಾಗ, ಆ ರುದ್ರನಕಿಂತಲೂ ಕಡಿಮೆಯಾದ ಗಣಪತಿ, ಸೂರ್ಯ, ಸ್ಕಂದ, ಶಕ್ತಿ ಮೊದಲಾದವರು ಜಗತ್ಕರ್ತೃರಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಇದು ಅವಿವೇಕಿ ಗಳಾದ ಮೂಢರಿಂದ ಅಕ್ಷೇಪಿಸಿದ್ದು ಸರಿಯಲ್ಲ. ಪಾಶುಪತ್ಯಾಗಮದಲ್ಲಿ ಹೇಳಿರುವದು ಅದು ಅಯುಕ್ತವು.

''ರುಜಂದ್ರಾವತೇಯುಸ್ಮಾತ್ ರುದ್ರಸ್ತಸ್ಮಾತ್ ಜನಾರ್ದನಃ'' ಇತ್ಯಾದಿ ಪ್ರಮಾಣ ಗಳಿಂದ ನಾರಾಯಣನೇ ರುದ್ರ ಶಬ್ದವಾಚ್ಯನೆಂದು ತಿಳಿಯಬೇಕು. ರುದ್ರಾದಿಗಳು,

ದುಃಖಿತರು, ಪರತಂತ್ರರೂ ಆದ ಜೀವರಿದ್ದ ಕಾರಣ ಸ್ವತಂತ್ರ್ರೇಣ ವಿಶ್ವಕರ್ತೃಗಳಲ್ಲಿ ಮುಖ ವಿಷ್ಣುನಾದ ನಾರಾಯಣನು ಸರ್ವ ಕರ್ತೃನೂ, ನಿರ್ದೋಷನೂ, ಸ್ವತಂತ್ರ ಪುರುಷನೂ ಸರ್ವವನ್ನು ಬಲ್ಲವನೂ, ಆದಕಾರಣ, ಸಕಲ ಜಗತ್ತಿಗೆ ಕರ್ತೃನೆಂದು ನಿಶ್ಚಯವಾ ತಿಳಿಯಬೇಕು

ಶ್ಲೋಕ ॥ ನನು ಸೌಖ್ಯಾದಿ ಮಾನ್ನೇಶೋ ।
ದುಃಖಾದಿರಹಿತತ್ವತಃ ॥
ಯೋನೈವಂ ಸ್ಯಾತ್ಸನೈವಂ ।
ಸ್ಯಾದ್ಯಥಾ ಸಂಸೃತಿ ಮಾನಿತಿ ॥ ೧೬ ।

ವಾರ್ಧಿಕ ॥ ಈಶನು ಸುಖಾದಿ ಗುಣಿಯಾಗ ನಾತನಲಿ ರವ ।
ಕ್ಲೇಶ ದುಃಖಾದಿಗಳು ಇಲ್ಲ್ಯಾವ ಸುಖರಹಿತ॥
ಲೇಸು ದುಃಖವುರಹಿತ ಸಂಸಾರಿ ಜೀವ ಸುಖವುಳ್ಳ
ನಾದ್ದುಕ್ಕೆ ದುಃಖ ॥
ಆಶು ಯಿರಲೇ ಬೇಕು ಎಂಬ ಅನುಮಾನದಿಂ ।
ಈಶನಲಿ ನೀವು ಸುಖಮಾತ್ರ ಪೇಳುತ ದುಃಖ ॥
ಲೇಸು ಒಪ್ಪದೆ ಯಿರುವದಿದು ಅಯುಕ್ತೆಂದು ।
ವೈಶೇಷಿಕರ ಪೂರ್ವಪಕ್ಷ ॥ ೧೬ ॥ ೮೨೫ ॥

**ವೈಶೇಷಿಕ ನೈಯ್ಯಾಯಕಾದಿ** ಮತಖಂಡನ ಪೂರ್ವಕ, ನಾರಾಯಣನಿಗೆ ಅನಂತ ಗುಣ ಪರಿಪೂರ್ಣತ್ವವನ್ನು ಹೇಳುತ್ತಾರೆ.

ಬ್ರಹ್ಮಸೂತ್ರ ಭಾಷ್ಯ ಅಧ್ಯಾಯ (೨) ಪಾದ (೨) ಆರನೇ ವೈಶೇಷಿಕಾಧಿಕರಣದಲ್ಲಿ ಪರಮಾಣ್ವಾರಂಭಾದಿ ವಾದಿಗಳ ಮತವನ್ನು ಖಂಡಿಸಿದ ವಿಷಯವನ್ನೆ, ವಿಸ್ತಾರವಾಗಿ ೨೩ನೇ ಶ್ಲೋಕದವರಿಗೆ ಹೇಳುತ್ತಾರೆ. ಸದ್ಯ, ಈ ಶ್ಲೋಕದಲ್ಲ, ಶ್ರೀಮನ್ನಾರಾಯಣನು ಅನಂತಗುಣ ಪರಿಪೂರ್ಣನೆಂದು, ಒಪ್ಪದಿರುವ ವೈಶೇಷಿಕರ ಮತ ಪೂರ್ವಪಕ್ಷವನ್ನು ಅನು ವಾದ ಮಾಡುತ್ತಾರೆ.

ಅನ್ವಯಃ:— ಈಶಃ, ಸೌಖ್ಯಾದಿಮಾನ್, ನ, ದುಃಖಾದಿ ರಹಿತ್ವತಃ, ಯಃ, ಏವಂ, ನಸ್ಯಾತ್, ಸಃ, ಏವಂ, ನಸ್ಯಾತ್, ಯಥಾ, ಸಂಸೃತಿಮಾನ್, ಇತಿ ನನುಃ,

ಈಶಃ=ಸೌಖ್ಯಾದಿ ಅನಂತಗುಣ ವಿಶಿಷ್ಟತ್ವೇನ ಅಂಗೀಕರಿಸಲ್ಪಟ್ಟ ನಾರಾಯಣನು, ಸೌಖ್ಯಾದಿನ= ಸುಖಾದಿ ಅನಂತಗುಣ ವಿಶಿಷ್ಟನಾಗುವದಿಲ್ಲ. ದುಃಖಾದಿ ರಹಿತತ್ವಾತ್=

ಸುಃಖ, ಅಜ್ಞಾನಾದಿ ಗುಣವಿಲ್ಲದೇಯಿದ್ದ ಪ್ರಯುಕ್ತ, ಯಃ= ಯಾವ ಪುರುಷನು ಏವಂ ಸ್ಯಾತ್= ಸೌಖ್ಯಾದಿ ರಹಿತನಾಗುವದಿಲ್ಲೊ, ಸಃ= ಆ ಪುರುಷನು, ಏವಂ ನಸ್ಯಾತ್, ಸುಃಖಾದಿ ರಹಿತನೂ ಆಗುವದಿಲ್ಲ. ಯಥಾ=ಹೇಗಂದರೆ, ಸಂಸೃತಿವಾನ್=ಯಾವ ಪ್ರಕಾರ ಾಗಿ ಸಂಸಾರದಲ್ಲಿರುವ ಜೀವನಂತೆ, ಇತಿನನು=ಹೀಗೆ ತಾರ್ಕಿಕರ ಆಕ್ಷೇಪವು.

ಇಲ್ಲಿ ಸ್ಪಷ್ಟ ಅನುಮಾನ ಪ್ರಯೋಗ ಹೇಗಂದರೆ, ವಿವಾದ ವಿಷಯೀ ಭೂತನಾದ ಈಶ್ವರನು ಸುಖಾದಿ ರಹಿತನು. ಯಾಕಂದರೆ ದುಃಖಾದಿಗಳು ಇಲ್ಲದೇಯಿದ್ದ ಪ್ರಯುಕ್ತ, ಈಶ್ವರನು ಸುಖವಿಶಿಷ್ಟನಾದರೆ ದುಃಖವುಳ್ಳವನೂ ಆಗಲಿ. ಈಶ್ವರನು ದುಃಖ ವಿಶಿಷ್ಟನಲ್ಲ ಕಾರಣ ದೆಶೆಯಿಂದ ಸುಖಾದಿವಿಶಿಷ್ಟನೂ ಅಲ್ಲ. ಈ ತರ್ಕದಿಂದ ವಿರುದ್ಧವಾದ ಪ್ರಯುಕ್ತ ನಾರಾಯಣನು, ಸೌಖ್ಯಾದಿ ಅನಂತ ಗುಣವುಳ್ಳವನಲ್ಲವೆಂದು ಪೂರ್ವ ಪಕ್ಷ.

"ವಿಮತಃ ಈಶ್ವರಃ ಸುಖಾದಿ ರಹಿತಃ ದುಃಖಾದಿ ರಹಿತತ್ವಾತ್"
"ಯಃ ಸುಖಾದಿ ರಹಿತೋನಭವತಿ, ಸ ದುಃಖಾದಿ ರಹಿತೋನಭವತಿ"
"ಯಥಾ ಸಂಸಾರಿ ಚೇತನಃ, ನ ಚಾಯಂ ಸುಖಾದಿ ರಹಿತಃ ತಸ್ಮಾ
ದುಃಖಾದಿ ರಹಿತೋ ನ ಭವತಿ ||

ಭಾವಾರ್ಥ:— ಈ (ತಾರ್ಕಿಕ) ವೈಶೇಷಿಕ ಮತದವರು. ಜಗತ್ಕಾರಣನಾದ ಈಶ್ವರ ನನ್ನು ಒಪ್ಪಿದಾಗ್ಯೂ ಸುಖ ಮತ್ತು ದುಃಖ, ಒಂದನ್ನು ಬಿಟ್ಟು ಒಂದು ಇರದಿದ್ದ ಕಾರಣ, ವೈಶೇಷಿಕರ ಮತದ ರೀತ್ಯಾ ಅಶೇಷ ದುಃಖ ನಿವೃತ್ತಿಯೇ ಮೋಕ್ಷವಾದುದರಿಂದ, ಈಶ್ವರನು ಜ್ಞಾನಾನಂದಾದಿ ಗುಣಗಳಿಲ್ಲದವನೆಂದು ತಿಳಿಯುತ್ತಾರೆ. ಈಶ್ವರನು ಸುಖಾದಿ ಗುಣವುಳ್ಳವನಾಗಲಾರನು. ಏಕಂದರೆ ಆತನಲ್ಲಿ ದುಃಖಾದಿ ಗುಣಗಳಿಲ್ಲ. ಯಾವನು ಸುಖಾದಿ ಗುಣಗಳಿಲ್ಲದವನೊ ಆತನಲ್ಲಿ ದುಃಖಾದಿ ಗುಣಗಳಿಲ್ಲವೆಂದು, ಅಥವಾ ಈಶ್ವರನು ಸುಖವಂತನಾಗಿದ್ದರೆ, ದುಃಖಿಯೂ ಆಗಬೇಕು. ಸಂಸಾರಿ ಜೀವನಂತೆ ಇದು ಸುಪ್ರ ಸಿದ್ಧವಷ್ಟೆ? ಹೇಗೆ ಸಂಸಾರಿ ಜೀವನು, ಸುಖಾದಿ ರಹಿತನಲ್ಲವಾದ್ದರಿಂದ, ದುಃಖಾದಿ ರಹಿತನೂ ಅಲ್ಲ (ಅಂದರೆ ಜೀವನು ಸುಖದುಃಖವುಳ್ಳವನು.) ಸುಖವಿದ್ದಲ್ಲಿ ದುಃಖವೂ ಇರಬೇಕೆಂಬ ವೈಶೇಷಿಕರ ಪೂರ್ವ ಪಕ್ಷವನ್ನು ಹೇಳಿ, ಈ ಪೂರ್ವ ಪಕ್ಷವನ್ನು ಮುಂದೆ ಖಂಡಿಸುತ್ತಾರೆ.

ಶ್ಲೋಕ || ಏವಂ ಚೇದ್ವಿಮತೋ ಜ್ಞಾನೀ |
ನ ಭ್ರಾಂತಿ ರಹಿತತ್ವತಃ ||
ಯಏವಂ ನೋ ಸಏವಂನೋ |
ಭವೀವೇತ್ಯನು ಮೀಯತೇ || ೧೭ ||

ವಾರ್ಧಿಕ || ಈಶನಲಿ ದುಃಖಿಲ್ಲದನು ಮಾನದಿಂ ಸುಖ ರ ।
ಮೇಶನಲಿ ನೀನೊಡಂಬಡದ ಪಕ್ಷದಲಿನ್ನು ||
ಈಶ ಸರ್ವಜ್ಞ ವಿಪ್ರತಿಪತ್ತಿ ವಿಷಯದಿ ಜ್ಞಾನವಾನಾಗದಿರಲಿ ||

ಮೋಸ ಭ್ರಾಂತಿಲ್ಲದವ ನಾಹದಕೆ ಜೀವರುಂ |
ಕ್ಲೇಶಭವರೋಳ್ ನಾವದೇಮಾನವಿಂ ಹರಿಗೆ ||
ಲೇಶ ಜ್ಞಾನಿಲ್ಲೆಂದು ಸಾಧಿಪೆ ಪರೋಕ್ಷಾನು ಮಾನ
ಪ್ರತ್ಯಕ್ಷ ದೂಷ್ಯ || ೧೭ || ೮೨೬ ||

ಈ ಪ್ರಕಾರವಾಗಿ, ವೈಶೇಷಿಕರ ಪರೋಕ್ಷಾನುಮಾನ ಅಂದರೆ, ಪರೋಕ್ಷನಾದ ಪರಮಾತ್ಮನನ್ನೆ ಪಕ್ಷವಾಗಿವುಳ್ಳ ಅನುಮಾನವನ್ನು ಪ್ರತ್ಯಕ್ಷಾನುಮಾನದಿಂದ ಖಂಡಿಸುತ್ತಾರೆ.

ಅನ್ವಯ:— ಏವಂ ಚೇತ್, ವಿಮತಃ ಜ್ಞಾನಿ ನ ಸ್ಯಾತ್, ಭ್ರಾಂತಿ ರಹಿತ್ವತಃ, ಯಃ ಏವಂ ನೋ, ಸಃ ಏವಂ ನೋ, ಭವಿ ಇವ. ಇತಿ ಅನುಮೀಯತೇ,

ಅರ್ಥ:— ಏವಂ ಚೇತ್= ಹೀಗೆ ಈಶಗೆ ಸುಖಾದಿಗಳಿಲ್ಲವೆಂದು ಆಕ್ಷೇಪಿಸಿದರೆ, ವಿಮತಃ= ಸರ್ವಜ್ಞನೋ ಅಸರ್ವಜ್ಞನೊ ಎಂತ ವಿವಾದ ವಿಷಯನಾದ ಪುರುಷನು, ಜ್ಞಾನಿನಸ್ಯಾತ್= ಜ್ಞಾನವುಳ್ಳವನಾಗಲಾರನು. ಭ್ರಾಂತಿ ರಹಿತತ್ವಾತ್= ವಿಪರೀತ ಜ್ಞಾನ ಯಿಲ್ಲದವನಾದ್ದರಿಂದ, ಯಃ ಏವಂ ನೋ= ಯಾವನು ಹೀಗೆ ಜ್ಞಾನರಹಿತನಲ್ಲವೊ, ಸಃ ಏವಂ ನೋ= ಅವನು ಹಾಗೆ ಭ್ರಾಂತಿರಹಿತನೂ ಅಲ್ಲ. (ಭ್ರಾಂತಿವುಳ್ಳವನೇ) ಭವೀ ಇವ= ಸಂಸಾರದಲ್ಲಿರುವ ಪುರುಷನ ದೃಷ್ಟಾಂತದಂತೆ, ( ಅಸ್ಮಾಭಿಃ= ನಮ್ಮಗಳಿಂದ ) ಇತಿ ಅನುಮೀಯತೇ= ಈ ರೀತಿ ಅನುಮಾನ ಮಾಡಿ ಹೇಳಲ್ಪಡುತ್ತದೆ. ( ಆ ತಾರ್ಕಿಕನ ಪೂರ್ವಪಕ್ಷ ಯುಕ್ತಿಗಳನ್ನು ಖಂಡಿಸಲಿಕ್ಕೆ ಅವನ ಯುಕ್ತಿಗೆ ಸರಿಯಾಗಿ, ಈಶಗೆ ಅಜ್ಞಾನಾದಿಗಳನ್ನು ಸಾಧಿಸಲು ಈ ರೀತಿ ಯುಕ್ತಿಯನ್ನು ಹೇಳಿರುವರು. ಯಾಕಂದರೆ ತಾರ್ಕಿಕನು ವೇದವನ್ನೂ, ಈಶ್ವರನನ್ನೂ ಮತ್ತು ಈಶ್ವರನಿಗೆ, ಸರ್ವಜ್ಞತ್ವವನ್ನೂ ಒಪ್ಪುತ್ತಾನೆ. )

ಭಾವಾರ್ಥ:— ಈಶ್ವರನಲ್ಲಿ ದುಃಖವಿಲ್ಲದ್ದರಿಂದ, ಸುಖವನ್ನು ನೀನು ಒಪ್ಪದಿದ್ದ ಪಕ್ಷದಲ್ಲಿ, ಸರ್ವಜ್ಞನಹುದೊ, ಅಲ್ಲೋ ಎಂಬ ವಿವಾದ= ಸಂಶಯಕ್ಕೆ ವಿಷಯನಾದ, ಪರಮಾತ್ಮನು ಜ್ಞಾನವುಳ್ಳವನೂ ಆಗದಿರಲಿ; ಯಾಕಂದರೆ ಈಶ್ವರನಿಗೆ, ಭ್ರಾಂತಿ ವಿಪರೀತ ಜ್ಞಾನವು ಇಲ್ಲ. ಈ ನಿನ್ನ ಅನುಮಾನದಿಂದ, ಲೋಕದಲ್ಲಿ ಯಾವನು ಜ್ಞಾನ ರಹಿತನಲ್ಲನೋ, ಆತನು ಭ್ರಾಂತಿ ರಹಿತನೂ ಅಲ್ಲ. ಭ್ರಾಂತಿಯುಳ್ಳವನಾಗಿಯೇ ಇರುವನೆಂದು, ಸಂಸಾರದಲ್ಲಿರತಕ್ಕ ಜೀವನಲ್ಲಿ ಪ್ರತ್ಯಕ್ಷ ಕಂಡುಬರುತ್ತದೆ. ಈ ಸಂಸಾರಿ ಜೀವನು, ಜ್ಞಾನವುಳ್ಳವನಾದುದರಿಂದ, ಭ್ರಾಂತಿ= ವಿಪರೀತ ಜ್ಞಾನವುಳ್ಳವನು ಆಗಿದ್ದಾನೆ.

ಎಲೈ ವೈಶೇಷಿಕರೆ, ನೀವು ಸಂಸಾರಿ ಜೀವನ ದೃಷ್ಟಾಂತದಿಂದ, ಈಶ್ವರನಲ್ಲಿ ಸುಖ ವಿಲ್ಲೆಂದು ಹೇಳಿದರೆ ನಾವು ಅದೇ ಜೀವರ ದೃಷ್ಟಾಂತದಿಂದ ಈಶ್ವರನು ಜ್ಞಾನವಿಲ್ಲದವ ನೆಂದು ಸಾಧಿಸುತ್ತೇವೆ.

**ಶ್ಲೋಕ || ಸರ್ವಜ್ಞಸ್ಯಾಜ್ಞತಾಂ ವೇದಃ |**
**ಶ್ರದ್ಧೇಯೋವಿ (ನಿ) ರುಣದ್ಧಿ ಚೇತ್ ||**
**ತಸ್ಯೈವಾ ಮಂದ ಮಾನಂದಂ |**
**ವದನ್ನಾಶ್ರಾವ್ಯ ಸೌಕಥಂ || ೧೮ ||**

ವಾರ್ಧಿಕ || ಎಲ್ಲ ರಾದರಣೀಯ ವೇದ ಯಸ್ಸರ್ವಜ್ಞ |
ಸಲ್ಲಲಿತ ಜಗದೀಶ ಸರ್ವಜ್ಞ ಗಜ್ಞತ್ವ ||
ವಿಲ್ಲೆಂಬ ಯುಕ್ತಿಯ ನಿರಾಕರಿಪದಾದರೂ
ಆವ ಪರಮಾತ್ಮನಿಂಗೆ ||
ಮೆಲ್ಲ ಪೂರ್ಣಾನಂದವಂ ಪೇಳ್ವ ವೇದವಿದು |
ಬಲ್ಲಿದದು "ಆನಂದಂ ಬ್ರಹ್ಮಣೋ ವಿದ್ವಾನ್" ||
ಸಲ್ಲದೆಯೆ ನೀ ಕೇಳಲಿಲ್ಲವೂ ನಿನ್ನ ಯುಕುತಿಗಂ
ಯುಕುತಿ ಪೇಳ್ದೆ || ೧೮ || ೮೨೭ ||

ಹೀಗಾದರೆ, ಕೇವಲಾನುಮಾನದಿಂದ ಈಶ್ವರನಲ್ಲಿ ಜ್ಞಾನವಿಲ್ಲೆಂದು ಸಾಧಿಸುವದು ಅಯುಕ್ತವು ಯಾಕಂದರೆ, "ಯಃ ಸರ್ವಜ್ಞ ಸರ್ವವಿತ್" ಎಂಬ ಸರ್ವಜ್ಞತ್ವ ಪ್ರತಿ ಪಾದಕ ಶ್ರುತಿಗೆ ವಿರುದ್ಧವಾಗಿರುತ್ತದೆ ವೇದವಾಕ್ಯಗಳು ಪ್ರಮಾಣವೆಂದು ನೀವು ಅಂಗೀಕರಿಸುವಿರಿ. ದುಃಖಾದಿಗಳಿಲ್ಲವೆಂಬುವ ಹೇತುವು ಬಾಧಿತವಾದಿತು.

ಈ ಪ್ರಕಾರ ಶಂಕಿಸಿ, ತಾರ್ಕಿಕನ ದುಃಖಾದಿ ರಹಿತತ್ವ ಹೇತುವಾದರು ಬಾಧಿತ ವಾಗುವದು, ಈ ಅಭಿಪ್ರಾಯದಿಂದ ತಾರ್ಕಿಕನ ಅನುಮಾನವನ್ನು ದೂಷಿಸುತ್ತಾರೆ.

ಅನ್ವಯ:— ಶ್ರದ್ಧೇಯಃ, ವೇದಃ, ಸರ್ವಜ್ಞಸ್ಯ, ಅಜ್ಞತಾಂ, ನಿರುಣದ್ಧಿ, ಚೇತ್, ತಸ್ಯ, ಏವಂ, ಅಮಂದಂ, ಆನಂದಂ, ವದನ್, ಅಸೌ, ಕಥಂ, ನ, ಅಶ್ರಾವಿ,

ಶ್ರದ್ಧೇಯಃ, ವೇದಃ= ಪ್ರಮಾಣವಾಗಿ ನಂಬಬೇಕಾದ ವೇದವು, ಸರ್ವಜ್ಞಸ್ಯ= ಸರ್ವಜ್ಞನಾದ ಈಶಗೆ, ಅಜ್ಞತಾಂ= ಅಜ್ಞಾನಿತ್ವವನ್ನು, ನಿರುಣದ್ಧಿಚೇತ್= ನಿವಾರಣ ಮಾಡುತ್ತಿದ್ದರೆ, ತಸ್ಯಏವ= ಅಂಥಾ ಈಶಗೇವೆ, ಅಮಂದಂ ಆನಂದಂ= ಪರಿಪೂರ್ಣ ವಾದ ಸುಖವು ಉಂಟೆಂದು, ವದನ್ ಅಸೌ= ಹೇಳುವ ಆ ವೇದವು, ಕಥಂ ನ ಅಶ್ರಾವಿ= ಹೇಗೆ ನಿನ್ನ ಕಿವಿಯಿಂದ ಕೇಳಲ್ಪಡಲಿಲ್ಲ.

ಭಾವಾರ್ಥ:— ಪ್ರಮಾಣತ್ವೇನ ಎಲ್ಲರಿಂದಲೂ ನಂಬಲಿಕ್ಕೆ ಯೋಗ್ಯವಾದ ವೇದವು ಈಶ್ವರನಿಗೆ ಸರ್ವಜ್ಞತ್ವ ಪ್ರತಿಪಾದಕವಾದ "ಯಃ ಸರ್ವಜ್ಞ ಸರ್ವ" ಇತ್ಯಾದಿ ವೇದವು, ಈಶ್ವರನಿಗೆ ಅಜ್ಞತ್ವ= ಜ್ಞಾನವಿಲ್ಲದವನೆಂಬ ಯುಕ್ತಿಯನ್ನು ನಿರಾಕರಿಸುತ್ತದೆಯೆಂದಾದರೆ ಆ ಪರಮಾತ್ಮನಿಗೆ ಅಪರಿಮಿತವಾದ ಸುಖವಿದೆಂದು ಸಾಧಿಸುವ, "ಆನಂದಂ ಬ್ರಹ್ಮಣೋ ವಿದ್ವಾನ್" ಎಂಬ ವೇದವು ನಿನಗೆ ಹೇಗೆ ಕೇಳಿಸಲಿಲ್ಲ. ವೇದವನ್ನೊಪ್ಪುವ ನೀನು ಶುಷ್ಕಯುಕ್ತಿ (ತರ್ಕ) ಯಿಂದ ಈಶ್ವರನಲ್ಲಿ ಸುಖವಿಲ್ಲೆಂದು ಸಾಧಿಸಿದಂತೆ ನಾವು ಜ್ಞಾನ ವಿಲ್ಲೆಂದು ನಿನ್ನ ಯುಕ್ತಿಗೆ ಸರಿಯಾಗಿ ಸಾಧಿಸಿದೆವು. ನೀನು ವೇದದಿಂದ ಈಶ್ವರನಿಗೆ ಜ್ಞಾನವಿದೆಂದು ಸಾಧಿಸುವಲ್ಲಿ, ನಾವು ಸುಖವಿದೆ ಎಂದು ಹೇಳುವ, ವೇದವನ್ನು ನೀನು ಒಪ್ಪಿಕೊಳ್ಳಬೇಕಾದುದರಿಂದ, ಈಶ್ವರನು ದುಃಖಾದಿ ದೋಷವಿಲ್ಲದವನೂ, ಸುಖಜ್ಞಾನ ಮೊದಲಾದ ಗುಣಪೂರ್ಣನು ಎಂದು ಸಿದ್ಧಾಂತ ಪಕ್ಷ.

ಶ್ಲೋಕ ॥ ದುಃಖಂ ಪರಿಜಿಹೀರ್ಷನ್ ಯಃ ।
ಸುಖಂ ನೋರೀ (ನಾಂಗೀ) ಚಿಕೀರ್ಷತಿ ॥
ಸಹಂತಾ ಪತಿತಂ ದುಃಖ ।
ವಿಹಾಶಸ್ಯ ವ್ಯಸ್ಮರಜ್ಜಡಃ ॥ ೧೯ ॥

ವಾರ್ಧಿಕ ॥ ಶ್ರುತಿಗಳಿರೆ ಈ ತೆರದಿ ಪಮಾತ್ಮನಿಗೆ ದುಃಖ ।
ವತಿ ಪರಿಹರಿಸಲಿಚ್ಛೆ ಮಾಡ್ವ ದುಃಖಾಭಾವ ॥
ದತಿರಿಕ್ತ ಸುಖವಂಗಿ ಕರಿಸಲಿಚ್ಛಿಸನು ಆ ಮೂಢ
ನೀಶ್ವರನಲ್ಲಿಯೆ ॥
ಅತಿ ಬಲಾತ್ಕಾರದಿಂ ಬಂದುದಾದುಃಖವಂ ।
ಮತಿಮಂದ ಮರೆದೀತ ನವಿವೇಕಿ ಅಚ್ಚರವೆ ॥
ಶ್ರುತಿ ಸಿದ್ಧ ನೀಶ ಸುಖಿಯೋ " ದುಃಖಾಭಾವಾತ್ಸುಖಾ
ಭಾವೆನುವ " ನುಡಿತಪ್ಪೊ ॥ ೧೯ ॥೭೨೮ ॥

ಪೂರ್ವಪಕ್ಷ:—ಆಗ್ಗೆ ವೈಶೇಷಿಕನು ಈಶ್ವರನಲ್ಲಿ ಸುಖವು ಅದೆಂದು, ಅಂಗೀಕಾರ ಮಾಡಲು ಯೋಗ್ಯವಾದರೆ ಸುಖವಿದ್ದಲ್ಲಿ ದುಃಖವಿರಲೇಬೇಕೆಂಬ ನ್ಯಾಯದಂತೆ, ಆತನು ಸುಖಿಯಾದರೆ ದುಃಖಿಯೂ ಆಗಲೇಬೇಕು; ಸಂಸಾರಿ ಪುರುಷನಂತೆ ವ್ಯಾಪ್ತಿ ಪ್ರಮಿತ ವಾಗಿರುವದರಿಂದ, 'ಆನಂದ ಬ್ರಹ್ಮಣೋ ವಿದ್ವಾನ್, ಇತ್ಯಾದಿ ಶ್ರುತಿಗೆ ಈಶ್ವರನಲ್ಲಿ ದುಃಖಾಭಾವಾ =ದುಃಖವಿಲ್ಲವೆಂದೆ ಸಿದ್ಧಿಸುವದೆ ಹೊರ್ತಾಗಿ, ದುಃಖಾಭಾವಾತಿರಕ್ತವಾದ ದುಃಖವಿಲ್ಲದೇ ಕೇವಲ ಭಾವರೂಪ ಸುಖವಿದೆಂಬುದಕ್ಕೆ ಪ್ರಮಾಣವಿರುವದಿಲ್ಲಾದ್ದರಿಂದ,

ನಿನ್ನ ದುಃಖಾದಿ ರಹಿತತ್ವಾನುಮಾನಕ್ಕೆ ಬಾಧಿತತ್ವವು ಹೇಗೆ ಎಂತ ಶಂಕಿಸಿಕೊಂಡು ಪರಿಹಾರ ಮಾಡುತ್ತಾರೆ.

ಅನ್ವಯ:— ಯಃ, ಈಶ್ವರಸ್ಯ, ದುಃಖಂ, ಪರಿಜಿಹೀರ್ಷನ್, ಸುಖಂನಃ, ಅಂಗೀ ಚಿಕೀರ್ಷತಿ, ಸಃ ಜಡಃ, ಈಶಸ್ಯ, ಆಪತಿತಂ, ದುಃಖಂ, ವ್ಯಸ್ಮರತ್, ಹಂತ, ||

ಅರ್ಥ:— ಯಃ ಈಶ್ವರಸ್ಯ =ಯಾವನು, ಈಶ್ವರನಿಗೆ, ದುಃಖಪರಿಜಿಹೀರ್ಷನ್, = ದುಃಖವನ್ನು ಪರಿಹರಿಸಲಿಚ್ಛಿಸುವನಾಗಿ, ಸುಖಂ ನ ಅಂಗೀಚಿಕೀರ್ಷತಿ,= ಈಶ್ವರನಿಗೆ ದುಃಖಾಭಾವತಿರಿಕ್ತ ಸುಖವನ್ನು ಅಂಗೀಕರಿಸಲಿಚ್ಛಿಸುವದಿಲ್ಲವೋ, ಸಃಜಡಃ = ಅಂಥಾಮಂದ ಬುದ್ಧಿಯು, ಈಶಸ್ಯ ಆಪತಿತಂ= ಈಶ್ವರನಿಗೆ ಬಲಾತ್ಕಾರದಿಂದ ಬಂದ ದುಃಖ ಅಂಗಿಕಾರ ಮಾಡಲಿಚ್ಛಿಸದಿದ್ದರೂ, ದುಃಖಂ ವ್ಯಸ್ಮರತ್= ಅಂಗಿಕಾರ ಮಾಡಲೇ ಬೇಕಾಗಿ ಬಂದದ್ದನ್ನು ಮರೆತನು, ಹಂತ=ಆಶ್ಚರ್ಯ, ಪಾಪ ಎಂಥ ಮೂಢನಿವನು.

ಭಾವಾರ್ಥ:—ಈ ಪ್ರಕಾರವಾಗಿ ವೇದಗಳಲ್ಲಿ ಈಶ್ವರನಿಗೆ ದುಃಖವಿರುವದಿಲ್ಲವೆಂದು ತಾಳದಿರುವ ತಾರ್ಕಿಕನು ಈಶ್ವರನಿಗೆ ದುಃಖಪರಿಹಾರ ಮಾಡಲು ಇಚ್ಛೆಯನ್ನು ಮಾಡುವ ಅವನು, ಸುಖಂ=ದುಃಖಾಭಾವಾದತಿರಿಕ್ತ ಅಂದರೆ ದುಃಖವಿಲ್ಲದಾದ ಸುಖವನ್ನು ಮಾತ್ರ ಒಡಂಬಡಲಿಕ್ಕೆ ಇಚ್ಛಿಸನು. ಮೂಢನಾದ ಮಂದ ಬುದ್ಧಿಯು ಅವಿವೇಕಿ = ವಿವೇಕ ಬುದ್ಧಿಯಿಲ್ಲದವನು, ಹೀಗೆ ಅತಿ ಬಲವತ್ತರವಾಗಿ ಬಂದ ದುಃಖವನ್ನು ತನ್ನ ಮಂದ ಬುದ್ಧಿಯಿಂದ ಮರೆತನು, ಅವನು ಅವಿವೇಕಿಎಂಬುದು ಆಶ್ಚರ್ಯವು.

ಈಶ್ವರನಿಗೆ ಚೇತನತ್ವ ವಿಷಯದಲ್ಲಿ ಯಾವ ಪ್ರತಿಪತ್ತಿಯೂ ಇಲ್ಲ. ಯಾವುದು ಚೇತನವೋ ಅದು ಸುಖದುಃಖಗಳಲ್ಲಿ ಅನ್ಯತರದಿಂದ ವಿಶಿಷ್ಟನಾಗಿಯೇ ಇರುವದು. ಹೇಗಂದರೆ ದೇವದತ್ತನಂತೆ, ಯಾವುದು ಸುಖದುಃಖಗಳಲ್ಲಿ ಅನ್ಯತರದಿಂದ ವಿಶಿಷ್ಟವಲ್ಲವೋ ಅದು ಚೇತನವೇ ಅಲ್ಲ (ಘಟದಂತೆ ಜಡ) ಈ ಅನುಮಾನದಿಂದ ಈಶ್ವರನಿಗೆ ಚೇತನತ್ವಯಿದ್ದುದರಿಂದ ಸುಖದುಃಖ ಅನ್ಯತರ ವಿಶಿಷ್ಟತ್ವವನ್ನು ಒಪ್ಪಲೇಬೇಕು. ಸುಖ ದುಃಖಗಳಲ್ಲಿ ಈಶ್ವರನಿಗೆ ಸುಖಾಭಾವವನ್ನು ಅಂಗೀಕರಿಸಿದರೆ, ದುಃಖಿತ್ವವು ಬಲಾತ್ ಪ್ರಾಪ್ತವಾಗುವದು. ದುಃಖವನ್ನು ಅಂಗೀಕಾರ ಮಾಡುವದಕ್ಕಿಂತಲೂ, 'ನಿದುಃಖಾನಂದ' ಅಂಗೀಕಾರ ಮಾಡುವದೇ ಯುಕ್ತ. ಕಾರಣ ನಿನ್ನ (ತಾರ್ಕಿಕನ) ಸುಖಾನುಭಾವನು ಮಾನವು ಶ್ರುತಿ ಬಾಧಿತವಾದದ್ದು.

ಶ್ಲೋಕ || ಯೋ ದುಃಖ ಸಮವಾಯೋಽಯಂ ।
ಚೇತ್ರೇ ತೇನಹ್ಯ ಭೇದವಾನ್ ॥
ಸಮವಾಯಃ ಕಶ್ಚಿ ದೀಶೇ ।
ತದನೇಕತ್ವ ಮನ್ಯಥಾ || ೨೦ ||

ವಾರ್ಧಿಕ || ಸಂಸಾರಿ ಚೈತ್ರತೆರ ದುಃಖಗುಣ ಸಮವಾಯ |
ಹಂಸನಾ ಜ್ಞಾನೇಚ್ಛ ಸಮವಾಯ ಸಮ್ಮಂಧ ||
ಸಂಶಯದಿ ಈಶ ಸಹ ದುಃಖ ಸಮವಾಯನೆನೆ
ಒಂದಲ್ಲನೇಕವೆನೆನೀಂ ||

ಭ್ರಂಶ ತಾರ್ಕಿಕನೆ ತದನೇಕತ್ವ ನಿನಗೆ ಪ್ರ |
ಶಂಶಲ್ಲ ಈಶ ದುಃಖೆಂಬ ಆಪಾದನೆ ನಿ |
ಸ್ಸಂಶಯದಲಿಂ ಸ್ವರೂಪಾಸಿದ್ಧಿ ದೋಷವೆಲೊ
ಈಶ ನಿರ್ದೋಷಿ ಸುಖಿಯೊ || ೨೦ || ೮೨೯ ||

ಈ ಪ್ರಕಾರ ದುಃಖಾದಿ ರಹಿತತ್ವಾನುಮಾನಕ್ಕೆ ಶ್ರುತಿ ಬಾಧರೂಪ ದೋಷವನ್ನು ಹೇಳಿ, ಹೇತುವಿಗೆ ಪಕ್ಷದಲ್ಲಿ ಇಲ್ಲದೇ ಇರುವದೆಂಬ ಅಸಿದ್ಧಿ ರೂಪದೋಷವು ಬರುವದೆಂದು ಹೇಳುತ್ತಾರೆ

ಅನ್ವಯ: -- ಚೈತ್ರೇ, ಯಃ, ಅಯಂ, ದುಃಖ ಸಮವಾಯಃ, ತೇನ, ಅಭೇದ ವಾನ್, ಕಶ್ಚಿತ್ ಸಮವಾಯಃ, ಈಶೇ, ( ವರ್ತತೇ ) ಹಿ, ಅನ್ಯಥಾ, ತದನೇಕತ್ವಂ, ಸ್ಯಾತ್.

ಅರ್ಥ: ಚೈತ್ರೇಯಃ ಅಯಂ= ಚೈತ್ರನೆಂಬ ಸಂಸಾರಿ ಜೀವನಲ್ಲಿ ಯಾವ ಈ ಪ್ರಸಿದ್ಧವಾದ ದುಃಖ ಸಮವಾಯ, ದುಃಖದ ಸಮವಾಯ ಸಮ್ಮಂಧ ಉಂಟೋ, ತೇನ ಅಭೇದವಾನ್= ಆಸಮವಾಯದಿಂದ ಒಂದಾದ, ಕಶ್ಚಿತ್ ಸಮವಾಯ= ಯಾವದೋ ಜ್ಞಾನೇಚ್ಛಾದಿ ಸಮವಾಯ ಈಶೇಪಿ ವರ್ತತೇಹಿ= ಈಶ್ವರನಲ್ಲಿಯೂ ಸಹ ಇರುತ್ತದೆ. ಯಸ್ಮಾತ್= ಯಾವ ಕಾರಣದ್ದೆಶೆಯಿಂದ ಚೈತ್ರನು ದುಃಖಿಯಾದರೆ, ಈಶೋಪಿ= ಈಶ್ವರ ನಾದರೂ ದುಃಖ ಸಮವಾಯವುಳ್ಳವನು. ಅನ್ಯಥಾತತ್= ಇದು ಅಂಗೀಕಾರ ಮಾಡ ದಿದ್ದರೆ, ಅನೇಕತ್ವಂ ಸ್ಯಾತ್= ಆ ಸಮವಾಯವು ಒಂದಲ್ಲ ಅನೇಕವಾಗಿ ಅಪಸಿದ್ಧಾಂತ ವಾಗುವದು. **ಸಮವಾಯ**ವೆಂದರೆ= ಸಮ್-ಅವ-ಅಯ, ಅಯಪಯಗತೋಧಾತು. ಸಮ್= ಚನ್ನಾಗಿ, ಅವ= ಅನುಸರಿಸಿ, ಅಯ= ಇರುವವು ಎಂದು ಶಬ್ದಾರ್ಥ. ಅಥವಾ ಸಮ್ಯಗ್ ವಾಯ= ಸಮವಾಯ. ಚನ್ನಾಗಿ ಅನುಸರಿಸಿ ಇರುವದೆಂದರೆ, ಒಂದಕ್ಕೊಂದು ಬೇಧವಿಲ್ಲದೇ ಇರುವದು. ಗುಣಗುಣಿಗಳಿಗೆ ಇರುವ ಸಮ್ಮಂಧಕ್ಕೆ ಸಮವಾಯವೆಂದು ಹೇಳುವರು. ಹೇಗೆಂದರೆ, ಪಟ= ಬಟ್ಟೆಗಳಲ್ಲಿರುವ ಎಳೆಗಳಿಗೂ, ಬಟ್ಟೆಗೂ ಭೇದವಿಲ್ಲ ಸಮವಾಯ ಸಮ್ಮಂಧವೆಂದು ತಾರ್ಕಿಕರ ಮತ. ಮತ್ತು ಈ ಸಮವಾಯ ಸಮ್ಮಂಧವು ಜಗತ್ತಿನಲ್ಲಿ ಒಂದೇ ಇರುತ್ತದೆಂದು ಅವರ ಮತವಾದರೂ ಇದೆ.

ಭಾವಾರ್ಥ:— ಜಗತ್ತಿನಲ್ಲಿರುವ ಎಲ್ಲ ವಸ್ತುಗಳಿಗೂ ಅವುಗಳಲ್ಲಿ ಒಂದೇಯಾಗಿರುವ ಸಮುದಾಯ ಸಮ್ಮಂಧವು ಅನೇಕತ್ವವು ಅಲ್ಲವೆಂದು ಆ ವೈಶಿಷಕರು ಹೇಳುವ ಕಾರಣದಿಂದ, ಚೈತ್ರನೆಂಬ ಒಬ್ಬ ಪುರುಷ ಸಂಸಾರೀ ಜೀವನಲ್ಲಿ ಪ್ರಸಿದ್ಧಿಯಾಗಿ ಕಂಡದೆ ಎಂದರೆ, ದುಃಖಾದಿ ರಹಿತತ್ವ ಅನುಮಾನದ ಸಿದ್ಧಿಯಾಗುವದರಿಂದಲೇ, ಈಶ್ವರನ ಸೌಖ್ಯಾದಿ ರಾಹಿತ್ಯವು ಸಾಧಿಸಲು ಶಕ್ಯವಾಯಿತೆ ? . ಇರಲಿ ಸಂಸಾರಿಯಲ್ಲಿರತಕ್ಕ ದುಃಖ ಸಮುವಾಯಕ್ಕೂ ಈಶ್ವರನಲ್ಲಿರತಕ್ಕ ಜ್ಞಾನೇಚ್ಛಾದಿ ಸಮುವಾಯಕ್ಕೂ ಅಭೇದವಿರುತ್ತದೆ. ಇದನ್ನು ನೀನು (ವೈಶೇಷಿಕ) ಅಂಗೀಕಾರ ಮಾಡದಿದ್ದರೆ ಆ ಎರಡು ಸಮುವಾಯಗಳಿಗೆ ಭೇದ ಒಪ್ಪಬೇಕಾದಿತು. ಆ ಭೇದವು ಅನೇಕತ್ವವಾಗಿರುವದರಿಂದ ಸಮುವಾಯ ಸಮ್ಮಂಧಕ್ಕೂ ಅನೇಕತ್ವ ಹೇಳಬೇಕಾಗುವದು. ಅನೇಕತ್ವನ್ನೊಪ್ಪಿದರೆ ನಿನ್ನ ಸಿದ್ಧಾಂತವು ಹೋದಂತಾಯಿತು.

ಫಲಿತಾಭಿಪ್ರಾಯವೇನಂದರೆ, ಸಂಸಾರಿಯಾದ ಜೀವನಲ್ಲಿ ಸರ್ವ ಸಂಪ್ರತಿಪನ್ನವಾದ ದುಃಖ ಸಮುವಾಯವು ಇರುವದು. ಈಶ್ವರನಲ್ಲಿ ಜ್ಞಾನಾದಿ ಸಮುವಾಯವು ಇರುವದು. ಸಂಸಾರಿಯಲ್ಲಿದ್ದ ದುಃಖ ಸಮುವಾಯಕ್ಕೂ, ಈಶ್ವರನಲ್ಲಿದ್ದ ಜ್ಞಾನಾದಿ ಸಮುವಾಯಕ್ಕೂ, ಅಭೇದವದೆಂಬುದು ವೈಶೇಷಿಕರ ಸಿದ್ಧಾಂತವು. ಅವರ ವಚನವು ಹೀಗಿರುವದು. '' ಸಮುವಾಯಸ್ತು ನಿತ್ಯಸ್ಯಾದೇಕ ಏವಸಃ ಇತಿ " ಹೀಗಿದ್ದಮೇಲೆ ದುಃಖ ಸಮುವಾಯುಯುಳ್ಳ ಸಂಸಾರಿಯು ಹೇಗೆ ದುಃಖರಹಿತನಲ್ಲವೊ ಹಾಗೆ ಆ ದುಃಖ ಸಮುವಾಯ ಅಭಿನ್ನವಾದ ಸಮುವಾಯವುಳ್ಳ ಈಶನಾದರೂ ದುಃಖ ರಹಿತನಾದರೂ ದುಃಖ ರಹಿತನಾದ್ದರಿಂದ, ''ದುಃಖಾದಿ ರಹಿತತ್ವ'' ಎಂಬ ನಿನ್ನ ಅನುಮಾನವು ಅಸಿದ್ಧವಾದ ಸಾಧನದಿಂದ, ಈಶ್ವರನಿಗೆ ಸೌಖ್ಯಾದಿ ರಹಿತತ್ವವನ್ನು ಸಾಧನ ಮಾಡಲಿಕ್ಕೆ ಬರುವದಿಲ್ಲ. ಸಂಸಾರಿಯಲ್ಲಿದ್ದ ದುಃಖ ಸಮುವಾಯಕ್ಕೂ ಈಶ್ವರನಲ್ಲಿದ್ದ ಜ್ಞಾನ ಸಮುವಾಯಕ್ಕೂ ಭೇದ ಹೇಳುತ್ತೇನೆಂದರೆ ಆ ಸಮುವಾಯಕ್ಕೆ ಅನೇಕತ್ವ ಬರುವದು. ಅನೇಕತ್ವವನ್ನು ಅಂಗೀಕರಿಸಿದರೆ ವೈಶೇಷಿಕರಿಗೆ ಅಪಸಿದ್ಧಾಂತ ರೂಪದೋಷ ಬರುತ್ತದೆ.

ಸಮುವಾಯ ಸಮ್ಮಂಧ ಜಾತಿ ವ್ಯಕ್ತಿಗಳಿಗೆ, ಗುಣಗುಣಿಗಳಗೆ ಅವಯುವ ಅವಯುವಿಗಳಿಗೆ ಇರುವ ಸಮುವಾಯ ಸಮ್ಮಂಧವೆಂದು ವೈಶೇಷಿಕನ ಸಿದ್ಧಾಂತ. ಆದರೆ ಈ ಸಮುವಾಯ ಸಮ್ಮಂಧವೇ ದ್ವೈತಿಗಳು ಎಂದೂ ಒಪ್ಪುವದಿಲ್ಲ. ಯಾವಾಗಲೂ ಸ್ವರೂಪ ಸಮ್ಮಂಧವೆ ಇರುವ ಸ್ವರೂಪ ಸಮ್ಮಂಧವನ್ನು ಒಪ್ಪುತ್ತೇವೆ.

**ಶ್ಲೋಕ ॥ ಔಪಾಧಿ ಕೋಽಸ್ಯ ಭೇದಶ್ಚೇತ್ ।**
**ಸತ್ಯೋಽಸತ್ಯಃ ಸ್ವಿದುಚ್ಯತಾಮ್ ॥**
**ತದ್ದ್ವಯಂ ಚೋಕ್ತ ದೋಷಂ ಹಿ ।**
**ಮಾಯಿವನ್ಮಾವದೇತ್ ಪರಮ್ ॥ ೨೧ ॥**

**ವಾರ್ಧಿಕ** ॥ ಅರಿಯದಲೆ ಸಮವಾಯ ಔಪಾಧಿಕಂ ಭೇದ |
ವಿರುವೊ ಸತ್ಯವೊ ಮಿಥ್ಯ ವೆಂಥೇಳೊ ಸಮ್ಮಂಧ ||
ಖರೆಯವೆನೆ ಸಮವಾಯ ಒಂದೆಂಬ ನಿನಮತ
ವಿರೋಧವು ಅಸತ್ಯವೆನೆ ನೀಂ ॥
ಇರಬೇಕು ಈಶನಲಿ ದುಃಖವದು ಸರಿಯಲ್ಲ |
ಎರಡು ಪಕ್ಷದಿ ನಾವು ಪೇಳ್ದ ದೋಷವೆಬಂತೊ ||
ಭರದಿ ಮಾಯಾವಾದಿ ತೆರದಿ ಪೇಳಲಿ ಬೇಡ
ಈಶ್ವರನು ಸುಖಪೂರ್ಣನು || ೨೧ || ೮೩೦ |

**ಅವತಾರಿಕೆ=** ಅನೇಕ ವೃತ್ತಿಸಮವಾಯಕ್ಕೆ ಏಕತ್ವ ಇದ್ದಾಗ್ಯಾದರೂ ಚೈತ್ರ ಮೈತ್ರಾ ನಾನಾವಿಧವಾದ ಉಪಾಧಿ ಸಂಬಂಧದಿಂದ, ಔಪಾಧಿಕ ಭೇದವು ನಮ್ಮಿಂದ ಅಂಗೀಕಾ ಮಾಡಲ್ಪಡುತ್ತದೆ. ಆದ್ದರಿಂದ ಚೈತ್ರನಲ್ಲಿದ್ದ ದುಃಖಸಮವಾಯವು ಈಶ್ವರನಲ್ಲಿ ಇಲ್ಲ ಹೇಗೆ ಸರ್ವತ್ರದಲ್ಲಿ ವ್ಯಾಪ್ತವಾದ ಆಕಾಶಕ್ಕೆ ಏಕತ್ವ ಇದ್ದಾಗ್ಯಾದರೂ, ಘಟಮಠಾದ ನೇಕ ಉಪಾಧಿ ಭೇದದಿಂದ, ಘಟಾಕಾಶ ಮಠಾಕಾಶವೆಂದು ಭೇದ ವ್ಯವಹಾರವ ಇರುವದು. ಇದರಂತೆ ಸಮವಾಯಕ್ಕೆ ಏಕತ್ವ ಇದ್ದಾಗ್ಯಾದರೂ ಚೈತ್ರಾದಿ ಉಪಾಧಿಗಳಿ ಭೇದವಿರುವದರಿಂದ, ಚೈತ್ರನಲ್ಲಿದ್ದ ದುಃಖ ಸಮವಾಯವು ಈಶ್ವರನಲ್ಲಿಲ್ಲ. ಈಶ್ವರನಲ್ಲಿದ್ದ ನಿತ್ಯಜ್ಞಾನಾದಿ ಸಮವಾಯವು ಚೈತ್ರನಲ್ಲಿಲ್ಲ. ಈ ಪ್ರಕಾರ ಸಮವಾಯಕ್ಕೆ ಔಪಾಧಿ ಭೇದ ಅಂಗೀಕಾರ ಮಾಡಿದ್ದರಿಂದ ದುಃಖ ಸಮವಾಯ ರೂಪ ಹೇತುವಿನಿಂದ ಈಶ್ವರನಲ್ಲಿ ದುಃಖ ಸಮವಾಯವು ಬರಲೆಂದು ದುಃಖ ರಹಿತಾನುಮಾನಕ್ಕೆ ಅಸಿದ್ಧಿ. (ಪಕ್ಷದಲ್ಲಿ ಹೇತು ಇಲ್ಲ.) ಈ ಅಸಿದ್ಧಿ ದೋಷವು ಹೇಗೆ ಕೂಡುವದೆಂದು ಶಂಕಾ ಮಾಡಿ ಪರಿಹಾ ಮಾಡುತ್ತಾರೆ

ಅನ್ವಯ :— ಅಸ್ಯ, ಭೇದಃ, ಔಪಾಧಿಕಃ, ಚೇತ್, ಸತ್ಯ, ಸ್ಯಾತ್, ಅಸತ್ಯ ಉಚ್ಯತಾಂ, ತದ್ ದ್ವಯಂ ಚ, ಉಕ್ತಂ ದೋಷಂ ಹಿಂ, ಮಾಯಿವತ್, ಪರಂ, ಮಾ, ವದೇತ್.

**ಅರ್ಥ** :— ಅಸ್ಯ ಭೇದಃ = ಈ ಸಮವಾಯದ ಭೇದಾಭೇದವು, ಔಪಾಧಿಕ. ಚೇತ್ = ಉಪಾಧಿವಶ (ನಿಮಿತ್ತ) ದೆಶೆಯಿಂದ ಉಂಟೆಂದರೆ ಸತ್ಯಸ್ಯಾತ್ ಅಸತ್ಯಃ = ಆಭೇದ ಪರಮಾರ್ಥಿಕವೊ (ಸತ್ಯವೊ) ಅಥವಾ ಮಿಥ್ಯವೊ, (ಅಸತ್ಯವೊ) ಉಚ್ಯತಾಂ = ನಿನ್ನಿಂದ ಹೇಳಲ್ಪಡಲಿ. ತದ್ ದ್ವಯಂ ಚ = ಈ ಎರಡೂ ಪಕ್ಷವು, ಉಕ್ತದೋಷಂ= ನಾವು ಹೇಳಲ್ಪಟ್ಟ ದೋಷವುಳ್ಳದ್ದು, ಹೀ = ಆದ ಕಾರಣ, ಮಾಯಿವತ್ = ಮಾಯಾವಾದಿ ಯಾದ ಅದ್ವೈತಿಯಂತೆ, ಪರಂ ಮಾ ವದೇತ್ =ಪಕ್ಷಾಂತರವನ್ನು ಹೇಳಬೇಡ.

ಭಾವಾರ್ಥ:— ಅರಿಯದಲೆ= ಎಲೈ ತಾರ್ಕಿಕನೆ ನೀನು ಈ ವಿಷಯವನ್ನು ಚನ್ನಾಗಿ ಳಿದಿಲ್ಲವೆಂತ ಕಾಣುತ್ತದೆ. ನೋಡು ಲಕ್ಷದಲ್ಲಿ ತಂದು ಸ್ವಲ್ಪ ವಿಚಾರಮಾಡು ನೀನು ೇಳುವ ಸಮವಾಯ ಸಮ್ಮಂಧಕ್ಕೆ ಔಪಾಧಿಕ ಭೇದವಿರುವುದು ಸತ್ಯವೊ (ಖರೆಯವೊ) ಥವಾ (ಮಿಥ್ಯವೊ) ಸುಳ್ಳೋ ಹೇಳು, ಆ ಸಮವಾಯ ಸಮ್ಮಂಧವು ಔಪಾಧಿಕ ಭೇದ ಳ್ಳದಾದರೆ, ಸತ್ಯವೊ? ಮಿಥ್ಯವೊ? ಔಪಾಧಿಕ ಭೇದ ಸತ್ಯವಾದರೆ, ಒಂದೇ ಎಂಬುವ ನ್ನ ಮತಕ್ಕೆ ವಿರೋಧ ಬಂತು. ಇದು ಅಪಸಿದ್ಧಿ. ಅಸತ್ಯವೆಂದರೆ (ಮಿಥ್ಯಾ) ಪಾಧಿಕ ಸುಳ್ಳೆಂದರೆ ಪರಮಾರ್ಥಿಕ ಸತ್ಯವು ಇಲ್ಲದಿರುವದು ಸಮವಾಯದಲ್ಲಿ ೇದವಿಲ್ಲದ ಕಾರಣ, ಮೇಲೆ ಹೇಳಿದಂತೆ ಈಶ್ವರನಲ್ಲಿ ದುಃಖವಿರಬೇಕೆಂದು ಹೇಳ ಂತಾಯಿತು.

ಇಂತು ಎರಡೂ ಪಕ್ಷದಲ್ಲೂ ನಾವು ಹೇಳಿದ ಎರಡೂ ವಿಧದ ದೋಷ ಬಂದೇ ರುತ್ತದೆ. ಕಾರಣ ಮಾಯಾವಾದಿ (ಅದ್ವೈತಿ) ಯಂತೆ, ಉಪಾಧಿಕೃತ ಭೇದವೂ ತ್ಯವೂ ಅಲ್ಲ ಅಸತ್ಯವೂ ಅಲ್ಲೆಂಬ "ಸದಸದ್ವಿಲಕ್ಷಣ" ವೆನ್ನುವ ಸ್ವವ್ಯಾಹತ ತನಗೆ ವಿರುದ್ಧವಾದ) ಭಾಷಣವು ಮಾಯಾವಾದಿಗಳಿಗೆ ಭೂಷಣವೇ ಹೊರ್ತಾಗಿ, ಾರ್ಕಿಕರಾದ ವೈಶೇಷಿಕರಿಗೆ ಭೂಷಣವಲ್ಲದಕಾರಣ ನೀನು ಹೀಗೆ ಹೇಳಕೂಡದು. ಈ ಪ್ರಕಾರವಾಗಿ ನಿನಗೆ ಮೂರನೇ ಪಕ್ಷವು ಸರಿಯಾದುದಲ್ಲ. ನಿನ್ನ ಎರಡೂ ಪಕ್ಷಗಳಲ್ಲಿ ೋಷಗಳಿರುವ ಕಾರಣ ಸಮವಾಯ ಭೇದವು ಅಸಂಭವವಾದುದರಿಂದ, ಈಶ್ವರನಿಗೂ ುಃಖ ಸಮವಾಯಿತ್ವ ಇರುವದರಿಂದ ದುಃಖರಾಹಿತ್ಯದಿಂದ ಆ ಈಶ್ವರನಲ್ಲಿ, ಸುಖರಾ ತ್ಯಾದಿ ಸಾಧನವು, ನ ಸಂಗಚ್ಛತಿ= ಎಂದಿಗೂ ಕೂಡುವದಿಲ್ಲಾದಕಾರಣ, ಈಶ್ವರ= ಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನಲ್ಲಿ ಸೌಖ್ಯಾದಿ ಗುಣಗಳು ಪೂರ್ಣವಾಗಿ ವದು ಶ್ರುತಿ ಸಿದ್ಧ ಮತ್ತು ಯುಕ್ತಿ ಸಿದ್ಧವು.

**ಶ್ಲೋಕ ||** **ಬ್ರೂಯು ರೌಪಾಧಿಕಂ ಭೇದಂ |**
**ಜ್ಞಾನಾದೀನಾಂ ಯದಾತ್ಮನಃ ||**
**ನಿತ್ಯಾನಯಾ ತನ್ನಿರಾಸಾತ್ |**
**ಸ್ಯಾತ್ತಸ್ಯಾನಂತಧರ್ಮ (ರ್ಮಿ) ತಾ || ೨೨ ||**

ಾರ್ಥಿಕ || ಶರ್ಕರಾಕ್ಷನ ಜ್ಞಾನ ಇತ್ಯಾದಿ ಗುಣಗಳಿಗೆ |
ತಾರ್ಕಿಕರು ಪಾಧಿ ಸಮ್ಮಂಧ ಭೇದೆನೊಪಕ್ಷ ||
ಸೊರ್ಕುದ್ಯೆ ಔಪಾಧಿ ಭೇದ ಮೊದಲಿಗೆ
ಸಯುಕ್ತಿಂ ನಿರಾಕರಿಸಿರಲದು ||

ಮೂರ್ಖನೇ ಈಶನಾನಂತ ಗುಣಗಣನಿಹನು |
ಅರ್ಕುಸ್ವಾಭಾವಿಕಂ ಭೇದಂಗಿಕರಿಸೊ ದೇ ॥
ವರ್ಕಳೊಡೆಯಾನಂತ ಕಲ್ಯಾಣ ಗುಣಪೂರ್ಣ
ಸುಪ್ರಕಾಶ್ಯ ಶ್ರುತಿಸಿದ್ಧನೊ ॥ ೨೨ ॥ ೮೩೧ ॥

ಈ ರೀತಿಯಾಗಿ ಉಪಾಧಿ ನಿಮಿತ್ತವಾದ ಸಮವಾಯು ಭೇದ ನಿರಾಕರಣದಿಂದ, “ ಅನ್ಯಚ್ಯ ತನ್ಮಷಿನೀಷಿತ್ಂ ಪ್ರಮೇಯಂನಿರಸ್ತ ವಾಹ ” ಇದರ ಹೊರ್ತಾಗಿ ಅವನ ಅಭಿಲಷಿತವಾದ ಪ್ರಮೇಯವು ನಿರಾಕರಿಸಲ್ಪಟ್ಟಿತೆಂದು ಹೇಳುತ್ತಾರೆ.

ಅನ್ವಯ:— ಆತ್ಮನಃ, ಜ್ಞಾನಾದೀನಾಂ ಭೇದಂ, ಔಪಾಧಿಕಂ, ಬ್ರೂಯುಃ, ಇತಿಯಾತ್, ಅನಯಾ, ನೀತ್ಯಾ, ತನ್ನಿರಾ ಸಾತ್, ತಸ್ಯ, ಅನಂತ, ಧರ್ಮಿತಾ, ಸ್ಯಾತ್.

ಅರ್ಥ:— ಆತ್ಮನಃ= ಪರಮಾತ್ಮನ, ಜ್ಞಾನಾದೀನಾಂ ಭೇದಂ= ಜ್ಞಾನಾನಂದಾದಿ ಗುಣಗಳ ಭೇದವನ್ನು ಔಪಾಧಿಕಂ= ಉಪಾಧಿಕಾರ್ಯವೆಂದು, ಬ್ರೂಯುಃ ಇತಿಯತ್= ಹೇಳೋಣವು, ಅನಯಾನೀತ್ಯಾಃ= ಸಮವಾಯುಕ್ಕೆ ಔಪಾಧಿಕ ಭೇದ ನಿರಾಸ ಯುಕ್ತಿ ಯಿಂದ ತನ್ನಿರಾಸಾತ್= ಪ್ರಕೃತ ಔಪಾಧಿಕ ಭೇದ ನಿರಾಕರಣದ ದೆಶೆಯಿಂದ, ವಾಸ್ತವ ಭೇದ ತತ್ವ ಸಿಂದ್ಧಾಂತಯಿರತಿರಿಲಿಕ್ಕೆ ತಸ್ಯ= ಆ ಪರಮಾತ್ಮನಿಗೆ, ಅನಂತಧರ್ಮಿತಾ= ಅನಂತ ಗುಣಪೂರ್ಣತ್ವವು, ಸ್ಯಾತ್= ಸಿದ್ಧಿಸುವದು.

ಭಾವಾರ್ಥ:— ಶರ್ಕರಾಕ್ಷ= ಅತಿಸೂಕ್ಷ್ಮ ಜ್ಞಾನಿ ಸರ್ವಜ್ಞನಾದ, ಪವಮಾತ್ಮನ ಜ್ಞಾನೇಚ್ಛಾದಿಗುಣಗಳಿಗೆ ಮತ್ತು ಪರಮಾತ್ಮನಿಗೆ, ತಾರ್ಕಿಕಃ=ವೈಶೇಷಿಕರಾದವರು ಉಪಾಧಿನಿಮಿತ್ಯದಿಂದ ಭೇದವೆನ್ನುವ ಪಕ್ಷದಲ್ಲಿ ಈ ಔಪಾಧಿಕ ಭೇದವನ್ನು ನಿರಾಕರಿಸುವ ಯುಕ್ತಿಗಳಿಂದ, ಸೊರ್ಕುದ್ಯೆ= ಸೊಕ್ಕಿನ ( ಹಮ್ಮಿನ ) ಆ ಉಪಾಧಿ ಭೇದವನ್ನು ಬಹು ಸಯುಕ್ತಿಗಳಿಂದಖಂಡಿಸಿರುತ್ತೆವೆ. ಈ ರೀತಿ ನಿರಾಕರಿಸಿದ್ದರಿಂದ, ನಿತ್ಯನಾದ ಪರಮಾತ್ಮನಿಗೆ ಅಪರಿಮಿತ ಅನಂತಾನಂತ ಗುಣಗಳಿವೆಂದು ಸಿದ್ಧವಾಗಿದೆ. ಗುಣಗುಣಗಳಿಗೆ ಸ್ವಾಭಾವಿಕ ಭೇದವೆ ಅಂಗಿಕರಿಸ ಬೇಕೆ ಹೊರ್ತಾಗಿ, ಉಪಾಧಿ ಕಾರಣದಿಂದ ಭೇದವನ್ನು ಹೇಳಲಕ್ಕಾಗುವದಿಲ್ಲ ಸಿಂದ್ಧಾಂತಿಗಳು ಮೊದಲಿಗೇವೆ ಉಪಾಧಿ ಭೇದ ನಿರಾಕರಿಸಿದ್ದ ಕಾರಣ, ಸ್ವಾಭಾವಿಕ ಭೇದವೆಂದೆ ತಿಳಿಯಬೇಕು. ಆದುದರಿಂದ ದೇವರ್ಕಳೊಡೆಯ= ದೇವತೆಗಳಿಗೆ ಒಡೆಯನಾದ ಪರಮಾತ್ಮನು, ಅನಂತ ಶುಭಗುಣ ಪೂರ್ಣನು ಸ್ವಯಂ ಸ್ವಪ್ರಕಾಶ ವುಳ್ಳವನೆಂದು ವೇದಗಳಿಂದ ಸಿದ್ಧವಾದದ್ದು.

**ಶ್ಲೋಕ ॥ ಗುಣಾದಿ ಭೇದೇ ಸಂಬಂಧ ।**
**ಮಪೇಕ್ಷ್ಯಾಪ್ಯನವಸ್ಥಿತೇಃ ॥**
**ವಿಶೇಷ ಮಾತ್ರೇಣಾನಂತ್ಯಂ ।**
**ಗುಣಾನಾಂ ಶೋಭತೇವಿಭೋಃ** ॥ ೨೩ ॥

ವಾರ್ಧಿಕ ॥ ಗುಣಗುಣ್ಯಗಳಿಗೆ ಭೇದಂಗಿಕರಿಸುತಲವಕೆ ।
ಇನಿತು ಸಮ್ಮಂಧವಾಪೇಕ್ಷಿಸಲನವಸ್ಥೆ ॥
ಫನ ದೋಷಕಿಂ ಕಾರ್ಣ ವೆನಲವನು
ಸಿಧ್ಧಾಂತಿಗಳು ಗುಣಗುಣಕ್ಕೆ ಭೇದ-॥
ವನು ಅಂಗಿಕರಿಸಲೇಬೇಕದಕು ಬರುವದೈ ।
ಅನವಸ್ಥೆ ಎನೆ ನಿರ್ವಿಶೇಷಲ್ಲ ಸವಿಶೇಷ ॥
ವೆನೊ ಭೇದದಿಂ ಹರಿಯ ಗುಣಗಳಿಗೆ ಅತ್ಯಂತ
ಶೋಭಿಪ ಗುಣಾನಂತ್ಯವು ॥ ೨೩ ॥ ೮೩೨ ॥

ವೈಶೇಷಿಕರು ಮತ್ತೆ ಬೇರೆ ಹೇಳುವದೇನಂದರೆ, ಅವಯುವ ಅವಯುವಿಗಳಿಗೆ, ಗುಣ ಗುಣಿಗಳಿಗೆ, ಕ್ರೀಯಾ ಕ್ರೀಯಾವುಳ್ಳ ಪದಾರ್ಥಗಳಿಗೆ, ಜಾತಿವ್ಯಕ್ತಿಗಳಿಗೆ, ವಿಶೇಷ ನಿತ್ಯ ದ್ರವ್ಯಗಳಿಗೆ ಸಮವಾಯ ಸಂಬಂಧವೆಂದು ನೈಯ್ಯಾಯಿಕರ ಮತವು. ಇದು ಸರಿ ಯಾದುದಲ್ಲ, ಇದನ್ನು ಮೊದಲಿಗ ಖಂಡಿಸಿರುವೆವೆಂದು ಹೇಳುತ್ತಾರೆ.

ಅನ್ವಯ:— ಗುಣಾದಿ ಭೇದೆ, ಸಂಬಂಧಂ, ಅಪೇಕ್ಷಾಪಿ, ಅನವಸ್ಥಿತೇಃ, ವಿಶೇಷ ಮಾತ್ರೇಣ, ವಿಭೋಃ, ಗುಣಾನಾಂ, ಆನಂತ್ಯಂ ಶೋಭತೇ,

ಅಥ:— ಗುಣಾದಿಭೇದೇ= ಗುಣಗಳಿಗೆ ಗುಣ್ಯಾದಿಗಳದೆಶೆಯಿಂದ ಭೇದವೆಂಬೋ ಪಕ್ಷದಲ್ಲಿ, ಸಂಬಂಧಂ ಅಪೇಕ್ಷಾಪಿ= ಭೇದವುಳ್ಳ ಗುಣ ಗುಣಿಗಳಿಗೆ ಭೇದ ಕಾರ್ಯ ಪರಸ್ಪರ ಸಂಬಂಧ ಆಪೇಕ್ಷಿಸಿದಾಗ್ಯೂ, ಅನವಸ್ಥಿತೇಃ= ಅನವಸ್ಥಾ ಎಂಬುವ ದೋಷವು ಬರುತ್ತದೆ. ಕಾರಣ ಗುಣ ಗುಣಿಗಳಿಗೆ ಬೇಧ ಕೂಡುವದಿಲ್ಲ. ವಿಶೇಷ ಮಾತ್ರೇಣ = ಭೇದ ವ್ಯವಹಾರಕ್ಕೆ ಕಾರಣವಾದ ವಿಶೇಷ ಮಾತ್ರದಿಂದ, ವಿಭೋಃ ಗುಣಾನಾಂ = ವ್ಯಾಪ್ತನಾದ ಪರಮಾತ್ಮನ ಗುಣಗಳಿಗೆ, ಅನಂತ್ಯಂ ಶೋಭತೇ= ಸಂಖ್ಯಯಿಲ್ಲದೆಂಬುವದು ಒಪ್ಪುವದು. ಜ್ಞಾನಾನಂದಾದಿ ಅನಂತ ಗುಣಗಳು ಶೋಬಿಸುತ್ತವೆ.

ಭಾವಾರ್ಥ:— ಗುಣವು ಗುಣವುಳ್ಳವನಿಗೆ ಭೇದವನ್ನು ಒಡಂಬಟ್ಟು, ಗುಣಕ್ಕೂ ಗಣಗಳಿಗೂ ಸಂಬಂಧ ಅಪೇಕ್ಷಿಸಿ ವಿಚಾರಿಸಿದರೂ ಆನವಸ್ಥಾ= ಅಪ್ರಮಾಣೀಕ ಅನಂತ

ಪದಾರ್ಥಧಾರಾ ಕಲ್ಪನಾ ವಿಶ್ರಾಂತ್ಯ ಭಾವೋ ಅನವಸ್ಥಾ, ಅಂದರೆ ಪ್ರಮಾಣದಿಂದ ಸಿದ್ಧವಾದ ದೋಷವು ಬರುತ್ತದೆ ಗುಣಗುಣಿಗಗಳಲ್ಲಿ ಭೇದವು ಕೂಡುವದಿಲ್ಲವೆಂತಭಾವ ಹಾಗಾದರೆ ಗುಣಗುಣಿಗಳಿಗೆ ವಿಶೇಷಭೂತ ಭೇದಕ್ಕೆ ಪೃಥ್ವಿಯಿಂದ ಗಂಧಗುಣವು, ಜಲಾದಿಗಳಿಂದ ಪೃಥ್ವಿಯು ಭಿನ್ನವೆಂದು ಬುದ್ಧಿಗೆ ಕಾರಣವಾದುದರಿಂದ ವ್ಯಾವರ್ತಕ ವಿಶೇಷಣವೆಂತ ಹೆಸರು. (ವಾವೃತ್ತ್ಯರ್= ಪೃಥ್ವಿ) (ವ್ಯಾವರ್ತಕ =ಗಂಧ) ಈ ವ್ಯಾವ ರ್ತಕವಾದ ಭೇದಾಂಗಿಕಾರ ಮಾಡಬೇಕು. ಮಾಡದೇ ಇದ್ದರೆ ವಿಶೇಷಣ ವಿಶೇಷ್ಯಭಾವ ಸಮ್ಮಂಧ ಕೂಡಲಾರದು. ವಿಶೇಷಣ, ವಿಶೇಷ್ಯಭಾವ ಆ ಭೇದಕ್ಕೂ ಗುಣಾದಿಗಳಿಗೂ ಭೇದ ಉಂಟು. ಈ ರೀತಿ ಭೇದ ಪರಂಪರೆಯಿಂದ ಅನವಸ್ಥೆಯೇ ಬರುತ್ತದೆಂದು ತಾರ್ಕಿಕನು ಅನ್ನುತ್ತಾನೆ.

ಎಲೈ ಸಿದ್ಧಾಂತಿಗಳಾದ ದ್ವೈತರೆ ನಿಮ್ಮ ಪಕ್ಷದಲ್ಲಿಯಾದರೂ, ಗುಣಗುಣಿಗಳಿಗೆ ಭೇದವನ್ನು ಅಂಗೀಕರಿಸಬೇಕಾದುದರಿಂದ ಆ ಅನವಸ್ಥಾರೂಪ ದೋಷವು ನಿಮಗೆ ಬರುತ್ತದಲ್ಲವೆಂದರೆ ಅದು ಸರಿಯಲ್ಲ. ಈಶ್ವರನಿಗೂ ಆತನ ಗುಣಗಳಿಗೂ ಅಭೇದ ವಿದ್ದರೂ, ಭೇದವಿಲ್ಲದ ವಸ್ತುವಿನಲ್ಲಿ ವಿಶೇಷ ಎಂಬ ವಸ್ತುವಿನಿಂದ ಅಂದರೆ, "ಭೇದ ಹೀನೆ ವಸ್ತುನಿ ಭೇದನಿಮಿತ್ತಾನೇಕ ವ್ಯವಹಾರ ಹೇತೂಭೂತಃ ತಥಾಚೋಕ್ತಂ, "ಭೇದಹೀನೆತ್ವಪರ್ಯಾಯ ಶಬ್ದಾಂತರನಿಯಾಮಕಃ ವಿಶೇಷೋ ನಾಮ ಕಥಿತಃ ಸೋಸ್ತಿವಸ್ತು ಷ್ವಶೇಷತ್ ಇತಿ"

ಭೇದರಹಿತವಾದ ವಸ್ತುವಿನಲ್ಲಿ ಭೇದನಿಮಿತ್ತಕವಾದ ವ್ಯವಹಾರಕ್ಕೆ ಹೇತುವೋ, ಅದೇ ವಿಶೇಷ ಶಬ್ದಾರ್ಥ, ಅಪರ್ಯಾಯ ಶಬ್ದಾಂತರ್ನಿಯಾಮಕವಾದದ್ದು. ಇಂಥ ವಿಶೇಷದಿಂದ ವ್ಯಾಪ್ತನಾದ ಪರಮಾತ್ಮ ನಾರಾಯಣನ ಗುಣಗಳಿಗೆ ಆನಂತ್ಯವು ಶೋಭಿ ಸುತ್ತದೆ. ಇಂಥ ಅಪರ್ಯಾಯ ಶಬ್ದಾಂತರನಿಯಾಮಕ ವಿಶೇಷ ಬಲಾದಿಯಿಂದ ಆನಂದಾದಿಗಳು, ಈಶ್ವರನ ಗುಣತ್ವ, ಈಶ್ವರನಿಗೆ ಗುಣಿತ್ವ, ಆನಂದಾದಿ ಗುಣಗಳಿಗೆ ಭೋಗ್ಯತ್ವ, ಭಗವಂತನಿಗೆ ಭೋಕ್ತೃತ್ವ. ಹೀಗೆ ಗುಣಾನಂತ್ಯವು ಸಿದ್ಧಿಸಿ ಪ್ರಕಾಶಿ ಸುವವು. ಕಾರಣ ನಮ್ಮ ದ್ವೈತಸಿದ್ಧಾಂತ ಪಕ್ಷಕ್ಕೆ ಅನವಸ್ಥೆ ದೋಷವು ಎಂದಿಗೂ ಬರುವದಿಲ್ಲ.

"ಭಿನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ।
ಸ್ವೈಃ ಸ್ವೈಃ ಧರ್ಮೈರಭಿನ್ನಾಶ್ಚ ಸ್ವರೂಪೈರಪಿ ಸರ್ವಶಃ" ||

(ಅನುವ್ಯಾಖ್ಯಾನ)

ಅಂದರೆ ಪದಾರ್ಥಗಳು ಪರಸ್ಪರ ಭೇದವುಳ್ಳಂಥಾವುಗಳು. ಅನ್ಯೋನ್ಯವಾಗಿ ಭಿನ್ನವಾದ ಧರ್ಮವುಳ್ಳಂಥಾವುಗಳು. ಮತ್ತು ತಮ್ಮ ತಮ್ಮ ಧರ್ಮಗಳಿಂದ ಅಭಿನ್ನವಾದಂಥಾವುಗಳು ಮತ್ತು ತಮ್ಮ ತಮ್ಮ ಸ್ವರೂಪದಿಂದಾದರೂ ಅಭಿನ್ನವಾದಂಥಾವುಗಳು.

**ಶ್ಲೋಕ ॥ ಮನ್ಯಂತೇ ಶೂನ್ಯ ಮೇವಾನ್ಯೇ ।**
**ತತ್ವಮಾಗಮ ವೈರಿಣಃ ॥**
**ಮತಾಮಾಧ್ಯಮಿಕಾಸ್ತೇಽಪಿ ।**
**ವ್ಯಕ್ತಾಶ್ಛನ್ನಾ ಇತಿ ದ್ವಯೀ ॥ ೨೪ ॥**

**ವಾರ್ಧಿಕ ॥** ಪ್ರಮೆಯವಿದು ವೈಶೇಷಿಕರಿ ಗನ್ಯ ವೇದಾದಿ ।
ಕ್ರಮದಿ ಸಚ್ಛಾಸ್ತ್ರಗಳ ವೈರಿಗಳು ಮಾಧ್ಯಮಿಕ ॥
ಕುಮತಿ ಬೌದ್ಧರಿ ಶೂನ್ಯ ತತ್ವೆಂದು
ತಿಳಿಯುವರು ಎರಡು ವಿಧವಾಗಿರುವರು ॥
ಅಮಮ ಭಗದ್ಗುಣಾನಂತ್ಯ ಸಹಿಸದಲಿವರು ।
ಅಮಿತ ತಮೊಗುಣರಿವರ ವ್ಯಕ್ತ ಪ್ರಚ್ಛನ್ನರೆಂ ॥
ದೆಮಕದಾ ಪ್ರಚ್ಛನ್ನ ಬೌದ್ಧ ಮಾಯಾವಾದಿ ಪ್ರಮೆಯದಲಿ
ಉಭಯ ಸಾಮ್ಯರ್ ॥ ೨೪ ॥ ೭೩೩ ॥

**ಶೂನ್ಯವಾದಿ ಮಾಯಾವಾದಿಗಳ** ಮತ ನಿರಾಕರಣೆ. ಪ್ರಸ್ತುತ ಭಗವದ್ಗುಣಗಳಿಗೆ **ಅನಂತತ್ವ ಒಪ್ಪದೇ ಇರುವ** ಆಗಮವೈರಿ,-ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ **ಪರಸ್ಪರ** ಪ್ರಮೇಯಗಳಲ್ಲಿ ವಿಶೇಷ ಭೇದವಿಲ್ಲದ ಕಾರಣ ಆ ಶೂನ್ಯ ಮಾಯಾವಾದಿ**ಗಳ ಮತವನ್ನು ಹೇಳುವಗೋಸುಗ** ಆ ಶೂನ್ಯವಾದಿಗಳ ಮತಗಳ ವಿಭಾಗವನ್ನು **ಹೇಳುತ್ತಾರೆ.**

ಬ್ರಹ್ಮಸೂತ್ರಭಾಷ್ಯ ಅಧ್ಯಾಯ ( ೨ ) ಪಾದ ( ೨ ) ಶೂನ್ಯಾಧಿಕರಣದಲ್ಲಿ ಹೇಳಿದ **ಸೂತ್ರಾರ್ಥ**ಭಾವವನ್ನೆ ಇಲ್ಲಿ ವಿಶದಮಾಡುತ್ತಾರೆ

**ಅನ್ವಯ :—** ಅನ್ಯೆ ಆಗಮ ವೈರಿಣಃ, ಮಾಧ್ಯಮಿಕಾ ( ಬೌದ್ಧಾಃ, ) **ತತ್ವಂ, ಶೂನ್ಯಂ, ಮನ್ಯಂತೇ,** ತೇ, ಮಾಧ್ಯಮಿಕಾ, ಅಪಿ, ವ್ಯಕ್ತಾ, ಛನ್ನಾ, ಇತಿ ದ್ವಯೀ ॥

**ಅರ್ಥ :—** ಅನ್ಯೆ=ವೈಶೇಷಿಕಾದಿಗಳ ಬೆಶೆಯಿಂದ ಭಿನ್ನರಾದ, ಆಗಮವೈರಿಣಃ= **ವೇದಾದಿ ಸಚ್ಛಾಸ್ತ್ರಕ್ಕೆ ವೈರಿಗಳಾದ,** ಮಾಧ್ಯಮಿಕಾ= ಬೌದ್ಧರು **ಶೂನ್ಯಮೇವ ತತ್ವಂ, ಮನ್ಯಂತೇ**= ಶೂನ್ಯ ( ಅಸತು ಇಲ್ಲದ್ದು ) ಈ ತತ್ವವನ್ನೇ ಅಂಗೀಕರಿಸುತ್ತಾರೆ. ತೇಪಿ= **ಆ ಶೂನ್ಯವಾದಿಗಳಾದ ಬೌದ್ಧರು,** ವ್ಯಕ್ತಾ= ಸ್ಪಷ್ಟಾಃ, ಛನ್ನಾ=ಪ್ರಚ್ಛಿನ್ನಾ, **ಈ ರೀತಿಯಾಗಿ, ದ್ವಯೆ**= ಎರಡು ಪ್ರಕಾರವಾಗಿರುವದು. ಮತಾ ಕೀರ್ತಿತಾ,= **ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಡುವರು.** ಪ್ರಚ್ಛನ್ನಶೂನ್ಯವಾದಿಗಳೇ ಮಾಯಾವಾದಿಗಳು.

ಭಾವಾರ್ಥ:— ಪ್ರಮೇಯವಿದು,= ನಿಶ್ಚಯವಾದ ತತ್ವವಿದುಕೇಳು ವೈಶೇಷಿಕರಿಗೆ ಬೇರೆ ಮತದವನು. ಕ್ರಮದಿಂದ= ನಿಯಮೇನ ವೇದಗಳನ್ನೂ ಸಚ್ಛಾಸ್ತ್ರಗಳನ್ನೂ ಒಪ್ಪದೆ ವೇದ ಶಾಸ್ತ್ರಗಳನ್ನು ನಿಂದಿಸುವ ಕಾರಣ ವೇದ ಸಚ್ಛಾಸ್ತ್ರಗಳ ವೈರಿಗಳೆಂದು ಕರೆಸಿ ಕೊಳ್ಳುತ್ತಾರೆ. ಇಂಥ ಕೆಟ್ಟ ಮತಿಯುಳ್ಳ ಬೌದ್ಧಮತದಲ್ಲಿ ಪ್ರಭೇದವಾದ ಮಾಧ್ಯಮಿಕ ರೆಂಬುವರು, ಶೂನ್ಯವೇ ( ಅಸತು= ಇಲ್ಲದ್ದು ) ತತ್ವವೆಂದು ತಿಳಿಯುತ್ತಾರೆ.

ಇಂಥ ಮಾಧ್ಯಮಿಕ ಬೌದ್ಧರು, ಎರಡು ಪ್ರಕಾರವಾಗಿರುವರು. ಇವರು, ಅಮಿತ= ಹೆಚ್ಚಿನ ತಮೋಗುಣದಿಂದ ಬದ್ಧರಾದವರು ವ್ಯಕ್ತರು= ಸ್ಪಷ್ಟವಾದ ಬೌದ್ಧರು, ಪ್ರಚ್ಛನ್ನ= ಮುಸುಕು ಹಾಕಿದ (ಮುಚ್ಚಿದ) ಬೌದ್ಧರೆಂದು ಎರಡು ವಿಧವಾಗಿರುವರು. ಏಮುಕದಾ= ವೇಷ ಹಾಕಿ ಸೋಗು ಮಾಡುವ. ಅಂದರೆ ಆ ಶೂನ್ಯ ತತ್ವವನ್ನೆ ಮರೆ ಮಾಡಿಕೊಂಡು, ಆ ಶೂನ್ಯಕ್ಕೆವೇ, ಸಂವೃತಿ= ಮಾಯಾ ಬ್ರಹ್ಮನೆಂದು ಬೇರೆ ಅರ್ಥವನ್ನು ಹೇಳುವ ಪ್ರಚ್ಛನ್ನ ಬೌದ್ಧರೇ ಮಾಯಾವಾದಿಗಳು ಅದ್ವೈತಿಗಳೆಂದು ಕರೆಸುವರು. ಈ ಉಭಯರ ತತ್ವಗಳು ಒಂದೇಯಾಗಿರುವವು.

ಶ್ಲೋಕ ॥ ಶೂನ್ಯಂ ಬ್ರಹ್ಮಾಹ್ವಯೋ ನಾಹುಃ ।
ಸ್ವಾಂಶ್ಚ ವೇಂದಾಂತಿನೋಽಭ್ಯಧುಃ ॥
ಅತತ್ವಾ ವೇದಕಂ ವೇದಂ ।
ವದಂತಶ್ಚರಮೋ ಖಲಾಃ ॥ ೨೫ ॥

ವಾರ್ಧಿಕ ॥ ಹೇಗೆ ? ಬ್ರಹ್ಮನ ಪೇಳ್ವ ಮಾಯಾವಾದಿಯು ಶೂನ್ಯ ।
ಆಗಮದ ವೈರಿಯೆನೆ ಮಂತ್ರ ಬ್ರಾಹ್ಮಣ ವೇದ ।
ವೀಗ ಪರಬ್ರಹ್ಮನನು ದೃಢ ಪೇಳ್ವವಿಲ್ಲೆನುವ ದುಷ್ಟರೇ
ಪ್ರಚ್ಛನ್ನರು ॥
ಬೇಗ ಶೂನ್ಯವು ಬ್ರಹ್ಮನೆಂದು ಪೇಳುತ ತಮಗೆ ।
ಈಗಲೇ ಚತುರ ವೇದಾಂತೆಂದು ಪೇಳುವರು ॥
ಹೀಗೆ ವೇದವು ಅತತ್ವಾ ವೇದಕೆಂದು ಮಿಥ್ಯ ನುಡಿವರು
ಶೂನ್ಯ ಸಮರು ॥ ೨೫ ॥ ೮೩೪ ॥

ಅವತಾರಿಕೆ:— ಬ್ರಹ್ಮವಾದಿಗಳಾದ ಮಾಯಿಗಳಿಗೆ, ಶೂನ್ಯವಾದಿತ್ವ ಹೇಗೆ? ಮತ್ತು ವೇದಾಂತಿಗಳಾದ ಮಾಯಾವಾದಿಗಳಿಗೆ ಆಗಮ ವೈರಿತ್ವವು ಹೇಗೆ? ಅಂದರೆ ಹೇಳುತ್ತಾರೆ.

ಅನ್ವಯಾರ್ಥ:— ವೇದಂ = ಮಂತ್ರ ಬ್ರಾಹ್ಮಣರೂಪ ವೇದವನ್ನು ಅತತ್ವಾವೇದಕಂ= ಅಂದರೆ ತತ್ವಂ= ಬ್ರಹ್ಮಸ್ವರೂಪವನ್ನು ಪ್ರತಿಪಾದನ ಮಾಡತಕ್ಕದ್ದು ಅಲ್ಲವೆಂದು,

ವದಂತಾಃ=ಹೇಳತಕ್ಕಂಥಾ, ಖಲಾಃ= ದುಷ್ಟರಾದ, ಚರಮೇ= ಪೂರ್ವಶ್ಲೋಕದ ಕೊನೆಯ ಭಾಗದಲ್ಲಿ ಹೇಳಿದಂತೆ, ಪ್ರಚ್ಛನ್ನಬೌದ್ಧ= ಮಾಯಾವಾದಿಗಳು, ಶೂನ್ಯಂ =ಶೂನ್ಯತತ್ವವನ್ನು ಬ್ರಹ್ಮಾಹ್ವಯೇನ =ಬ್ರಹ್ಮವೆಂಬ ನಾಮದಿಂದ, ಆಹುಃ =ಹೇಳುವರು. ಆದ ಕಾರಣ ಶೂನ್ಯಕ್ಕೂ, ವಿಶೇಷರಹಿತವಾದ ಪರತತ್ವರೂಪ ಬ್ರಹ್ಮನಿಗೂ ಸಾಮ್ಯವೆ ಪ್ರಾಪ್ತವಾಯಿತು.

ಭಾವಾರ್ಥ:— ಬ್ರಹ್ಮನನ್ನು ಹೇಳತಕ್ಕ ಮಾಯಾವಾದಿಗಳು, ವೇದವೈರಿಗಳಾದ ಶೂನ್ಯವಾದಿಗಳೇ ಹೇಗೆ ಆಗುವರು. ವೇದಂ =ಮಂತ್ರ ಬ್ರಾಹ್ಮಣಾತ್ಮಕ ವೇದಗಳು, ಅತತ್ವಾವೇದಕಂ =ಪರಬ್ರಹ್ಮನಾದ ಪರತತ್ವವನ್ನು ಬೋಧಿಸುವದಿಲ್ಲೆಂದು ಹೇಳುವರು. ವೇದವೇದ್ಯನಾದ ಭಗವಂತನಿಗೆ ವೇದಪ್ರತಿಪಾದ್ಯನೆಂದು ಹೇಳುವದರಿಂದಲೇ ಇವರು, ಖಳಾ= ದುಷ್ಟರಾದ, ಹಿಂದೆ ಕೊನೆಗೆ ಹೇಳಿದ ಪ್ರಚ್ಛನ್ನ ಬೌದ್ಧರೇ ಮಾಯಾವಾದಿಗಳು, ಶೂನ್ಯವನ್ನು ಬ್ರಹ್ಮನೆಂಬ ನಾಮದಿಂದ ಹೇಳುತ್ತಾರೆ. ಶೂನ್ಯವಾದಿಗಳಂತೆ ಶೂನ್ಯಕ್ಕೆ ನಿರ್ವಿಶೇಷ ತತ್ವ 'ಬ್ರಹ್ಮ,ನೆಂದು ಮಾಯಾವಾದಿಗಳು ಹೇಳುತ್ತಾರೆ. ಆದ ಕಾರಣ ಶೂನ್ಯದಿಂದ ವಿಶೇಷವಿಲ್ಲದ ಪರತತ್ವಕ್ಕೆ ಬ್ರಹ್ಮನೆಂದು ಹೇಳಿ ತಮಗೆ ತಾವೆ, ಜಾಣ= ಚತುರರಾದ ವೇದಾಂತಿಗಳು, =ವೇದ ಬಲ್ಲವರೆಂದು ಹೇಳಿಕೊಂಬುವರು. ಹೀಗೆ ಶೂನ್ಯ ಬ್ರಹ್ಮವೆಂಬ ಶಬ್ದ ಮಾತ್ರದಿಂದಲೇ ಭೇದ ಹೊರ್ತಾಗಿ ವಾಸ್ತವವಾಗಿ ಅರ್ಥ ಭೇದವಿಲ್ಲ.

ವೇದವು ಅತತ್ವಾವೇದಕವೆಂದರೆ, ಸತ್ಯತ್ವವನ್ನು ಹೇಳುವದಿಲ್ಲೆಂದಮೇಲೆ, (ಸುಳ್ಳು) ಆವೇದಯತಿ= ಪ್ರತಿಪಾದನ ಮಾಡುತ್ತದೆ. (ಅತತ್ವಾವೇದಕಂ ತತ್ವಂ ಬ್ರಹ್ಮಸ್ವರೂಪಂ) ಯಾವುದು ತತ್ವಾವೇದಕವಲ್ಲವೊ ಅದೇ ಅತತ್ವಾವೇದಕ, ಮಿಥ್ಯಾಭೂತಾರ್ಥವನ್ನೇ ಹೇಳಿದಂತಾದ ಕಾರಣ, ಮಾಯಾವಾದಿಗಳಿಗೆ ಆಗಮ ವೈರಿತ್ವವೂ, ನಿರ್ವಿಶೇಷ ಶೂನ್ಯ ಸದೃಶವೆಂದರೆ, ಪರಬ್ರಹ್ಮನು ನಿರ್ಗುಣ ನಿರಾಕಾರ, ನಿರವಯವ, ನಿರ್ವಿಶೇಷ, ನಿರ್ಧರ್ಮಿ, ನೆಂಬುದರಿಂದ ಶೂನ್ಯವೆಂಬ ಭಾವವನ್ನೇ ಹೇಳಿದಂತಾಯಿತು. ಈ ಕಾರಣ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಕಿಂಚಿತ್ತಾದರೂ ಭೇದವಿಲ್ಲ. "ಯಚ್ಛೂನ್ಯವಾದಿನಃ ಶೂನ್ಯಂ ತದೇವ ಬ್ರಹ್ಮಮಾಯಿನಃ" ನಹಿಲಕ್ಷಣ ಭೇದೋಸ್ತಿ ನಿರ್ವಿಶೇಷತ್ವ ತಸ್ತಯೋಃ ಎಂಬ ಅನುವ್ಯಾಖ್ಯಾನದಲ್ಲಿ ಪ್ರಮಾಣವು ಮೇಲೆ ವಿವರಿಸಿದ ಅರ್ಥವನ್ನೆ ಹೇಳುತ್ತಾರೆ.

ಶ್ಲೋಕ ॥ ಪರತತ್ವ ವಿವರ್ತತ್ವಾ ।
ದಪರಸ್ಯಾಖಿಲಸ್ಯ ಚ ॥
ಅವಿಶೇಷತ್ವತಶ್ಚಾಸ್ಯ ।
ನಾಂತರಂತರ ಮೇತಯೋಃ ॥ ೨೬ ॥

ವಾರ್ಧಿಕ ॥ ಮತಿಭ್ರಂಶ ಉಭಯವಾದಿಗೆ ತತ್ವ ವಿಷಯದಲಿ।
ಸತತಂ (ದಿ) ವಿವಾದಿಲ್ಲ ಬ್ರಹ್ಮಾತಿರಿಕ್ತ ಜಗ॥
ಕತುಲ ಬ್ರಹ್ಮನೆ ಉಪಾದಾನ ಕಾರಣವೆಂದು ಮಾಯ-
ವಾದಿಗಳು ಪೇಳ್ವರ್ ॥

ಗತಿ ತಪ್ಪಿ ಶೂನ್ಯವಾದಿಗಳು ಶೂನ್ಯಂಬುವದೆ।
ಹಿತದಿ ಪ್ರಪಂಚ ರೂಪದಿ ತೋರ್ವದೆನ್ನುವರ ॥
ಮತ ಉಭಯ ಶೂನ್ಯಕ್ಕು ಅದ್ವೈತಿ ಪರಬ್ರಹ್ಮಗಂ।
ವಿಶೇಷಿಲ್ಲ ಸಮರು ॥ ೨೬ ॥ ೮೩೫ ॥

ಈ ಪ್ರಕಾರವಾಗಿ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಪರತತ್ವ ವಿಷಯದಲ್ಲಿ ವಿವಾದವಿಲ್ಲದೆ, ಉಭಯರು ಸಮಾನರೆಂದು ಹೇಳಿ, ಇನ್ನು ಮುಂದೆ ಅಪರ ತತ್ವವಾದ ಬ್ರಹ್ಮನ ಹೊರ್ತಾಗಿ ವಿಯದಾದಿ ಎಲ್ಲ ಪ್ರಪಂಚ ವಿಷಯದಲ್ಲಿಯೂ, ಉಭಯರಿಗೂ, ಭೇದವಿಲ್ಲೆಂದು ಹೇಳುತ್ತಾರೆ.

ಅನ್ವಯಃ— ಅಖಿಲಸ್ಯ, ಅಪರಸ್ಯಚ, ಪರತತ್ವ, ವಿವೃತತ್ವಾತ್, (ತಸ್ಯ) ಅಸ್ಯಚ, ಅವಿಶೇಷತ್ವತಃ, ಏತಯೋಃ, ಅಂತಃ, ನ, ಅಂತರಃ ॥

ಅರ್ಥ:— ಅಖಿಲಸ್ಯ, ಅಪರಸ್ಯಚ =ಅಪರತತ್ವವಾದ ಜಗತ್ತೆಲ್ಲವು. ಪರತತ್ವ= ಬ್ರಹ್ಮನೇ, ವಿವೃತತ್ವಾತ್= ಭ್ರಾಂತಿಯಿಂದ ವುಪಾದಾನ ಕಾರಣವಾಗಿ ಉಳ್ಳಂಥಾದ್ದು, ತಸ್ಯಭಾವಃ ಪರತತ್ವ ವಿವೃತತ್ವಂ= ಪರತತ್ವ ಉಪಾದಾನತ್ವ ವಿರುವದರಿಂದ, ಅಸ್ಯ= ಬ್ರಹ್ಮನಿಗೆ, ಅವಿಶೇಷತ್ವತಃ =ಶೂನ್ಯದಕಿಂತಲ್ಲೂ ವಿಶೇಷರಹಿತತ್ವ ಇರೋಣದರಿಂದಾದರೂ, ಏತಯೋಃ= ಬ್ರಹ್ಮಶೂನ್ಯಗಳಿಗೆ, ಅಂತರಂ= ಭೇಧವು, ನಾಸ್ತಿ= ಇಲ್ಲವು.

ಭಾವಾರ್ಥ:— ಬ್ರಹ್ಮಶೂನ್ಯಗಳೆಂದು ತಿಳಿಯದೇ ಮತಿಭ್ರಂಶ =ಬುದ್ಧಿಗೆಟ್ಟ, ತಿಳಿಗೇಡಿ ಶೂನ್ಯವಾದಿ ಮಾಯಾವಾದಿಗಳಲ್ಲಿ ಯಾವಾಗಲೂ ಪರತತ್ವ ವಿಷಯದಲ್ಲಿ ಭೇದವಿಲ್ಲದೇ, ಬ್ರಹ್ಮಾತಿರಕ್ತ, ಬ್ರಹ್ಮನ ಹೊರ್ತಾಗಿರುವ ಆಕಾಶಾದಿ ಸರ್ವ ಪ್ರಪಂಚರೂಪವಾದ ಜಗತ್ತಿಗೆ, ಅತುಲ =ಸರಿಯಿಲ್ಲದ ಪರಬ್ರಹ್ಮನೇ ಉಪಾದಾನಕಾರಣ= (ಕೊಡ ಮಾಡಲಿಕ್ಕೆ ಮಣ್ಣು ಹೇಗೆ ಕಾರಣವಾಗಿದೊ, ಇದಕ್ಕೆ ಉಪಾದಾನ ಕಾರಣವೆನ್ನುವರು)

(ಗಡಿಗೆಗೆ ಮಣ್ಣಿನಂತೆ) ಮಾಯಾವಾದಿಯು, ಬ್ರಹ್ಮನು ಪ್ರಪಂಚಕ್ಕೆ ಉಪಾದಾನ ಕಾರಣನಾಗುತ್ತಾನೆಂದರೆ, ಮಿಥ್ಯಾಭೂತ ಪ್ರಪಂಚಾರೋಪಕ್ಕೆ ಅಧಿಷ್ಠಾನನಾಗುತ್ತಾನೆ. ಈ ಉಪಾದಾನ ಕಾರಣವು ನಿರ್ವಿಕಾರೋಪಾದಾನವೆಂತ ಹೇಳುತ್ತಾರೆ. ಹೇಗೆಂದರೆ, ರಜ್ಜು (ಹಗ್ಗ) ಭ್ರಾಂತಿಯಿಂದ ಸರ್ಪದಂತೆಯೂ, ಕಪಚಿಪು ಬೆಳ್ಳಿಯಂತೇ

ಸರ್ಪ ಬೆಳ್ಳಿಗಳೆಂಬ ಭ್ರಾಂತಿಗೆ ಕಾರಣವಾದಂತೆ, ಪರಬ್ರಹ್ಮನೇ ಪ್ರಪಂಚವಾಗಿ ತೋರುವದಕ್ಕೆ ಕಾರಣನಾಗುತ್ತಾನೆಂದು ಹೇಳುವರು. ಶೂನ್ಯವಾದಿಗಳು ಪ್ರಪಂಚವು ಶೂನ್ಯೋಪಾದಾನವು, ಶೂನ್ಯವೆಂಬುದೇ ಪ್ರಪಂಚರೂಪದಿಂದ ತೋರುತ್ತಿದೆ ಎನ್ನುತ್ತಾರೆ. ಶೂನ್ಯಕ್ಕೂ, ಮಾಯಾವಾದಿ ಪರಬ್ರಹ್ಮಗೂ, ಯಾವ ಪ್ರಮೇಯ ವಿಷಯದಲ್ಲಿ ವಿಶೇಷವಿಲ್ಲದ್ದರಿಂದ, ಉಭಯಮತಗಳಿಗೆ ಪರಸ್ಪರ ಭೇದವಿಲ್ಲ.

ಪ್ರವತ್ತ್ಯೋಪದಾನ = ಬ್ರಹ್ಮನೇ ಪರಿಣಮಿಸಿ ಜಗದಾಕಾರನಿಗಿದ್ದಾನೆಂದರೆ, (ಮೃತ್ತಿಕೆ ಪರಿಣಮಿಸಿ ಘಟದಂತೆ)

**ಶ್ಲೋಕ ॥ ಅಖಂಡ ಖಂಡನ ನ್ಯಾಯಾ ।**
**ನಖಂಡ ಮಪಿ ಖಂಡಯನ್ ॥**
**ಅಖಂಡಯ ದಖಂಡಜ್ಞೋ ।**
**ದ್ವಯಾಂಶ್ಚಾಖಂಡಲದ್ವಿಷಃ ॥ ೨೭ ॥**

ವಾರ್ಧಿಕ ॥ ಖಂಡಿಸಿದಖಂಡಜ್ಞ ಸಕಲ ಸ್ವಸಿದ್ಧಾಂತ ।
ಮಂಡನ ನಿರಾಕರಣ ರೂಪಂ ಕುತರ್ಕಗಳು ॥
ಚಂಡ ನ್ಯಾಯಾಭಾಸ ನಿರ್ವಿಶೇಷಂದಂಗಿ ಕೃತವು
ಪರತತ್ವಸಹಿತ ಇ ।
ಥ್ಥಂಡ ಮಾಯಾವಾದಿ ಶೂನ್ಯವಾದಿಯ ಗರ್ವ ।
ಹಿಂಡಿ ಈ ದ್ವಿವಿಧರಾದಸುರರಂ ನಿತ್ಯದಿ ಆ ॥
ಖಂಡಲ ದ್ವೇಷರು ದಂಡನೆ ಗರ್ಹರೆಂತಿಳಿದ ಪುಂಡ ।
ರೀಕಾಕ್ಷ ಭಕ್ತ ॥ ೨೭ ॥ ೮೩೬ ॥

ಈ ರೀತಿಯಾಗಿ ಪೂರ್ವೋಕ್ತ, ಶೂನ್ಯ ಮಾಯಾವಾದಿಗಳ ಮತದ್ವಯಕ್ಕೆ ಸಾಮ್ಯವನ್ನು ಉಪಪಾದನೆ ಮಾಡಿ, ಆ ಮತಗಳೆರಡನ್ನೂ ಶ್ರೀಮದಾಚಾರ್ಯರು ನಿರಾಕರಿಸಿದರೆಂದು, ಗ್ರಂಥಕರ್ತೃಗಳಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರು, ಈ ಶ್ಲೋಕದಲ್ಲಿ ಹೇಳುತ್ತಾರೆ.

ಅನ್ವಯ:— ಅಖಂಡಜ್ಞ, ಅಖಂಡ ಖಂಡನ ನ್ಯಾಯಾನ್, ಅಖಂಡಂ ಅಪಿ= ಅಖಂಡಯನ್, ದ್ವಯಾನಚ, ಆಖಂಡಲದ್ವಿಷಃ ಅಖಂಡಯುತ್,

ಅರ್ಥ:— ಅಖಂಡಜ್ಞ= ಸಮಸ್ತ ಜಗತ್ತನ್ನೂ ಅನಾಲೋಚನೆಯಿಂದ ತಿಳಿದ ಶ್ರೀಪೂರ್ಣಪ್ರಜ್ಞಾಚಾರ್ಯರು, ಅಖಂಡ ಖಂಡನ್ಯಾಯಾನ್= ಸಮಸ್ತವಾದ, ಸ್ವಸಿದ್ಧಾಂತ

ನಿರಾಕರಣರೂಪವಾದ ಕುಯುಕ್ತಿಗಳನ್ನು, ಅಖಂಡಮಪಿ= ನಿರ್ವಿಶೇಷತ್ವೇನ, ಅಂಗೀಕೃತವಾದ ಪರತತ್ವವನ್ನು ಕೂಡಾ, ಖಂಡಯನ್,= ನಿರಾಕರಿಸಿದವರಾಗಿ, ದ್ವಯಾನಪಿ= ದ್ವಿವಿಧರಾದ ಶೂನ್ಯಮಾಯಾವಾದಿಗಳಾದಂಥಾ ಇಬ್ಬರು, ಆಖಂಡಲದ್ವಿಷಃ= ಇಂದ್ರದೇವರ ಶತ್ರುಗಳನ್ನೂ. ಖಂಡಯತ್= ಖಂಡಿಸಿದರು.

ಭಾವಾರ್ಥ:— ಅಖಂಡಜ್ಞ= ಸರ್ವವನ್ನು ಬಲ್ಲ ಸರ್ವಜ್ಞರಾದ ಪೂರ್ಣಪ್ರಜ್ಞರು ತಮ್ಮ ಸಿದ್ಧಾಂತದ, ಮಂಡನ =ಅಲಂಕಾರಕ್ಕೆ ಶೋಭೆಯನ್ನು ನಿರಾಕರಣ ಮಾಡಲಿಕ್ಕೆ ಅಸಮರ್ಥವಾದ ಕುಯುಕ್ತಿಗಳನ್ನು. ಚಂಡನ್ಯಾಯಾಭಾಸ= ವಿಚಾರವಿಲ್ಲದ ಜನರಿಗೆ ಬಾಹ್ಯದಲ್ಲಿ ಚಂಡ= ಪ್ರಖರವಾದ ಧೃಡತರವಾದ, ನ್ಯಾಯಾಭಾಸ=ಪ್ರಬಲವಾದ ಯುಕ್ತಿಗಳಂತೇ ಆಭಾಸವಾಗಿ ತೋರುವ ಕೆಟ್ಟ ಯುಕ್ತಿಗಳನ್ನೂ, ಮತ್ತು ನಿರ್ವಿಶೇಷ, ನಿರಾಕಾರ, ನಿರವಯುವ ಶೂನ್ಯ (ಯಿಲ್ಲದ್ದು) ವೇ ಪರತತ್ವವೆಂದು ತಿಳಿದ ಇತ್ಥಂಡ= ಎರಡು ವಿಧರಾದ ಮಾಯಾವಾದಿಗಳ ಶೂನ್ಯವಾದಿಗಳ ಸೊಕ್ಕನ್ನು, ಹಿಂಡಿ =ತಗ್ಗಿಸಿ ಮುರಿದು, ಈ ಎರಡೂ ವಿಧರಾದ ಅಸುರರು= ದೇವತೆಗಳಲ್ಲದ ದೈತ್ಯದಾನವರು, ಆಖಂಡಲದ್ವಿಷರು ಇಂದ್ರದೇವರಿಗೆ ನಿತ್ಯಶತ್ರುಗಳು, ಇವರು ದಂಡಿಸಲಿಕ್ಕೆ ಯೋಗ್ಯರೆಂದು ನಿಶ್ಚಯವಾಗಿ ತಿಳಿದ, ಪುಂಡರೀಕಾಕ್ಷ=ಕಮಲದಂತೆ ಕಣ್ಣುಳ್ಳ ಶ್ರೀಹರಿಯ ನಿಜಭಕ್ತ= ಅಚ್ಛಿನ್ನಭಕ್ತರಾದ ಶ್ರೀಮದಾಚಾರ್ಯರು, ಮಾಯಾವಾದಿ ಶೂನ್ಯವಾದಿಗಳನ್ನು ಖಂಡಿಸಿದರು= ಭೇದಿಸಿದರು. ನಿರಾಕರಿಸಿದರು.

**ಶ್ಲೋಕ ॥ ವಿಮತಂ ಕಾರಣಂ ನ ಸ್ಯಾ।**
**ದಸತ್ವಾನ್ನ ಯದೀದೃಶಮ್ ॥**
**ನೇದೃಶಂ ತದ್ಯಥಾ ಕುಂಭ।**
**ಕರ್ತೇತ್ಯತ್ರಾನುಮಾಯತೇ ॥ ೨೮ ॥**

ವಾರ್ಧಿಕ ॥ ವಿರುವ ಗ್ರಸ್ತ ವಿವಾದ ಶೂನ್ಯವದು ಜಗತಿಂಗೆ।
ನಿರುತ ಕಾರಣವಲ್ಲ ವೇಕೆನೆ ಅಸತ್ವಾತ್ ॥
ಇರುವದದು ತಾನಲ್ಲ ಉರ್ವಿಗದು ಕಾರಣವು ಹೇಗಾಗುವುದು ಶೂನ್ಯನೇ ||
ಖರೆಯ ಜಗದಲಿ ಕಾರಣಾಗುವದು ಸತ್ಯದಲಿ।
ಇರಲಿಯೇ ಬೇಕು ಹೇಗೆನೆ ಕುಂಭಕಂ ಕಾರ್ಣ।
ಇರುವ ನಾಗಿರ್ದ್ದಾನೆ ಘಟಕರ್ತನೆಂಬ ಅನುಮಾನದಿ ನಿರಾಕರಿಪೆವೊ || ೨೮ || ೮೩೭ ||

ಮೇಲಿನ ಯುಕ್ತಿಗಳಿಂದಲ್ಲದೇ ಪ್ರಮಾಣಾಂತರಗಳಿಂದ ಶೂನ್ಯವಾದಿಗಳ ಮತವನ್ನು ನಿರಾಕರಿಸುತ್ತಾರೆ. ಈಗ ಶೂನ್ಯವಾದಿಗಳ ಮತವನ್ನು ನಿರಾಕರಿಸುವ ಕ್ರಮ.

ಅನ್ವಯ :— ವಿಮತಂ, ಕಾರಣಂ, ನಸ್ಯಾತ್, ಅಸತ್ವಾತ್, ಯತ್, ಈದೃಶಂ ನ, ತತ್, ಈದೃಶಂ, ನ, ಯಥಾ ಕುಂಭಕರ್ತಾ, ಇತಿ, (ಅಸ್ಮಾಭಿಃ) ಅತ್ರ ಅನುಮೀಯತೇ ||

ಅರ್ಥ : -- ವಿಮತಂ= ಜಗತ್ಕಾರಣವೊ ಅಥವಾ ಅಲ್ಲವೊ ಎಂಬ ವಿವಾದ ವಿಷಯವಾದ ಶೂನ್ಯವು, ಕಾರಣಂ ನ ಸ್ಯಾತ್= ಜಗತ್ತಿಗೆ ಕಾರಣವಾಗಲಾರದು. ಏಕಂದರೆ, ಅಸತ್ವಾತ್= (ಅಸತು) ಇಲ್ಲದಿದ್ದ ಪ್ರಯುಕ್ತ, ಯತ್ ಈದೃಶಂ ನ,= ಯಾವುದು ಕಾರಣವೆಂತಲ್ಲವೊ ಅಂದರೆ ಯಾವುದು ಕಾರಣವೋ, ತತ್ ಈದೃಶಂ ನ= ಅದು ಇದ್ದಂಥಾದ್ದು ಅಸತ್ತು ಅಲ್ಲ, ಯಥಾ ಕುಂಭಕರ್ತಾ= ದೃಷ್ಟಾಂತ ಕುಂಬಾರನು ಅಸತ್ತು ಅಲ್ಲ ಕಾರಣನಾಗುವನು. ಇತಿ= ಈ ಪ್ರಕಾರವಾಗಿ, ಅತ್ರ= ಶೂನ್ಯವಾದಿಯು ಮತ ವಿಷಯದಲ್ಲಿ, ಅಸ್ಮಾಭಿಃ= ನಮ್ಮಗಳಿಂದ. ಅನುಮೀಯತೇ= ಯುಕ್ತಿಯು ಹೇಳಲ್ಪಡುತ್ತದೆ.

ಭಾವಾರ್ಥ :— ಮಾಧ್ಯಮಿಕರಾದ ಬೌದ್ಧರು ವಿವಾದಾಸ್ಪದವಾದ ಶೂನ್ಯವೇ ಜಗತ್ಕಾರಣವೆಂದು ಹೇಳುತ್ತಾರೆ; ಇ ಶೂನ್ಯವು ಜಗತ್ತಿಗೆ ಕಾರಣವಾಗಲಾರದು, ಏಕಂದರೆ ಆ ಶೂನ್ಯವು ಇರುವ ವಸ್ತುವೆ ಅಲ್ಲವಾದುದರಿಂದ, ಎಲೈ ಶೂನ್ಯವಾದಿಯೆ ಶೂನ್ಯವು, ಊರ್ವಿಗೆ= ಜಗತ್ತಿಗ ಹೇಗೆ ಕಾರಣವಾಗುವದು ಹೇಳು ? ಲೋಕದಲ್ಲಿ ಯಾವುದು ಕಾರಣವಾಗಿರುತ್ತದೋ, ಅದು 'ಅಸತು' ಇಲ್ಲದ್ದು ಆಗುವುದಿಲ್ಲ. ಅದು ಸತ್ಯವಾಗಿ ಇದ್ದುದಾಗಿಯೇ ಇರಬೇಕು. ದೃಷ್ಟಾಂತ ಹೇಗೆಂದರೆ ಕುಂಬಾರನು ಗಡಿಗೆಗೆ ಕಾರಣನು. ಗಡಿಯನ್ನುಂಟುಮಾಡತಕ್ಕವನು ಆ ಕುಂಬಾರನು ಇರತಕ್ಕವನೇ ಆಗಿದ್ದಾನೆ. ಎಂಬ ಈ ವ್ಯತಿರೇಕ ಯುಕ್ತಿಯಿಂದ, ಶೂನ್ಯವಾದಿಗಳು ಹೇಳುವ ಶೂನ್ಯವೇ ಜಗತ್ತಿಗೆ ಕಾರಣವೆಂಬ ವಿಷಯವನ್ನು ನಿರಾಕರಿಸುತ್ತೇವೆ.

ಸತ್= ಎಂದರೆ ಖರೆಯವಾಗಿರುವ ವಸ್ತು. ಗಡಿಗೆ (ಮಡಿಕೆ) ಮೊದಲಾದ ವಸ್ತು, ಅಸತು ಎಂದರೆ= ಶಶಿವಿಷಾಣ ಖರವಿಷಾಣ ಮೊಲದ ಕೋಡು, ಕತ್ತೆಯ ಕೋಡು ಮುಂತಾದವುಗಳು ಯಾವಾಗ್ಯೂ ಇರದೇ ಇದ್ದವು. ಜಗತ್ತಿಗೆ ಕಾರಣವಾಗಲಾರದು.

"ಯತ್ಸತ್ವೆ ಯತ್ಸತ್ವಂ= ಅನ್ವಯವ್ಯಾಪ್ತಿ, ಎಂದರೆ ಧೂಮ ಇದ್ದಲ್ಲಿ ವಹ್ನಿ ಇರುತ್ತದೆ.

"ಯದಭಾವೆ ಯದಭಾವಃ" ವ್ಯತಿರೇಕವೆಂದರೆ ವಹ್ನಿ ಇಲ್ಲದಿದ್ದರೆ ಧೂಮವು ಇರುವದಿಲ್ಲ. ಕಾರಣವಿಲ್ಲದೆ ಕಾರ್ಯವಿರಲಾರದು.

**ಶ್ಲೋಕ ॥ ಅಂಘೋಃ (ಹೋಃ) ತಾಪಸ ನೋಃ ಶೂನ್ಯಂ ।**
**ಕಾರಣಂ ಕುಂಭಕರ್ತೃವತ್ ॥**
**ಯತ್ಸಂಸ್ಕೃತ್ಯುತ್ಥಿತಂ ವಿಶ್ವಂ ।**
**ತತ್ಕಾರಣ ಮಿತೀರ್ಯತೇ ॥ ೨೯ ॥**

ವಾರ್ಧಿಕ ॥ ಮರುಳೆ ಹೇ ಶಾಕ್ಯಮುನಿ ಕೇಳೆಲವೊ ಜಗತಿಂಗೆ ।
ಭರದಿ ಶೂನ್ಯಂ ಕುಲಾಲನ ತೆರದಿ ಕಾರ್ಣಲ್ಲ ॥
ಪರಿಣಾಮುಸಾಪೇಕ್ಷ ಬಾಹ್ಯುಪಾದಾನ ಕಾರಣ
ನಿಮಿತ್ಯನು ಕುಲಾಲ ॥
ಅರೆರೆ ಪ್ರಾಪಂಚ್ಯಾವ ಶೂನ್ಯ ಜ್ಞಾನದಿ ನಿನಗೆ ।
ನಿರುತ ತೋರುವುದು ಆ ಶೂನ್ಯವೇ ಕಾರಣವು ॥
ಇರುವದೆಂದದು ನೀನು ಪೇಳ್ವದಷ್ಟೆಲೊಮಾಯಿ
ಇದಕುತ್ತರಂ ಕೊಡುವೆವು ॥ ೨೯ ॥ ೮೩೮ ॥

ಈ ರೀತಿಯಾದ ಅನುಮಾನದಿಂದ ಶೂನ್ಯಕ್ಕೆ ಜಗತ್ಕಾರಣತ್ವವನ್ನು ದೂಷಿಸಿ, ಶೂನ್ಯವಾದಿಯಿಂದ ಹೇಳಲ್ಪಟ್ಟ ಪೂರ್ವಪಕ್ಷವನ್ನು ಈ ಶ್ಲೋಕದಲ್ಲಿ ಅನುವಾದ ಮಾಡಿ ಮುಂದೆ ೩೦-೩೧ ಈ ಎರಡು ಶ್ಲೋಕಗಳಿಂದ ಅವನ ಅನುಮಾನವನ್ನು ದೂಷಿಸಿ ನಿರಾಕರಿಸುತ್ತಾರೆ.

ಅನ್ವಯ:— ಅಹೋ, ತಾಪಸ, ಶೂನ್ಯಂ, ಕುಂಭಕರ್ತವತ್, ನೋಃಕಾರಣಂ (ನೋಃಭವತಿ) ಕಿಂತು ವಿಶ್ವಂ, ಯತ್ ಸಂಸೃತಿ ಉತ್ಥಿತಂ, ತತ್‌ಕಾರಣಂ- ಇತಿ ಈರ್ಯತೇ ||

ಅರ್ಥ:— ಅಹೋತಾಪಸ= ಎಲೈ ತಪಸ್ವಿಗಳಂತೆ ವರ್ತಿಸಿ ನಟನ ಮಾಡಿ ತೋರುವ ಬೌದ್ಧ ಸನ್ಯಾಸಿಯೇ, ಶೂನ್ಯಂ =ಶೂನ್ಯವು (ಇಲ್ಲದ್ದು) ಕುಂಭಕರ್ತವತ್= ಗಡಿಗೆ ಮಾಡುವ ಕುಂಭಾರನಂತೆ, ನೋಃಕಾರಣಂ= ಜಗತ್ಕಾರಣನಾಗಲಾರನು ಎಂದು ಹೇಳಲಾಗಿ, ಕಿಂತು ವಿಶ್ವಂ= ಆದರೆ ಜಗತ್ತು, ಯತ್ ಸಂಸೃತಿ= ಯಾವ ಶೂನ್ಯದ ಅಜ್ಞಾನದಿಂದ, ಉತ್ಥಿತಂ= ಭಾಸವಾಗಿ ಕಾಣುತ್ತದೋ ತತ್= ಆ ಶೂನ್ಯವು, ಕಾರಣ ಮಿತಿ= ಕಾರಣವೆಂದು (ನಿನ್ನಿಂದ) ಈರ್ಯತೇ= ಹೇಳಲ್ಪಡುತ್ತದೆ? ಆದಕಾರಣದ್ದೆಶೆಯಿಂದ ಅದು ಕಾರಣವಲ್ಲ.

ಭಾವಾರ್ಥ:— ಮರುಳೆ =ಮಂದಮತಿಯಾದ, ಶಾಕ್ಯಮುನಿ= ಬೌದ್ಧನೇ ಕೇಳು. ಕೊಡಮಾಡಲಿಕ್ಕೆ ಕುಂಬಾರನು ಕಾರಣವಾದಂತೆ, ಜಗತ್ತಿಗೆ ಶೂನ್ಯವು ಕಾರಣವಾಗಲಾರದು.

ಏಕಂದರೆ ಕೊಡವನ್ನು ಮಾಡಲು, ಆ ಕೊಡಕ್ಕೆ (ಉಪಾದಾನ ಕಾರಣವಾದ) ಮಣ್ಣಿನಿಂದ ಹೇಗೆ ಕುಂಬಾರನು ಕೊಡವನ್ನು ಮಾಡುತ್ತಾನೊ ಆಗ ಕೊಡಕ್ಕೆ ಮಣ್ಣು ಉಪದಾನ= ಪರಿಣಾಮಿ ಕಾರಣ, ಕುಂಬಾರನು ನಿಮಿತ್ತ ಕಾರಣ, ಹೀಗೆ ಶೂನ್ಯವು ಅನ್ಯವಾದ ಉಪಾದಾನ (ಪರಿಣಾಮಿ) ಕಾರಣವನ್ನು ಅಪೇಕ್ಷಿಸಿ ಜಗತ್‌ಸೃಷ್ಟಿಯನ್ನು ಮಾಡುವದಿಲ್ಲವೆಂದು ಶೂನ್ಯವಾದಿಯು ಹೇಳುತ್ತಾನೆ. ಅದು ಹೇಗಂದರೆ,

ಕುಂಬಾರನಂತೆ, ಶೂನ್ಯವು ಜಗತ್ಕಾರಣವೆಂದು ನಾನು ಹೇಳುದದಿಲ್ಲ. ಹೇಗೆ ಕುಂಬಾರನು ಉಪಾದಾನ ಕಾರಣವಾದ ಮೃತ್ತಿಕೆಯನ್ನು ಸ್ವೀಕಾರ ಮಾಡಿ ಕೊಡವನ್ನು ಮಾಡುತ್ತಾನೋ, ಹಾಗೆ ಶೂನ್ಯವು ತನ್ನ ಭಿನ್ನವಾದ ಉಪಾದಾನ ಕಾರಣವನ್ನು ಸ್ವೀಕರಿಸಿ ಜಗತ್ತನ್ನು ಸೃಷ್ಟಿ ಮಾಡುವದೆಂದು ಹೇಳುವದಿಲ್ಲ. ಹೇಗೆ ಹೇಳುತ್ತೇವೆಂದರೆ ಜಗತ್ತು ಯಾವ ಶೂನ್ಯದ ಅಜ್ಞಾನದಿಂದ ತೋರುವದೋ ಅಂಥ ಶೂನ್ಯವೆ ಜಗತ್ತಿಗೆ ಕಾರಣವೆಂದು ನನ್ನಿಂದ ಹೇಳಲ್ಪಡುತ್ತದೆ ಎಂದರೆ,

ಮುಂದಿನ ಶ್ಲೋಕಗಳಿಂದ ಇದರ ಖಂಡನೆ ಮಾಡುತ್ತಾರೆ

**ಶ್ಲೋಕ ॥ ಏವಂ ಚೇತ್ ಕಾರಣಂ ಮಾ ಸ್ಮ।**
**ಬ್ರವೀಃ ಶೂನ್ಯಂ ಕಥಂಚನ ॥**
**ಆಯುಷ್ಮಂಸ್ತದಧಿಷ್ಠಾನಂ ।**
**ವ್ಯುತ್ಪಿತ್ಸಸ್ವ ಗುರೋರ್ಗೃಹೇ ॥ ೩೦ ॥**

ವಾರ್ಧಿಕ ॥ ಹಿಂದೆ ನೀಂ ಪೇಳ್ದಂತೆ ಶೂನ್ಯ ಸ್ವತಂತ್ರದಿಂ।
ದೆಂದು ಜಗತಿಗೆ ಕಾರಣೆಂದ್ಯಾವ ರೀತಿಯಲಿ ॥
ಇಂದು ಪೇಳಲಿ ಬೇಡ ಶೂನ್ಯವು ಅಧಿಷ್ಠಾನವೆಂದು
ನಿನ ಮತದತತ್ವ ॥
ಎಂದಿಗೂ ಕಾರ್ಣವಲ್ಲ ದೀರ್ಘಾಯು ವ್ಯರ್ಥವೆಲೊ।
ಮುಂದೆ ನೀ ಗುರುಕುಲದಿ ವಾಸಿಸುತ ಚನ್ನಾಗಿ ॥
ಛಂದದಲಧಿಷ್ಠಾನ ಕಾರ್ಣ ಸ್ವರೂಪಗಳ ನಿಜತಿಳಿದು
ವ್ಯವಹರಿಸೆಲೈ ॥ ೩೦ ॥ ೮೩೯ ॥

ಮೇಲೆ ಹೇಳಿದ ಶೂನ್ಯವಾದಿಗಳ ಪೂರ್ವ ಪಕ್ಷವನ್ನು ಖಂಡಿಸುತ್ತಾರೆ.

ಅನ್ವಯಃ— ಏವಂ ಚೇತ್, ಶೂನ್ಯಂ, ಕಾರಣಂ, ಕಥಂಚನ, ಮಾ, ಸ್ಮ, ಬ್ರವೀಃ, ನ್, ತತ್, ಅಧಿಷ್ಠಾನಂ, (ಭವತಿ) ಗುರೋಃ, ಗೃಹೇ, ವ್ಯುತ್ಪಿತ್ಸಸ್ವ ॥

ಅರ್ಥ:— ಏವಂ ಚೇತ್= ಹೀಗೆ ಹೇಳುವ ಪಕ್ಷದಲ್ಲಿ, ಶೂನ್ಯಂ ಕಾರಣಂ= ಶೂನ್ಯವನ್ನು ಕಾರಣವನ್ನಾಗಿ, ಕಂಥಚನ ಮಾಸ್ಮ ಬ್ರವಿಃ=ಸರ್ವಥಾ ಹೀಗೆ ಹೇಳಬೇಡ, ಆಯುಷ್ಮನ್= ಹೇ ದೀರ್ಘಾಯುವಂತನೇ, ನಿನ್ನಿಂದ ಅಂಗೀಕೃತವಾದ ಶೂನ್ಯವು, ತತ್ ಅಧಿಷ್ಠಾನಂ= ಆ ಅಧಿಷ್ಠಾನವು, ವಾಸಸ್ಥಾನವಾಗುವದು. ಗುರೋರ್ಗೃಹೇ= ಗುರುಗಳ ಮನೆಯಲ್ಲಿ ವಾಸ ಮಾಡಿ, ಉತ್ಪಿತ್ಸಸ್ವ= ಅಧಿಷ್ಠಾನ ಕಾರಣಗಳ ಸ್ವರೂಪವನ್ನು ತಿಳಿಯಲಿಕ್ಕೆ ಯತ್ನಮಾಡು.

೧. ಯಾವ ಪದಾರ್ಥವು ಭ್ರಮಕ್ಕೆ ಆಶ್ರಯವಾದದ್ದು ಅದೇ ಅಧಿಷ್ಠಾನ, ಶುಕ್ತಿ ರಜತಾರೋಪಕ್ಕೆ ಅಧಿಷ್ಠಾನವೆಂದರೆ ಕಪಚಿಪ್ಪು ನೋಡಿದ ಕೂಡಲೇ ಬೆಳ್ಳಿಯ ಆರೋಪ ವಾಗಿ, ಬೆಳ್ಳಿಯ ಭ್ರಮೆ ಎಂದರೆ ಶುಕ್ತಿಯು (ಕಪಚಿಪ್ಪು) ಅಧಿಷ್ಠಾನವೆಂದು ಕರೆಯಲ್ಪ ಡುವದು ಆರೋಪಿತವಾದ ಬೆಳ್ಳಿಯ ಜ್ಞಾನಕ್ಕೆ ಅಧಿಷ್ಠಾನವಾದ ಶುಕ್ತಿಯು ಕಾರಣ.

ಕಾರಣ=ಕಾರ್ಯಾಪೇಕ್ಷಯಾ ಪೂರ್ವಭಾವಿತ್ವಂ ಕಾರಣತ್ವಂ, ಕಾರ್ಯದ ಪೂರ್ವಭಾವವೆ ಕಾರಣವದು. ಉದಾಹರಣೆ ಘಟದ ಪೂರ್ವಭಾವ ದಂಡ ಮತ್ತು ಮೃತ್ತಿಕಾದಿಗಳು ಕಾರಣವಾಗಿವೆ.

ಭಾವಾರ್ಥ:—ಹಿಂದಿನ ಶ್ಲೋಕದಲ್ಲಿ ನೀನು ಹೇಳಿದಂತೆ ನಿನ್ನ ಪೂರ್ವಪಕ್ಷವಾಗಿ ದ್ದರೆ, ಶೂನ್ಯವು ಪ್ರಪಂಚಕ್ಕೆ ಎಂದಿಗೂ ಸ್ವತಂತ್ರ ಕಾರಣವೆಂದು, ಯಾವ ರೀತಿಯಲ್ಲಿ ಹೇಳಬೇಡ. ಈ ಶೂನ್ಯವು ಅಧಿಷ್ಠಾನವೆಂತ ನಿನ್ನ ಮತದ ತತ್ವವು, ಶೂನ್ಯವು ನಿನ್ನ ಮತ ರೀತ್ಯಾ ಜಗತ್ತಿಗೆ ಕಾರಣವಾಗಲಾರದು. ಹೇ ಆಯುಷ್ಮನ್= ಎಲೈ ಬಹು ಕಾಲ ಬದುಕಿದ ಮುದಿಹದ್ದೇ, ನಿನ್ನ ಮತದ ವಿಚಾರವೇ ನೀನು ತಿಳಿಯಲಿಲ್ಲವೆಂದಮೇಲೆ, ದೀರ್ಘಾಯು ವ್ಯರ್ಥ= ನೀನು ಬಹು ಕಾಲ ಬದುಕಿದ್ದು ನಿರರ್ಥಕವು. ಇನ್ನು ಮುಂದೆ ನೀನು ಪುನಃ ಸಣ್ಣ ಹುಡುಗನಂತೆ ಗುರುಕುಲದಿ= ಗುರುಗಳ ಮನೆಯಲ್ಲಿ ಇರುತ್ತಾ; ಅಧಿಷ್ಠಾನವೆಂದರೇನು ? ಕಾರಣವೆಂದರೇನು ? ಇವುಗಳ ನಿಜಾರ್ಥವನ್ನು ಚನ್ನಾಗಿ ತಿಳಿ ದುಕೊಂಡು, ವ್ಯವಹಾರ ಮಾಡು.

**ಶ್ಲೋಕ ॥ ವಿವಾದಸ್ಯ ಪದಂ ನ ಸ್ಯಾ ।**
**ದಧಿಷ್ಠಾನಮಸತ್ವತಃ ॥**
**ವೈಧರ್ಮ್ಯೇಣೈಷದೃಷ್ಟಾಂತಃ ।**
**ಶುಕ್ತ್ಯಾದಿವದಿತೀರ್ಯತೇ ॥ ೩೧ ॥**

ವಾರ್ಧಿಕ ॥ ಶೂನ್ಯವು ವಿವಾದ ವಿಷಯೀಭೂತವಾದದ್ದು ।
ಶೂನ್ಯಕೆ ಅಧಿಷ್ಠಾನ ಸಹ ಕೂಡ್ದಸತ್ತಾದ ।
ಚುನ್ನ ಕಾರಣದಿ ವೈಧರ್ಮ್ಯ ಸಾಧ್ಯಭಾವ
ಸಾಧನಾ ಭಾವದುಪಮೇ ॥

ನನ್ನಿ ರಜತಾರೋಪ ಸತ್ಯಭೂತದ ಶುಕ್ತಿ।
ಇನ್ನು ಇರೆ ಜಗದ ಆರೋಪಕೆ ಅಧಿಷ್ಠಾನ ।
ಶೂನ್ಯವದು ಇಲ್ಲದಿರುವದು ಹೇಗೆ ಆಗುವುದು
ಎಂತವನ ಖಂಡಿಸಿದರು ॥ ೩೧ ॥ ೮೪೦ ॥

ಪೂರ್ವ ಶ್ಲೋಕದಲ್ಲಿ ಶೂನ್ಯವು ಜಗದಾರೋಪಕ್ಕೆ ಅಧಿಷ್ಠಾನವಾಗುತ್ತದೆಂಬ, ಶೂನ್ಯವಾದಿಗಳು ಹೇಳುವದು ಅನುಮಾನ ವಿರುದ್ಧವೆಂದು ಆ ಶೂನ್ಯಕ್ಕೆ ಅಧಿಷ್ಠಾನತ್ವವು ಸಹ ಕೂಡುವದಿಲ್ಲವೆಂದು ವಿವರಿಸಿ ಹೇಳುತ್ತಾರೆ

ಅನ್ವಯ:— ವಿವಾದಸ್ಯ, ಪದಂ, ಅಧಿಷ್ಠಾನಂ, ನಸ್ಯಾತ್, (ಕುತಃ) ಅಸತ್ವತಃ, ವೈಧರ್ಮ್ಯೇಣ, ಏಷ, ದೃಷ್ಟಾಂತಃ, ಶುಕ್ತ್ಯಾದಿ, ವತ್, ಇತಿ ಈರ್ಯತೇ, ॥

ಅರ್ಥ:— ವಿವಾದಸ್ಯ ಪದಂ= ವಿವಾದ ವಿಷಯುವಾದ ಶೂನ್ಯವು, ಅಧಿಷ್ಠಾನಂ ನಸ್ಯಾತ್ =ಭ್ರಾಂತಿಗೆ ಆಶ್ರಯುವಾಗಲಾರದು. ಕುತಃ= ಯಾಕಂದರೆ, ಅಸತ್ವತಃ= ಅಸತು (ಇಲ್ಲದ್ದು) ಆದ್ದರಿಂದ, ವೈಧರ್ಮ್ಯೇಣ =ಸಾಧ್ಯಾಭಾವೇ ಸಾಧನಾಭಾವಃ ವ್ಯತಿರೇಕ ದಿಂದ, ಏಷದೃಷ್ಟಾಂತ= ಈ ಉದಾಹರಣವು, ಶುಕ್ತ್ಯಾದಿವತ್= ದೃಷ್ಟಾಂತರೂಪವಾದ ಶುಕ್ತಿಯೇ ಮೊದಲಾದ ಪದಾರ್ಥವು ಎಂದು ಇತಿ ಈರ್ಯತೇ ಹೀಗೆ ಹೇಳಲ್ಪಡುತ್ತದೆ.

ಭಾವಾರ್ಥ:— ಶೂನ್ಯವು ಜಗತ್ತಿಗೆ ಅಧಿಷ್ಠಾನ ಹೌದೋ, ಅಲ್ಲೋ ಎಂಬ ಈ ವಿವಾದಾಸ್ಪದವಾದ ಶೂನ್ಯವು, ಅಸತ್ತಾದ =ಅತ್ಯಂತವಾಗಿ ಇಲ್ಲದೆ ಇದ್ದದು, ಚುನ್ನ= ತಪ್ಪು ತಿಳುವಳಿಕೆಯ ಕಾರಣದಿಂದ, ಅಧಿಷ್ಠಾನವು ಸಹ ಆಗುವದಿಲ್ಲ; ಏಕಂದರೆ ಇದಕ್ಕೊಂದು ವೈಧರ್ಮ್ಯ =ವ್ಯತಿರೇಕ ದೃಷ್ಟಾಂತವೇನಂದರೆ, ಕಪಚಿಪ್ಪು ರಜತ ಮೊದ ಲಾದ ಭ್ರಾಂತಿಜ್ಞಾನಕ್ಕೆ ವಿಷಯುವಾದ, ವಸ್ತುಗಳೇ ಆಗಿರುತ್ತವೆ. ನನ್ನಿ= ಸತ್ಯವಾದ, ಕಪಚಿಪ್ಪೆಯನ್ನು ಕಂಡು, ಬೆಳ್ಳಿಯುಂಬ ಭ್ರಾಂತಿಜ್ಞಾನವು ಬರುತ್ತದೆ. ಅಲ್ಲಿ ಬೆಳ್ಳಿಯೆಂಬ ಭ್ರಮಿಗೆ, ವಿಷಯುವಾದ ಕಪಚಿಪ್ಪು, ಸತ್=ಇದ್ದುದೇ ಸತ್ಯವಾದದ್ದೇ ಆಗಿರುತ್ತದೆ. ಹೀಗೆ ಆರೋಪವಾದ ಭ್ರಮಜ್ಞಾನಕ್ಕಾದರೂ, ಅಧಿಷ್ಠಾನವು ಸತ್ಯವಾದದ್ದು ಇದ್ದುದೇ ಆಗರ ಬೇಕು, ಇಲ್ಲಿ ಪ್ರಪಂಚ ಆರೋಪಕ್ಕೆ ಅಧಿಷ್ಠಾನವೆಂದು ನೀನು ಹೇಳುವ ಶೂನ್ಯವು ಅಸತ್= ಇಲ್ಲದೇ ಇದ್ದುದು ಅಧಿಷ್ಠಾನವಾಗಲಾರದೆಂದು ಆ ಶೂನ್ಯವಾದಿಯ ಮತವನ್ನು ಖಂಡಿಸಿದರು.

ಶ್ಲೋಕ ॥ ಅತತ್ವಾವೇದಕಂ ಮಾನ ।
ಮಿತಿ ಸ್ವವ್ಯಾಹತಂ ಯತಃ ॥
ತದ್ವಾದೀ ತೇನ ವೇದಸ್ಯ ।
ಸೋಽಭಿಪ್ರೇತ್ಯ ಪ್ರಮಾಣತಾಮ್ ॥ ೩೨ ॥

ವಾರ್ಧಿಕ ॥ ಚನ್ನ ಪರತತ್ವ ವಿವೃತತ್ವಾತ್ ಪ್ರಮೆಯದಲಿ ।
ಖಿನ್ನ ಶೂನ್ಯನು ಮಾಯಿಗಳಿಘೇಗೆ ಭೇದಿಲ್ಲ ।
ವೆನ್ನೆ ಶೂನ್ಯನು ವೇವವಪ್ರಮಾಣ ಸಾಧಿಸುವ
ಮಾಯವಾದಿಯು ಪ್ರಮಾಣೇಂ ॥
ದೆನ್ನೆ ಪೇಳುತ್ತ ಆಯತಾರ್ಥವು ಅತತ್ವಾತ್ ।
ಎನ್ನುವನು ಅವನ ವಾಕ್ಯಕ್ಕೆ ಸ್ವವ್ಯಾಹತಿಯು ।
ಯನ್ನೊ ದೋಷವ ಬರುವದಧಿಕ ಬಾಷಿಸುವ ನಿಜ
ಉಭಯ ಮತದಲಿ ಸಾಮ್ಯವು ॥ ೩೨ ॥ ೮೪೧ ॥

ಮಾಯಾವಾದಿಗಳ ಮತ ನಿರಾಕರಣ--

"ಪರತತ್ವ ವಿವೃತತ್ವಾತ್" ಎಂಬ ೨೬ನೇ ಶ್ಲೋಕದಲ್ಲಿ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಪರಸ್ಪರ ಪ್ರಮೇಯಗಳಲ್ಲಿ ಭೇದವಿಲ್ಲೆಂತ ಸಿದ್ಧಾಂತಿಗಳು ನಿರಾಕರಿಸಿದ್ದರೂ ಕೂಡಾ, ಅದು ಕೂಡುವದಿಲ್ಲ. ಏಕಂದರೆ, ಶೂನ್ಯವಾದಿಗಳು ವೇದ ಪ್ರಾಮಾಣ್ಯವನ್ನು ಅಂಗೀಕರಿಸುವದಿಲ್ಲ. ಮಾಯಾವಾದಿಗಳು ವೇದಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸುತ್ತಾರೆ. ಆ ಕಾರಣ ಇವರಿಗೆ ಪರಸ್ಪರ ಭೇಧವಿದ್ದುರಿಂದ ಸಾಮ್ಯವು ಕೂಡುವುದಿಲ್ಲವೆಂತ ಶಂಕಿಸಿ, ಆ ಮಾಯಾವಾದಿರೀತ್ಯಾ ವೇದ ಪ್ರಾಮಾಣ್ಯವು ಯೋಗ್ಯವಲ್ಲವೆಂದು ಹೇಳುತ್ತಾರೆ.

ಅನ್ವಯಃ— ಯತಃ ಅತತ್ವಾ ವೇದಕಂ, ಮಾನಂ, ಇತಿ, ಸ್ವವ್ಯಾಹತಂ, ತದ್ವಾದೀ, ತೇನ, ವೇದಸ್ಯ, ಅಪ್ರಮಾಣತಾಂ, ಸಃ, ಅಭಿಪ್ರೇತಿ.

ಅರ್ಥ:— ಯತ್= ಯಾವ ಕಾರಣದ್ದೆಶೆಯಿಂದಾ, ಅತತ್ವಾವೇದಕಂ= ತತ್ವವನ್ನು ತಿಳಿಸಲಾರದೇ ಇದ್ದದ್ದು, ಮಾನಂ= ಪ್ರಮಾಣವೆಂದು ಹೇಳುವದು, ಸ್ವವ್ಯಾಹತಂ= ತನ್ನ ವಿರುದ್ಧವಾಗಿ ತಾನೇ ಹೇಳತಕ್ಕದ್ದು. ತದ್ವಾದೀ= ಆ ವೇದಕ್ಕೆ ಅತತ್ವಾವೇದಕವನ್ನು ಹೇಳತಕ್ಕ, ಸಃ= ಆ ಮಾಯಾವಾದಿಯು, ತೇನ= ಸ್ವವ್ಯಾಹತವಾಗಿ ಹೇಳೋಣದರಿಂದ, ವೇದಸ್ಯ= ವೇದಕ್ಕೆ, ಅಪ್ರಮಾಣತಾಂ= ಅಪ್ರಮಾಣ್ಯವನ್ನು, ಅಭಿಪ್ರೇತಿ= ಅಂಗೀಕರಿಸುತ್ತಾನೆ.

ಭಾವಾರ್ಥ:— ಶೂನ್ಯವಾದಿಗಳಾದ ಮಾಧ್ಯಮಿಕ ಬೌದ್ಧರು ಲೋಕಾಯತನರಾದ ಚಾರ್ವಾಕರಂತೇ, ಪ್ರತ್ಯಕ್ಷ ಪ್ರಮಾಣ ಒಂದನ್ನಂಗೀಕರಿಸದೇ ಜಗತ್ತಿಗೆ ಕ್ಷಣಿಕತ್ವದ್ವಾರಾ ಶೂನ್ಯತ್ವವನ್ನು ಸಾಧಿಸಲು, ಅನುಮಾನವನ್ನು ಸಹ ಪ್ರಮಾಣವೆಂದು ಒಪ್ಪಿಕೊಂಡರು. ವೇದವನ್ನು ಪ್ರಮಾಣವನ್ನಾಗಿ ಅಂಗೀಕರಿಸದೇ ವೇದಕ್ಕೆ ಅಪ್ರಾಮಾಣ್ಯವನ್ನು

ಸಾಧಿಸಿದ್ದಾರೆ. ಆದರೆ ಮಾಯಾವಾದಿಗಳು ವೇದವನ್ನು ಪ್ರಮಾಣವೆಂತ ಅಂಗೀಕರಿಸುತ್ತಾರೆ. ಕಾರಣ ಉಭಯ ಮತವು ಒಂದೇ ಎಂದು ಹೇಳುವದು ಸರಿಯಲ್ಲವೆಂದು ಮಾಯಾವಾದಿಗಳ ಪೂರ್ವಪಕ್ಷವು ವಿವೇಚನ ಮಾಡುವದಾಗಿದೆ. ದ್ವೈತಭಾಷ್ಯಟೀಕಾಕಾರರು ಮಾಯಾವಾದ ಮತ ತತ್ವಗಳು ಶೂನ್ಯವಾದ ಮತದ ತತ್ವಗಳು ಒಂದಕ್ಕೊಂದು ಹೋಲುತ್ತವೆಂದು ಪೇಳಿದ ಕಾರಣ ಪ್ರಚ್ಛನ್ನ ಬೌದ್ಧಮತವೆಂದು ಇತರರು ಮಾಡುವ ಆಕ್ಷೇಪ ಯುಕ್ತವಾಗಿದೆ.

ಮಾಯಾವಾದಿಗಳು, ವೇದಕ್ಕೆ ಅತತ್ವಾವೇದಕವೆಂದರೆ ಅಯಥಾರ್ಥವಾದ ಧರ್ಮವನ್ನು ಬೋಧನ ಮಾಡೋಣವು ಅಪ್ರಮಾಣ್ಯವೆಂದಾದರೂ ಹೀಗೆಯೇ ಇರುವದು. ಈ ರೀತಿ ವೇದಕ್ಕೆ ಅತತ್ವಾವೇದಕತ್ವವನ್ನು ಹೇಳಿ. (ಅಪ್ರಮಾಣ್ಯವನ್ನು ಹೇಳಿ) ಪುನಹಾ ಪ್ರಮಾಣವೆಂದು ಹೇಳಿದರೆ, ಸ್ವವಿರುದ್ಧವಾಗಿ ಹೇಳತಕ್ಕವನ ಮಾತಿನಂತೇ ಆಗುವದು. ಇಂಥ ಸ್ವವ್ಯಾಹತಭಾಷಣ ಮಾಡತಕ್ಕ ಮಾಯಾವಾದಿಯ, ವೇದಪ್ರಾಮಾಣ್ಯವಚನವು ಜನರ ವಂಚಿಸುವ ಸಲುವಾಗಿಯೇ ಇರುವದು. ಕಾರಣ ಆ ಶೂನ್ಯವಾದಿ ಮಾಯಾವಾದಿಗಳಿಗೆ ಯಾವ ಭೇದವೂ ಇರುವದಿಲ್ಲೆಂದು ಅಭಿಪ್ರಾಯವು. ಶೂನ್ಯವಾದಿಯಕಿಂತಲೂ ಹೆಚ್ಚಿಗೆ ಮಾತಾಡುವನೇ ಹೊರತಾಗಿ ಆ ಉಭಯರು ಸಮಾನರು. ಸ್ವವ್ಯಾಹತಿ ವಾಕ್ಯ= ಅಹಂ ವಂಧ್ಯಾಪುತ್ರ= ನಾನು ಬಂಜೆಯ ಮಗ, ತಾಯಿಯು ಬಂಜೆಯಾಗಿದ್ದರೆ ನೀನು ಹೇಗೆ ಹುಟ್ಟಿದಿ? ನಿನ್ನ ತಾಯಿ ಬಂಜೆ ಎನ್ನುವದು ನಿನ್ನ ಮಾತಿನ ವಿರುದ್ಧವಲ್ಲವೆ?

ಯಾವಜ್ಜೀವಮಹಂ ಮೂಕಃ= ನಾನು ಬದುಕಿರುವ ವರೆಗೆ, ಮಾತಾಡದ ಮೂಕನೆಂಬುವನ ಮಾತುಗಳು ಸ್ವವ್ಯಾಹತಿಯು.

**ಶ್ಲೋಕ ||** **ಯಂ ತತ್ವಾವೇದಕಂ ವೇದ ।**
**ವೇದಾಂಶಂ (ತಂ) ವೇದದೂಷಕಃ ||**
**ತತ್ವಸ್ಯಾವರ್ಣನೀಯತ್ವಾತ್ ।**
**ಸ ತತ್ವಾವೇದಕಃ ಕಥಮ್ || ೩೩ ||**

ವಾರ್ಧಿಕ || ವೇದವಂ ಮಂತ್ರಬ್ರಾಹ್ಮಣ ಉಪನಿಷದ್ವಿವಿಧ ।
ವಾದುದಂ ಮಂತ್ರಬ್ರಾಹ್ಮಣ ಮಿಥ್ಯ ಭೂತಜಗ ||
ಬೋಧಿಪದಕಯಥಾರ್ಥಉಪನಿಷತ್ಪರಬ್ರಹ್ಮ
ಪ್ರತಿಪಾದಕನೆನೆ ಕೂಡ್ವೆಲೊ ||

ವೇದದೂಷಕ ಮಾಯಿ ಉಪನಿಷತಿಗಂ ತತ್ವ |
ವೇದಕಂ ತಿಳಿದು ಬ್ರಹ್ಮನವಾಚ್ಯನೆಂದೊಪ್ಪಿ ॥
ವೋದ ಪರಬ್ರಹ್ಮನಂ ಉಪನಿಷತ್ತೇಳ್ವದೆನೆ
ಮಹ ವಿರೋಧವು ನಿನಗಿದು ॥ ೩೩ ॥ ೮೪೨ ॥

ಶೂನ್ಯವಾದಿಗಳು, ವೇದವನ್ನೆ ಒಪ್ಪುವದಿಲ್ಲ. ಮಾಯಾವಾದಿಗಳು ವೇದವನ್ನು ಪ್ರಮಾಣವೆಂದೊಪ್ಪಿ, ಮಂತ್ರಬ್ರಾಹ್ಮಣರೂಪ ವೇದವು, ಮಿಥ್ಯಾಭೂತವಾದ ಜಗತ್ತನ್ನು ಭೋಧಿಸುವದರಿಂದ ಅತತ್ವಾ ವೇದಕವು, ಉಪನಿಷತ್ತೆಂಬ ವೇದಭಾಗವು ಪರತತ್ವನಾದ ಪರಬ್ರಹ್ಮನನ್ನು ಬೋಧಿಸುತ್ತದೆ, ಕಾರಣ ತತ್ವಾವೇದಕ ಪ್ರಮಾಣವೆಂದಂಗಿಕರಿಸಿದರೂ ಇದು ಸರಿಯಲ್ಲವೆಂದು ಖಂಡಿಸುತ್ತಾರೆ.

ಅನ್ವಯ:— ವೇದದೂಷಕಃ, ಯಂ, ವೇದಾಂತಂ, ತತ್ವಾವೇದಕಂ, ವೇದ, ತತ್ವಸ್ಯ, ಅವರಣನೀಯತ್ವಾತ್, ಸಃ, ಕಥಂ, ತತ್ವಾವೇದಕಃ ||

ಅರ್ಥ:— ವೇದದೂಷಕಃ =ಮೇಲೆ ಹೇಳಿದ ಪ್ರಕಾರ ವೇದಗಳಿಗೆ ಅಪ್ರಮಾಣ್ಯವನ್ನು ಹೇಳುವ ಮಾಯಾವಾದಿಯು, ಯಂ ವೇದಾಂತಂ= ಯಾವ ಉಪನಿಷದ್ಭಾಗ ವೇದವನ್ನು, ತತ್ವಾವೇದಕಂ= ಪರಮಾರ್ಥ ಭೂತಬ್ರಹ್ಮನೆಂಬುವ ತತ್ವವನ್ನು ಪ್ರತಿಪಾದಿಸುತ್ತದೆಂದು, ವೇದ= ತಿಳಿಯುತ್ತಾನೆ ತತ್ವಸ್ಯ =ಪರಮಾರ್ಥ ತತ್ವನಾದ ಬ್ರಹ್ಮನಿಗೆ, ಅವರಣನೀಯತ್ವಾತ್= ವಾಚ್ಯನೆಂದು ವರ್ಣಿಸಲಶಕ್ಯವೆಂಬ ಕಾರಣ, ಸಃಕಥಂ= ಆ ವೇದಾಂತವು ಹೇಗೆ, ತತ್ವಾವೇದಕಃ= ತತ್ವವನ್ನು ತಿಳಿಸುವದಾಗುವದು?

ಭಾವಾರ್ಥ:— ವೇದಗಳಿಗೆ ನಿಜಾರ್ಥವನ್ನು ಮಾಡದೇ ವೇದಗಳನ್ನೇ ಕೆಡಿಸುವ ಮಾಯಾವಾದಿಯು, ಯಾವ ಉಪನಿಷತ್ತೆಂಬ ವೇದಭಾಗವನ್ನು ಸತ್ಯವಾದ ಬ್ರಹ್ಮನನ್ನು ಹೇಳುತ್ತದೆಂದು ತತ್ವಾವೇದಕವೆಂದು ತಿಳಿದು, ಆ ಪರಬ್ರಹ್ಮಾಖ್ಯ ತತ್ವವು ಅವಾಚ್ಯ ಹೇಳಲಿಕ್ಕೆ ಬಾರದೆಂದು ಹೇಳುವ ಮಾಯಾವಾದಿಯ ವೇದಾಂತವು ಪಾರಮಾರ್ಥಿಕ ಪರಬ್ರಹ್ಮನನ್ನು ಹೇಗೆ ಪ್ರತಿಪಾದಿಸುತ್ತದೆ. ಆ ಪರಬ್ರಹ್ಮನು ಅವಾಚ್ಯನೆಂದು ಒಪ್ಪಿ ಹೀಗೆ ಹೇಳಲಿಕ್ಕೆ ಬಾರದ ಪರಬ್ರಹ್ಮನನ್ನು, ಉಪನಿಷತ್ತುಗಳು ಪ್ರತಿಪಾದಿಸುತ್ತವೆಂಬುವದು ಪರಸ್ಪರ ವಿರುದ್ಧವು. ಬ್ರಹ್ಮ ಅವಾಚ್ಯನೆಂದು ಹೇಳುವದರಿಂದ, ಉಪನಿಷದ್ಭಾಗಕ್ಕೆ ವಿಷಯವಿಲ್ಲದ ಪ್ರಯುಕ್ತ ಅ ಪ್ರಮಾಣವು ಅಂಗೀಕರಿಸಲ್ಪಟ್ಟದ್ದಾಯಿತು. ಅಲ್ಲದೇ ಮಂತ್ರ ಬ್ರಾಹ್ಮಣ ವೇದಕ್ಕೆ ಸಹ ಮಾಯಿಯು, ಅತತ್ವಾವೇದಕವೆಂದು ತಾನೆ ಅಂಗಿಕರಿಸಿದ್ದಾನೆ. ಮಾಯಿಯು ಹೀಗೆ ಎರಡೂ ವೇದಭಾಗಗಳಿಗೂ ಅಪ್ರಮಾಣ್ಯ ಹೇಳಿದಂತಾಯಿತು.

ಶ್ಲೋಕ ॥ ಲಕ್ಷಣಾಭಿಃ ಪ್ರವರ್ತಂತೇ |
ವ್ಯಾಕ್ಯಾನಿ ತಿಸೃಭಿರ್ಯದಿ ||
ವಿಷಯತ್ವಂ ಲಕ್ಷಣಾನಾಂ ।
ತಸ್ಯೈವಾನಿಷ್ಟಮಾಗತಮ್ || ೩೪ ||

ವಾರ್ಧಿಕ ॥ ವೇದ ಸಾಕ್ಷಾತು ಬ್ರಹ್ಮನ ಪೇಳದಿರೆ ಲಕ್ಷ।
ಣಾದುದಂ ವೃತ್ತಿ ಜಹದಜಹಲ್ಲಕ್ಷಣ ಜ।
ಹಾದಜಹಲಕ್ಷಣ ತ್ರಿ ಲಕ್ಷಣವು ಬಹ್ಮನಲಿ ಪ್ರವರ್ತಿಸುವವೆನೆನೀಂ ॥
ಮೋದ ಬ್ರಹ್ಮಗೆ ಅವಾಚ್ಯಪ್ರ ಮೇಯತ್ವೆಲ್ಲ |
ವಾದ ಧರ್ಮವುರಹಿತ ನೆಂದಂಗಿಕರಿಸಿರೆ ಅ |
ಗಾಧೀಗ ಬ್ರಹ್ಮನಿಗೆ ಲಕ್ಷಣಂ ವಿಷಯತ್ವ ಪೇಳುವ
ದನಿಷ್ಟ ಪ್ರಾಪ್ತ ॥ ೩೪ ॥ ೮೪೩ ॥

ವೇದವು ಸಾಕ್ಷಾತು ಬ್ರಹ್ಮವಾಚಕವಾಗದಿದ್ದರೂ, ಲಕ್ಷಣಾವೃತ್ತಿಯಿಂದ, ಬ್ರಹ್ಮ ನಲ್ಲಿ ವೇದವು ಪ್ರವರ್ತಿಸುತ್ತಿದ್ದ ಕಾರಣ, ಲಕ್ಷಣೆಯಿಂದ ಬ್ರಹ್ಮನು ವಿಷಯವಾಗುತ್ತಾನೆ. ಹೀಗಿರಲು ಏಕೇ ವೇದವು ತತ್ವಾವೇದಕವಲ್ಲವೆಂತ, ಮಾಯಾವಾದಿಯ ಪೂರ್ವ ಪಕ್ಷ ವನ್ನು ಪರಿಹರಿಸುತ್ತಾರೆ.

ಅನ್ವಯ:— ವಾಕ್ಯಾನಿ, ಯದಿ, ತಿಸೃಭಿಃ ಲಕ್ಷಣಾಭಿಃ ಪ್ರವರ್ತಂತೇ, ತರ್ಹಿ, ತಸ್ಯ, ಏವ, ಲಕ್ಷಣಾನಾಂ, ವಿಷಯತ್ವಂ, ಆಗತಂ, ಅನಿಷ್ಟಂ,

ಅರ್ಥ:— ವಾಕ್ಯಾನಿ= ವೇದವಾಕ್ಯಗಳು, ಯದಿ =ಯಾವಾಗ್ಯೆ, ತ್ರಿಸೃಭಿಃ ಲಕ್ಷ ಣಾಭಿಃ =ಜಹಲ್ಲಕ್ಷಣ ಅಜಹಲ್ಲಕ್ಷಣ, ಜಹಾದಜಹಲ್ಲಕ್ಷಣವೆಂಬ, ಮೂರು ಲಕ್ಷಣಗಳಿಂದ, ಬ್ರಹ್ಮಣೀ ಪ್ರವರ್ತಂತೇ= ಬ್ರಹ್ಮನಲ್ಲಿರುವವೋ, ತರ್ಹಿ =ಆಗ್ಯೆ, ತಸ್ಯೇವ= ಅವಾ ಚ್ಯತ್ವ ಅಪ್ರಮೇಯತ್ವಾದಿ, ಸಕಲ ಲಕ್ಷಣಗಳು ಇಲ್ಲವೆಂದು ಅಂಗೀಕಾರ ಮಾಡಲ್ಪಟ್ಟ ಇದೇ ಬ್ರಹ್ಮನಿಗೆ ಲಕ್ಷಣಾನಾಂ ತಿಸೃಣಾಂ= ಈ ಮೂರ ಲಕ್ಷಣಗಳ, ವಿಷಯತ್ವಂ= ವಿಶೇಷಣತ್ವವು, ಆಗತಂ =ಅಂಗಿಕರಿಸಲೇಬೇಕಾದಿತು. ಅನಿಷ್ಟಂ = ಇದು ನಿನಗೆ ಅಪ ಸಿದ್ಧಾಂತ ತ್ವದಿಂದ ಅನುಚಿತವು.

ಭಾವಾರ್ಥ:— ವೇದಗಳು ಸಾಕ್ಷಿತ್ತಾಗಿ ಪರಬ್ರಹ್ಮನನ್ನು ಹೇಳದಿದ್ದರೂ, ಆ ವೇದ ವಾಕ್ಯಗಳು, ಜಹಲ್ಲಕ್ಷಣ, ಅಜಹಲ್ಲಕ್ಷಣ, ಜಹಾದ ಜಹಲ್ಲಕ್ಷಣ, ವೆಂಬ ಮೂರು ಲಕ್ಷ ಣಗಳಿಂದಾದರೂ ಪರಬ್ರಹ್ಮನನ್ನು ಪ್ರತಿಪಾದಿಸುತ್ತವೆಂದರೆ, ಹೀಗೆ ಲಕ್ಷಣಾ ವಿಷಯತ್ವ

ರೂಪಧರ್ಮವನ್ನೊಪ್ಪಿದಂತಾಯಿತು. ಮಾಯಾವಾದಿಯಾದ ನಿನಗೆ ಇದು ಸರ್ವಥಾ ಕೂಡುವದಿಲ್ಲ. ಏಕಂದರೆ ಮೊದಲಿಗೇವೆ ನೀನು ಮೋದ= ಆನಂದವುಳ್ಳ ಬ್ರಹ್ಮನು ಅವಾಚ್ಯನು ಹೀಗೆಂದು ಹೇಳಲಿಕ್ಕೆ ಬಾರದವನು, ಅಪ್ರಮೇಯನೂ, ತಿಳಿಯಲಿಕ್ಕೆ ಬಾರದವನೂ ಎಲ್ಲ ಧರ್ಮಗಳಿಲ್ಲದವನೆಂದೊಪ್ಪಿ, ಈಗ ನೀನು ಆ ಮೂರು ಲಕ್ಷಣಾವೃತ್ತಿಗಳಿಗೆ ವಿಷಯತ್ವನಾಗುವನೆಂಬುವದರಿಂದ, ಆ ಪರಬ್ರಹ್ಮನಲ್ಲಿ ಲಕ್ಷಣತ್ವವೂ ತಿಳಿಯಲ್ಪಡುವ ಕಾರಣ, ಪ್ರಮೇಯತ್ವವೂ ಧರ್ಮವಿಶಿಷ್ಟತ್ವವೂ ಹೇಳುವದು ಆಶ್ಚರ್ಯವಲ್ಲವೇ ? ಹೀಗೆ ಬಲತ್ಕಾರದಿಂದ ಮಾಯಾವಾದಿಗೆ ಬ್ರಹ್ಮನಿಗೆ ಲಕ್ಷಣಾ ವಿಷಯತ್ವವಾದರೂ, ಅಂಗಿಕಾರ ಮಾಡುವದು ಬಂದಿತು. ಹೀಗೆ ಲಕ್ಷಣಾವೃತ್ತಿ ಹೇಳುವದು ಬಹು **ಅನುಚಿತ, ಅನಿಷ್ಟಂ**=.ನಿನಗೆ ಇದು ಅಪಸಿದ್ಧಾಂತವಾದ ಕಾರಣ ಬ್ರಹ್ಮನಿಗೆ ಲಕ್ಷಣಾವಿಷಯತ್ವವಾದರೂ ಅಸಂಭವವಾದುದರಿಂದ ಅವಿಷಯತ್ವ ಇರುವದರಿಂದ ವೇದಕ್ಕೆ **ಅಪ್ರಾಮಾಣ್ಯ**ವೇ ಹೇಳಿದಂತಾಯಿತು. **ವೃತ್ತಿ** =ಶಕ್ತಿ, ಸ್ವಾಭಾವಿಕವಾಗಿ ಅರ್ಥ ಹೇಳುವದು. ವಾಚ್ಯವೃತ್ತಿ **ಲಕ್ಷಣ**= ಲಾಕ್ಷಣಿಕ, (ಅದರ ಗುರುತಿನ) ಅರ್ಥ ಹೇಳುವದು.

೧. ಶಕ್ಯವಾದ ಅರ್ಥಕ್ಕೆ, ಸಾಕ್ಷಾತ್ತಾದ ಸಮ್ಬಂಧವಿರಲು, ಆ ಸಮ್ಬಂಧಕ್ಕೆ ಕೇವಲ ಲಕ್ಷಣಾವೃತ್ತಿ= ಉದಾಹರಣೆ "ಗಂಗಾಯಾಂ ಘೋಷ= ಗಂಗೆಯಲ್ಲಿ ಗ್ರಾಮವಿದೆ ಎಂದರೆ ಗಂಗಾಪ್ರವಾಹದಿಂದ ಸಾಕ್ಷಾತ್ತಾದ ಸಮ್ಬಂಧವಿರುವ ತೀರವು ಅರ್ಥ, ಅಂದರೆ ಗಂಗೆಯ ತೀರದಲ್ಲಿ ಗ್ರಾಮುವಿದೆ, ಗಂಗಾಯಾಂ ಘೋಷ ಇದು. **ಜಹಲ್ಲಕ್ಷಣಾ.** 'ವಿಷವನ್ನುತಿನ್ನು' ಎಂದು ಹಿರಿಯನುಬೋಧಿಸುವಲ್ಲಿ ವಿಷಪ್ರಾಯವಾದ ಶತ್ರುಗಳ ಮನೆಯಲ್ಲಿ ಭೋಜನ ಮಾಡಬೇಡ, "ಯತೋವಾ ಇಮಾನಿ ಭೂತಾನಿ ಜಾಯಂತ, ಇತ್ಯಾದಿ ಜಹಲ್ಲಕ್ಷಣಾ."

೨. ಲಕ್ಷಣಾವೃತ್ತಿಯಿಂದ ಬೋಧಿತವಾದ ಅರ್ಥವು ಶಕ್ಯವಾದ ಅರ್ಥದಿಂದ ಪರಂಪರೆಯಿಂದ ಸಮ್ಬಂಧವಾಗಿದ್ದರೆ (ಶಕ್ಯಾರ್ಥವನ್ನೊಳಗೊಂಡಿರಲು, 'ಅಜಹಲ್ಲಕ್ಷಣಾವೃತ್ತಿ' ಎನಿಸುವದು. ಉದಾ, ದಧಿಕಾಕೇಭ್ಯೋ ರಕ್ಷಂತ, ಅಥವಾ 'ಘಟವು ಶುಕ್ಲ' ಎಂಬ ವಾಕ್ಯದಲ್ಲಿ ಶುಕ್ಲವೆಂಬ ಶಬ್ದಕ್ಕೆ ಶುಕ್ಲವರ್ಣವು ಶಕ್ಯಾರ್ಥ ಆದರೂ ಈ ಶಬ್ದವು ಲಕ್ಷಣಾವೃತ್ತಿಯಿಂದ ಶುಕ್ಲವರ್ಣದಿಂದ ಸಹಿತವಾದ 'ಘಟ'ವೆಂಬ ದ್ರವ್ಯವನ್ನು ಬೋಧಿಸುವದು. ಹೀಗೆ ಲಕ್ಷ್ಯಾರ್ಥದಲ್ಲಿ ಶಕ್ಯಾರ್ಥವು ಅಡಗಿರುವದರಿಂದ ಇದು 'ಅಜಹಲ್ಲಕ್ಷಣಾ **ವೃತ್ತಿ,** **ಎನಿಸುವದು.** 'ಸತ್ಯಂಜ್ಞಾನಮನಂತಂ ಬ್ರಹ್ಮ' ಇತ್ಯಾದೀನ್ಯ ಜಹಲ್ಲಕ್ಷಣಾ"

೩. ಲಕ್ಷಣಾ ವೃತ್ತಿಯಿಂದ ಬೋಧಿತವಾಗುವ ಅರ್ಥವು ಶಕ್ಯಾರ್ಥದ ಏಕದೇಶವಾಗಿರುವ ಕಲ್ಪದಲ್ಲಿ ಆ ಲಕ್ಷಣಾವೃತ್ತಿಯು, **ಜಹದ ಜಹಲ್ಲಕ್ಷಣಾವೃತ್ತಿ** ಎನಿಸುವದು. ಉದಾ:— ಇವನು ಅದೇ ದೇವದತ್ತನು. ಅಥವಾ ದೇವದತ್ತನು ಸಿಂಹನು, ಈ ಎರಡರಲ್ಲಿ ಶಕ್ಯಾರ್ಥದ ಏಕದೇಶವಾಗಿರುವ ಕಲ್ಪವಾಗಿದೆ. ಛತ್ರಿಣೋಗಚ್ಛಂತಿ, ಇತ್ಯಾದಿ ಉದಾಹರಣೆ.

"ತತ್ವಮಸೀತ್ಯಾದಿನಾ" ಜಹದಜಹಲ್ಲಕ್ಷಣವು ಪರಬ್ರಹ್ಮನಲ್ಲಿ ಮೂರು ಲಕ್ಷಣಗಳು ಹೇಳುವರು ವಿಶೇಷಬಲ್ಲವರಿಂದ ತಿಳಿಯುವದು.

**ಶ್ಲೋಕ ||** **ಕಿಂಚಾಖಂಡೇsತ್ರ ವಾಕ್ಯಾನಿ |**
**ಕಿಂಚಿದ್ವಿದಧತೇ ನಹಿ ||**
**ತಾನ್ಯಭ್ಯಧುರಭಾವಂಚೇ |**
**ಜಾಡ್ಯಾದೇಸ್ತನ್ನ ಶೋಭತೇ || ೩೫ ||**

ವಾರ್ಧಿಕ || ಮತ್ತು ನಿನ ನಿರ್ವಿಶೇಷದ ಪರಬ್ರಹ್ಮನಲಿ |
ಇತ್ಯಾದಿ ಶ್ರುತಿಯು ಸತ್ಯಂ ಜ್ಞಾನ ಮಾನಂತ್ಯ|
ಸತ್ಯತ್ವ ಜ್ಞಾತೃತ್ವಾನಂತತ್ವ ಸವೀಶೇಷಧರ್ಮ ಜವ ಪೇಳವಷ್ಟೆ||
ವ್ಯರ್ಥವೆನೊ ಲಕ್ಷಣಾಂಗೀಕಾರ ವೆನಲವಂ |
ಸತ್ಯಾದಿ ಭಾವಧರ್ಮವು ಪೇಳದಿದ್ದರು ಅ |
ಸತ್ಯವು ಅಭಾವ ಬೋಧಕವೆನೇಂ ಶೋಭಿಸದು
ಬ್ರಹ್ಮನಲಿ ಜಡವಸತ್ಯ || ೩೫ || ೮೪೪ ||

ಲಕ್ಷಣಾ ವೃತ್ತಿಯನ್ನು ಅಂಗೀಕಾರ ಮಾಡುವದು, ಮಾಯಾವಾದಿಗೆ ಸರಿಯಲ್ಲ ವೆಂದು ದೂಷಣಾಂತರವನ್ನು ಹೇಳುತ್ತಾರೆ.

ಅನ್ವಯ:— ಕಿಂಚ, ವಾಕ್ಯಾನಿ, ಅಖಂಡೇ, ಅತ್ರ, ಕಿಂಚಿತ್, ನವಿದಧತೇ, ಹಿ, (ಲಕ್ಷಣಾವೃತ್ಯಾ) ತಾನಿ, ಜಾಡ್ಯಾದೇ, ಅಭಾವಂ, ಅಭ್ಯಧುಃ, ಚೇತ್, ತತ್, ನಶೋಭತೇ ||

ಅರ್ಥ:— ಕಿಂಚ ಮತ್ತೊಂದು ಅನ್ಯದೂಷಣವೇನೆಂದರೆ, ಅಖಂಡೇತ್ರ= ನಿರ್ವಿಶೇಷನಾದ ಬ್ರಹ್ಮನಲ್ಲಿ, ವಾಕ್ಯಾನಿ= ಸತ್ಯಂಜ್ಞಾನಮನಂತಂ ಬ್ರಹ್ಮ, ಇತ್ಯಾದಿ ವಾಕ್ಯಗಳು, ಕಿಂಚಿತ್ ಸತ್ಯತ್ವ= ಜ್ಞಾನತ್ವಾದಿ ರೂಪಧರ್ಮವನ್ನು, ನ ವಿದಧತೇ= ಸಮರ್ಥನ ಮಾಡುವದಿಲ್ಲ (ಹೇಳುವದಿಲ್ಲ) ಹಿ, =ಯಾವ ಕಾರಣದ್ದೆಶೆಯಿಂದ, ತಾನಿ= ಸತ್ಯಜ್ಞಾನಾದಿ ವಾಕ್ಯಗಳು, ಜಾಡ್ಯದೇ= ಜಡತ್ವಾದಿ ಧರ್ಮಗಳ ಅಭಾವಂ=ಅಭಾವವನ್ನು (ಇಲ್ಲದೆಂದು) ಅಭ್ಯಧುಃ ಚೇತ್= ಹೇಳುವವು ಎಂದರೆ, ತತ್= ಅದಾದರೂ ನಶೋಭತೇ= ಶೋಭಿಸಲಾರದು.

ಭಾವಾರ್ಥ:— ಮಾಯಾವಾದಿಯೇ ಕೇಳು ನಿನ್ನ ನಿರ್ವಿಶೇಷ ಪರಬ್ರಹ್ಮನಲ್ಲಿ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಮೊದಲಾದ ವೇದವಾಕ್ಯಗಳಲ್ಲಿ ಸತ್ಯತ್ವ

ಜ್ಞಾನಶಕ್ತ್ಯೈಶ್ವ ಅನಂತತ್ವವೇ ಮೊದಲಾದ ವಿಶೇಷವಾದ ಧರ್ಮಗಳನ್ನು, ರವ= ಸ್ವಲ್ಪ ವಾದರೂ ಹೇಳುವದಿಲ್ಲವಷ್ಟೆ? ಸತ್ಯ ಜ್ಞಾನ ಆನಂದ ಅನಂತಾದಿ ಯಾವ ವಿಶೇಷವನ್ನು ಸಮರ್ಥನ ಮಾಡುವದಿಲ್ಲವೆಂದು ನೀವು ಹೇಳುತ್ತೀರಿ ಕಾರಣ ಸವಿಶೇಷತ್ವ ಲಕ್ಷಣಾ ವೃತ್ತಿಯನ್ನು ನೀನು ಸ್ವೀಕರಿಸುವದು ಸಹ ವ್ಯರ್ಥವಾಯಿತೆಂದು, ಸಿದ್ಧಾಂತಿಗಳು ಹೇಳಲು; ಆಗ್ಗೆ ಮಾಯಾವಾದಿಯು, ಸತ್ಯ ಜ್ಞಾನಾದಿ ವಾಕ್ಯಗಳು ಭಾವ ಧರ್ಮವನ್ನು ಹೇಳದೆ ಇದ್ದರೂ, 'ಅಸತ್ಯತ್ವಾದ್ಯಭಾವರೂಪ ಧರ್ಮಗಳನ್ನು ಅಂದರೆ ಜಡತ್ವಾದಿ ಧರ್ಮ ಗಳು ಬ್ರಹ್ಮನಲ್ಲಿಲ್ಲ ಎಂಬುವದರಿಂದ, ಜಡತ್ವಾದ್ಯಭಾವವನ್ನು ಹೇಳುತ್ತವೆಂಬುವ ಮಾತು, ಶೋಭಿಸುವದಿಲ್ಲ.

**ಭಾವ**= ಇರುವದು, **ಅಭಾವ**= ಇಲ್ಲದ್ದು

"**ಸತ್ಯಂ**= ಜ್ಞಾನಂ ಅನೃತ ಜಡ ವಿರೋಧಃ" ಎಂತ ಅವನ ವಾಕ್ಯವಿರುವದರಿಂದ

**ಸತ್ಯ**= ಅಂದರೆ, ಅನೃತವಿರೋಧ.

**ಜ್ಞಾನ** =ಅಂದರೆ ಜಡವಿರೋಧಿ ಎಂದು ಅರ್ಥ ಮಾಡುವನು. ಇದು ಸರಿಯಲ್ಲ.

**ಶ್ಲೋಕ ||** **ಅಭಾವಭಾವಸ್ಯಾಭಾವಾ |**
**ದ್ಭಾವರೂಪಸ್ಯ ತಸ್ಯ ತು ||**
**ಭಾವಭಾವವಿಶೇಷಾಣಾ |**
**ಮಭಾವಾದವಿಶೇಷಿಣಃ** || ೩೭ ||

ವಾರ್ಧಿಕ || ಏಕೆದು ಅಭಾವ ಶೋಭಿಸದಿಲ್ಲವೆನ್ನೆ ಕೇಳು |
ವಾಕು ಶ್ರುತಿ ಪೇಳ್ವಿ ಸತ್ಯಂ ಜ್ಞಾನಮಿದರರ್ಥ |
ಕಾಕು ಅಸತ್ಯತ್ವಾದ್ಯಭಾವ ಬ್ರಹ್ಮ ಸ್ವರೂಪಥವ
ತದ್ಧರ್ಮ ಗುಣವೋ ||
ಲೋಕಪತಿ ಭಾವರೂಪೆಂದಂಗಿಕೃತ ಬ್ರಹ್ಮ |
ಸಾಕ್ಷೈ ವಿರುದ್ಧೆರಡಭಾವ ಸ್ವರೂಪಾಗ |
ಸೋಕೆ ನಿರ್ಧರ್ಮನಿಗೆ ಭಾವಭಾವದ ಧರ್ಮ
ಕೂಡ್ದು ಪಕ್ಷೆರಡು ಹಾನಿ || ೩೭ || ೮೪೫ |

ಯಾಕಂದರೆ, ಅಸತ್ಯತ್ವಾದ್ಯಭಾವವವು ಬ್ರಹ್ಮರೂಪವೊ, ತದ್ವಿಶೇಷವೊ ಎಂದು ಎರಡು ಕೂಡುವದಿಲ್ಲವೆಂದು ಹೇಳತ್ತಾರೆ.

ಅನ್ವಯ:— ಭಾವರೂಪಸ್ಯ, ತಸ್ಯ, ತು, ಅಭಾವಭಾವಸ್ಯ, ಅಭಾವಾತ್, ಅವಿಶೇಷೇಣ, ಭಾವಭಾವ, ವಿಶೇಷಾಣಾಂ, ಅಭಾವಾತ್, ಲಕ್ಷಣಾ, ನ, ||

ಅರ್ಥ:— ಭಾವರೂಪಸ್ಯ= ಭಾವಾತ್ಮಕೇನ (ಸದ್ರೂಪನೆಂದು) ಅಂಗೀಕೃತನಾದ ತಸ್ಯತು= ಪರಬ್ರಹ್ಮಗೆ, ಅಭಾವ ಭಾವಸ್ಯ ಅಭಾವಾತ್= ಅಭಾವ ಭಾವ ಧರ್ಮಕ್ಕೆ ಅಂದರೆ ಅಭಾವತ್ವಕ್ಕೆ ಅಭಾವಾತ್= ಅಸಂಭವಾತ್ =ಅಸಂಭವವಿರುವದರ ದೆಸೆಯಿಂದ, ಅಸತ್ವಾದ್ಯಭಾವವು ಬ್ರಹ್ಮರೂಪವೆಂದು ಹೇಳುವದು, ಯುಕ್ತವಲ್ಲ. ಅವಿಶೇಷೇಣ =ನಿರ್ವಿಶೇಷನಾದ ಪರಬ್ರಹ್ಮಗೆ, ಭಾವ ಅಭಾವ= ಭಾವ ಅಭಾವರೂಪವಾದ ವಿಶೇಷಾಣಾಂ ಅಭಾವಾತ =ಯಾವ ವಿಶೇಷಗಳು ಇಲ್ಲದ್ದರಿಂದ, ಲಕ್ಷಣಾನ =ಲಕ್ಷಣವು ಸಂಭವಿಸದು. ಸತ್ಯತ್ವಾದ್ಯಭಾವವು ಬ್ರಹ್ಮವಿಶೇಷವೆಂದು ಹೇಳಿದರೆ ಅಪಸಿದ್ಧಾಂತ ಬರುತ್ತದೆ. ಆದ ಕಾರಣ ದೆಶೆಯಿಂದಾ ಪೂರ್ವದಲ್ಲಿ ಹೇಳಿದಂತೆ ಬ್ರಹ್ಮರೂಪ ವಿಷಯವಲ್ಲದ್ದರಿಂದ ಅಶತ್ವಾವೇದಕತ್ವವು ಸಿದ್ಧವಾಗುವದು.

ಭಾವಾರ್ಥ:— ಸತ್ಯಂಜ್ಞಾನ, ಮಿತ್ಯಾದಿ ವಾಕ್ಯದಿಂದ ಪ್ರತಿಪಾದ್ಯವಾದ ಅಸತ್ಯತ್ವಾದ್ಯಭಾವವು, (ಇಲ್ಲದ್ದು–ಇಲ್ಲದಿರುವಿಕೆಯು) ಬ್ರಹ್ಮಸ್ವರೂಪವೊ ಅಥವಾ ತದ್ಧರ್ಮಗುಣವೊ ಎಂದು ವಿಕಲ್ಪಿಸಿ, ಬ್ರಹ್ಮಸ್ವರೂಪವು ಅಲ್ಲವೆಂತ ಅರ್ಧ ಶ್ಲೋಕದಿಂದ ಖಂಡಿಸುತ್ತಾರೆ. ಭಾವ (ಇದ್ದದು ಸತ್ಯ( ಸ್ವರೂಪವೆಂದು ಅಂಗೀಕರಿಸಲ್ಪಟ್ಟ ಆ ಪರಬ್ರಹ್ಮನು, ಅಭಾವ (ಇಲ್ಲದ್ದು) ಸ್ವರೂಪನಾಗಲಾರನು. ಕಾರಣವೇನೆಂದರೆ ಭಾವ ಮತ್ತು ಅಭಾವವೆರಡೂ ಒಂದಕ್ಕೊಂದು ವಿರುದ್ಧಗಳಾಗಿವೆ. ತದ್ಧರ್ಮಗುಣವೋ ಎಂಬ ಎರಡನೇ ಪಕ್ಷದಲ್ಲಿ ಯಾವ ಧರ್ಮವೂ ವಿಶೇಷವೂ ಅಲ್ಲದ ಪರಬ್ರಹ್ಮನಿಗೆ, ಭಾವರೂಪ ಧರ್ಮವಾಗಲೀ ಅಭಾವರೂಪ ಧರ್ಮವಾಗಲೀ ಕೂಡದಿರುವ ಪ್ರಯುಕ್ತ ಕಾಕು= ಕೆಟ್ಟದಾದ, ಅಸತ್ಯತ್ವಾದ್ಯಭಾವರೂಪ ಧರ್ಮವು, ಬ್ರಹ್ಮನಲ್ಲಿರುವದೆಂದು ಹೇಳುವದು ಅಯುಕ್ತ. ಅಂತೂ ಎರಡೂ ಪಕ್ಷವೂ ಕೂಡುವದಿಲ್ಲ

ಸಾರಾಂಶವೇನೆಂದರೆ, ಬ್ರಹ್ಮನಲ್ಲಿ ಜಡತ್ವ, ಅಜ್ಞಾತ್ವ ಮೊದಲಾದ ಧರ್ಮದ ಅಭಾವಗಳನ್ನು ಹೇಳತಕ್ಕ, ಸತ್ಯಜ್ಞಾನಾದಿ ವಾಕ್ಯಗಳು. ಜಡತ್ವ ಅಜ್ಞಾತ್ವ ಮೊದಲಾದ ಧರ್ಮಗಳನ್ನು ನಿಷೇಧ ಮಾಡಿದರೆ, ಆ ಪರಬ್ರಹ್ಮವು ಶೂನ್ಯವೆಂದೇ ಆಗುತ್ತದೆ. ಬ್ರಹ್ಮವಸ್ತು ಭಾವರೂಪಾತ್ಮಕ) ಇರತಕ್ಕ ವಸ್ತುವೆಂದು ಮಾಯಾವಾದಿಗಳು ಒಪ್ಪಿರುವದರಿಂದ, ಆ ಬ್ರಹ್ಮವಸ್ತುವಿನಲ್ಲಿ, ಅಭಾವವೆಂಬ (ಇಲ್ಲದಿರುವದು ಮಿಥ್ಯಾ) ಭಾವವು (ಧರ್ಮವು) ಇರಲಿಕ್ಕೆ ಸಾಧ್ಯವಿಲ್ಲೇ ಇಲ್ಲ.

ಮತ್ತು ನಿರ್ವಿಶೇಷ ಬ್ರಹ್ಮನಲ್ಲಿ ಅಭಾವರೂಪನಾದ, ಅಥವಾ ಭಾವರೂಪವಾದ ಯಾವ ಧರ್ಮವೂ (ವಿಶೇಷವು) ಇಲ್ಲವೆಂದಮೇಲೆ, ಬ್ರಹ್ಮಶೂನ್ಯಗಳಿಗೆ ವ್ಯತ್ಯಾಸವೇನೂ ಇಲ್ಲದಂತಾಯಿತು. ಈ ಕಾರಣದಿಂದ ಸತ್ಯಂಜ್ಞಾನಾದಿ ವಾಕ್ಯಗಳಿಗೆ ಪೂರ್ವೋಕ್ತ

ಪ್ರಕಾರದಿಂದ ("ಬ್ರಹ್ಮವಿಷಯತ್ವ ಅಭಾವತ್ ನತತ್ಸ್ಯಾ ಅವೈದಿಕ ಮಿತಿ-ಭಾವಃ") ಸತ್ಯಂ ಜ್ಞಾನಮನಂತಂ ಬ್ರಹ್ಮ" ಈ ವಾಕ್ಯಗಳು, ಬ್ರಹ್ಮಗೆ ವಿಷಯವಾಗಲಿಲ್ಲಾದ್ದರಿಂದ ವೇದವು ಪ್ರಮಾಣವಾಗಲಿಲ್ಲ. ಹೀಗೆ ಎರಡೂ ಪಕ್ಷದಿಂದ ನಿನಗೆ ಹಾನಿ.

ಕಾಕು= ಕೀಳ, ಕೆಟ್ಟ, ಲೋಕಪತಿ= ಜಗತ್ತಿಗೆ ಒಡೆಯ. ಸಾಕ್ಯೆ =ಸಾಕುಮಾಡು ಸೋಕು= ಮುಟ್ಟು

ಶ್ಲೋಕ ॥ ಯೋ ವೇದ ವೇದಿತಾರ್ಥಾನಾಂ ।
ನಿತ್ಯ (ತ್ಯಂ) ಸಂತ್ಯಾಗಸಂಶ್ರವೀ ॥
ವೇದಬಾಹ್ಯೋ ವಿಪಶ್ಚದ್ಭಿ ।
ರೇಷ ನಿಶ್ಚೀಯತಾಂ ತತಃ ॥ ೩೭ ।

( ಇದು ಉಡುಪಿಯ ಪಾಠ )

( ನಮ್ಮ ದೇಶದ ಪಾಠ ೨ನೇ ಅರ್ಥರುಚಿ ಮೊದಲೇ ಇರುವದು. )

ವಾರ್ಧಿಕ ॥ ಮನ್ಯಂತೆ ಶೂನ್ಯಮೇವಾನ್ಯ ಇತ್ಯಾದಿಯಿಂ ।
ಇನ್ನು ಆ ಮಾಯಿ ಪ್ರಚ್ಛನ್ನ ಬೌದ್ಧನು ಎಂದು ।
ಚನ್ನ ಪ್ರತಿಜ್ಞೆಯಲಿ ಪೇಳ್ವೆ ಶ್ರುತಿ ಪ್ರತಿಪಾದ್ಯ
ಪ್ರಾಪಂಚ ಪ್ರವಹತೊ ನಿಜ ॥

ಅನ್ನಂತಗುಣಪೂರ್ಣ ನಿರ್ದೋಷಿ ಬ್ರಹ್ಮನಿರೆ ।
ಇನ್ನಿವಕೆ ಮಿಥ್ಯ ನಿರ್ಗುಣ ಸಾಧಿಸುವ ಹಟದಿ ।
ಚುನ್ನ ವೇದಾರ್ಥನಿತ್ಯದಿ ಬಿಡುವ ಶ್ರುತಿಬಾಹ್ಯ
ಶೂನ್ಯಸಮ ಬುಧನಿರ್ಣಯಾ ॥ ೩೭ ॥ ೮೪೬ ॥

ಈ ರೀತಿಯಾಗಿ 'ಮನ್ಯಂತೇ ಶೂನ್ಯಮೇವಾನ್ಯೇ' ಇತ್ಯಾದಿ ಶ್ಲೋಕದಿಂದ ಮಾಯಾವಾದಿಗಳು ಪ್ರಚ್ಛನ್ನ ಬೌದ್ಧರಿಂತ ಪ್ರತಿಜ್ಞಾಪೂರ್ವಕ ಹೇಳಲ್ಪಟ್ಟಿತು. ಈ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತಾ, ಆ ಮಾಯಾವಾದಿಗಳಿಗೆ ಪ್ರಚ್ಛನ್ನ ಬೌದ್ಧತ್ವವನ್ನು ಉಪಸಂಹಾರಮಾಡುತ್ತಾರೆ.

ಅನ್ವಯ:— ತತಃ, ಏಷಃ, ವಿಪಶ್ಚದ್ಭಿ, ವೇದಬಾಹ್ಯಾ ಇತಿ, ನಿಶ್ಚಯಿತಾಂ, ಯಃ ವೇದವೇದಿತಾರ್ಥಾನಾಂ, ನಿತ್ಯಂ, ಸಂತ್ಯಾಗ, ಸಂಶ್ರವೀ.

ಅಥವಾ, ಯಃ, ವೇದವೇದಿತಾರ್ಥಾನಾಂ, ನಿತ್ಯಂ, ಸಂತ್ಯಾಗ, ಸಂಶ್ರವೀ, ತತಃ, ಏಷಃ, ವೇದಭಾಹ್ಯಾ, (ಇತಿ) ವಿಪಶ್ಚದ್ಭಿಃ ನಿಶ್ಚೀಯತಾಂ.

ಅರ್ಥ:— ಯಃ ವೇದವೇದಿತಃ=ಯಾವನು ವೇದದಿಂದ ಹೇಳಲಟ್ಟ, ಅರ್ಥಾನಾಂ= ಪ್ರಮೇಯಗಳ, ನಿತ್ಯಂ ಸಂತ್ಯಾಗ ಸಂಶ್ರವೀ = ನಿತ್ಯದಲ್ಲೂ ಬಿಡುವದರಲ್ಲಿ ಸರ್ವದಾ ಪ್ರತಿಜ್ಞಾನವಂತನಾಗಿರುವನೊ, ತತಃ= ಆ ಕಾರಣದಿ ಏಷಃ= ಅಂಥಾ ಈ ಮಾಯಿ ವೇದಬಾಹ್ಯಾ ಇತಿ= ವೇದಕ್ಕೆ ಬಾಹ್ಯನೆಂದು, ವಿಪಶ್ಚದ್ಭಿ= ಜ್ಞಾನಿಗಳಿಂದ ನಿಶ್ಚೀಯತಾಂ= ನಿಶ್ಚಯಿಸಲ್ಪಡಲಿ.

ಭಾವಾರ್ಥ:— ಯಾವ ಮಾಯಾವಾದಿಯಾದ ಅದ್ವೈತಿಯು, ಶ್ರುತಿಪತಿ ಪಾದ್ಯ= ವೇದದಿಂದ ತಿಳಿಸಲ್ಪಟ್ಟ, ಪ್ರಪಂಚವು ಸತ್ಯವಾಗಿ ಪ್ರವಾಹರೂಪದಿಂದ ನಿತ್ಯವಾಗಿರುವದು ಮತ್ತು ಪರಬ್ರಹ್ಮನು ಜ್ಞಾನಾನಂದಾದಿ, ಅನಂತ ಗುಣಗಳಿಂದ ಪರಿಪೂರ್ಣನು ಎಂದು ಸುಪ್ರಸಿದ್ಧವಾಗಿ ವೇದಗಳು ಹೊಗಳುತ್ತಿರಲಾಗಿ, ಜಗನ್ಮಿಥ್ಯಾ ಬ್ರಹ್ಮನಿರ್ಗುಣನು ಎಂದು ಸಾಧಿಸುವ ನೆವದಿಂದ ನಿತ್ಯದಲ್ಲಿಯೂ ಹಟವೆಂಬ ದುರಾಗ್ರಹದಿಂದ, ನನ್ನಿ =ಸತ್ಯ ವಾದ ವೇದಾರ್ಥ ಬಿಡುವದರಲ್ಲಿ ಪ್ರತಿಜ್ಞಾ ಮಾಡಿರುತ್ತಾನೋ ಈ ಮಾಯಾವಾದಿಯನ್ನು ವೇದದೂಷಕನೆಂದು ಪಂಡಿತರು ನಿಶ್ಚಯಿಸಿದ್ದಾರೆ. ಶೂನ್ಯವಾದಿಯಂತೇ ಈ ಮಾಯಾ ವಾದಿಯು, ವೇದಮತವನ್ನು ಬಿಟ್ಟ ಪ್ರಯುಕ್ತ ಉಭಯರೂ ಸಮಾನರೆಂಬುದು ಜ್ಞಾನಿಗ ಳಿಂದ ನಿರ್ಣೀತವಾಗಿದೆ.

ಶ್ಲೋಕ ॥ ಜಾಯುಸೋ ದೂಷಣೇನೈವ ।
ಧೂರ್ತಂ ಮನ್ಯೋಽಪಿ ದೂಷಿತಃ ॥
ಪಕ್ಷಯೋರವಿಶೇಷಿತ್ವಾ ।
ದೇತಯೋಃ ಸದ್ವಿಪಕ್ಷಯೋಃ ॥ ೩೮ ॥

ವಾರ್ಧಿಕ ॥ ಬೌದ್ಧರಂ ವ್ಯಕ್ತ ಪ್ರಚ್ಛನ್ನರೆಂದೆರಡಿವರ ।
ಮದ್ಧ್ಯದಲಿ ಜೇಷ್ಠ ಶೂನ್ಯನ ದೂಷಿಣಿಂದೆಯೆ ।
ಬೌದ್ಧ ಪಚ್ಛನ್ನ ಮಾಯಾವಾದಿ ಮಹವಂಚಕನ
ದೂಷಣಾದಂತೆಯೆ ॥
ಸಿದ್ಧವಿದು ಸಜ್ಜನ ವಿರೋಧಿಗಳು ಉಭಯರಾ ।
ಸಿದ್ಧಾಂತಗಳಲಿ ಒಂದಕ್ಕೊಂದು ಭೇದಿರದೆ ।
ಇದ್ದ ಕಾರಣ ಒಂದು ಪಕ್ಷ ದೂಷಣವಿಂದ ಮತ್ತೊಂದು
ಪಕ್ಷ ನಿರಸಂ ॥ ೩೮ ॥ ೮೪೭ ॥

ಪೂರ್ವೋಕ್ತ ಶೂನ್ಯ ಮಾಯಾವಾದಿಗಳುಭಯರಿಗೆ ಸಾಮ್ಯ ಹೇಳುವದರಿಂದ ಏನು ಪ್ರಯೋಜನ (ಫಲ)ವೆಂದು ಕೇಳಿದರೆ ಈ ಶ್ಲೋಕದಲ್ಲಿ ಹೇಳುತ್ತಾರೆ.

ಅನ್ವಯ:— ಸದ್ವಿಪಕ್ಷಯೋಃ ಏತಯೋಃ, ಪಕ್ಷಯೋಃ ಅವಿಶೇಷತ್ವಾತ್, ಜ್ಯಾಯಸಃ, ದೂಷಣೇನ, ಏವ, ಧೂರ್ತಂ ಮನ್ಯಃ, ಅಪಿದೂಷಿತಂ.

ಅರ್ಥ:— ಸದ್ವಿಪಕ್ಷಯೋಃ= ಸಜ್ಜನರಿಗೆ ವಿರುದ್ಧವಾದ, ಏತಯೋ ಪಕ್ಷಯೋ= ಎರಡೂ ಮತಗಳಿಗೂ, ಅವಿಶೇಷತ್ವಾತ್= ವಿಶೇಷವಿಲ್ಲದೇ ಪ್ರಮೇಯಗಳೇಕರೀತಿಯಾದ್ದರಿಂದ, ಜಾಯಸಃ = ಹಿರಿಯನಾದ ದುಷ್ಟ ಬೌದ್ಧನ, ದೂಷಣೇನ ಏವ =ದೂಷಣದಿಂದಲೇ, ಧೂರ್ತಂ ಮನ್ಯಃ= ಆತ್ಮಾನಂ ಧೂರ್ತಂ =ವಂಚಕಂ, ಮನ್ಯಮಾನಃ ಅಪಿ ತಾನು ವಂಚಕನೆಂದೆನಿಸಿಕೊಂಬ ಮಾಯಾವಾದಿಯಾದರೂ, ದೂಷಿತಃ= ದೂಷಿಸಿ ಖಂಡಿಸಲ್ಪಟ್ಟನು.

ಭಾವಾರ್ಥ:— ಮಾಧ್ಯಮಿಕ ಬೌದ್ಧರಲ್ಲಿ ವ್ಯಕ್ತರು =ಸ್ಪಷ್ಟವಾದ ಬೌದ್ಧರು ಶೂನ್ಯವಾದಿಗಳು. ಪ್ರಚ್ಛನ್ನಬೌದ್ಧ =ಬೌದ್ಧರೆಂತೆದು ತೋರದೆ ವೇಷ ಹಾಕಿ ತಮ್ಮ ಸ್ವರೂಪ ಮುಚ್ಚಿಕೊಂಡ ಮಾಯಾವಾದಿಗಳು ಈ ಪ್ರಕಾರವಾಗಿ ಇಬ್ಬರು. ಇವರಿಬ್ಬರ ಮಧ್ಯದಲ್ಲಿ ಜೇಷ್ಠ= ಹಿರಿಯನಾದ ಶೂನ್ಯವಾದಿಯ ಮತವು ಅಂಗೀಕರಿಸಲು ಯೋಗ್ಯವಲ್ಲವೆಂದು, ಆ ಶೂನ್ಯವಾದಿಯ ಮತದಲ್ಲಿರುವ ಅನೇಕ ದೋಷಗಳನ್ನು ಹೇಳಿ ದೂಷಿಸುವದರಿಂದಲೇ, ಮಹಾವಂಚಕತನದಿಂದ ಕಪಟ ವೇಷವನ್ನು ಧರಿಸಿದ, ಪ್ರಚ್ಛನ್ನ ಬೌದ್ಧನಾದ ಮಾಯಾವಾದಿಯು ಸಹ ದೂಷಿತನಾದನೆಂದು ತಿಳಿಯತಕ್ಕದ್ದು ಶೂನ್ಯ ಮಾಯಾವಾದಿಗಳುಭಯರು ಸಮಾನರಾದ ಕಾರಣ, ಅದ್ವೈತ ಮತವನ್ನು ಬೇರೆ ಖಂಡಿಸುವ ಕಾರಣವಿಲ್ಲ. ಲೋಕದಲ್ಲಿ 'ಮಹಾಮಲ್ಲ ಭಂಗ ನ್ಯಾಯೇನ' ಅಂದರೆ ಕುಸ್ತಿಯ ಕಣದಲ್ಲಿ ದೊಡ್ಡ ಜಟ್ಟಿಯನ್ನೊಗೆದು ಆ ಮಹಾಮಲ್ಲ ಶೂರನ ಗರ್ವ ಖಂಡಿಸಿದರೆ, ಅವನಿಂದ ಅಸಮರ್ಥರಾದ ಅವನಂತೆ ವರ್ತಿಸುವ ಆ ಮಹಾಮಲ್ಲನ ವಶದಲ್ಲಿರುವ ಇತರ ಜಟ್ಟಿಗಳನ್ನು ಸೋಲಿಸುವ ಕಾರಣವಿಲ್ಲ. ಇದು ಲೋಕದಲ್ಲಿ ಸಿದ್ಧ. ಈ ಶೂನ್ಯಮಾಯಿಗಳುಭಯರು ಸಜ್ಜನವಿರೋಧಿಗಳು ಈ ಉಭಯರ ಸಿದ್ಧಾಂತದಲ್ಲಿ ಒಂದಕ್ಕೊಂದು ಭೇದವಿರದೇ ಇದ್ದುದರಿಂದ ಒಂದು ಪ್ರಬಲವಾದ ಸಿದ್ಧಾಂತವನ್ನು ನಿರಾಕರಣ ಮಾಡುವದರಿಂದ, ಇನ್ನೊಂದು ಪಕ್ಷ (ಸಿದ್ಧಾಂತ) ತನ್ನಷ್ಟಕ್ಕೆ ತಾನೇ ನಿರಾಕರಣವಾಯಿತು. ಬೇರೆ ದೂಷಿಸುವ ಕಾರಣವಿಲ್ಲ. ಇದೇ ಪ್ರಯೋಜನ.

ಶ್ಲೋಕ ॥ ಅಸತ್ತ್ವಾದಿತ್ಯಸೌ ಹೇತು ।
ರಸಿದ್ಧೋ ಬ್ರಹ್ಮವಾದಿನಃ ॥
ಮೋತಿ ಭಾಣ್ಯಾ ವಿಶೇಷತ್ವಾ ।
ದೇತ (ತ್ರತ್ವ) ಯೋಬ್ರ್ರಹ್ಮಶೂನ್ಯಯೋಃ ॥ ೩೯ ॥

ವಾರ್ಧಿಕ ॥ ಬ್ರಹ್ಮವಾದಿಯು ಎನಗಸತ್ವಾತು ಹೇತುವಂ |
ಘಮ್ಮನದು ಸಿದ್ಧಿಸದು ಎಂದುನೀಂ ಪೇಳ್ಕೂಡದು |
ಬ್ರಹ್ಮಶೂನ್ಯಗಳೆಂಬ ತತ್ವನೀಂ ಒಪ್ಪಿರಲು ಅವಕೇನು ಭೇದವಿಲ್ಲ ॥
ಹಮ್ಮಿನಸ ದಾತ್ಮಕಂ ಪೇಳ್ದಶೂನ್ಯಕೆ ಮತ್ತು ।
ನಿಮ್ಮ ನಿರ್ಧಾರ್ಮಿಕಂ ನಿರ್ಗುಣ ನಿರಾಕಾರ |
ಬ್ರಹ್ಮನಲಿ ಅರ್ಥಾತು ಸಿದ್ಧಿಸುವ ಕಾರಣದಿ ಹೇತ್ವಸಿದ್ಧಿಯು
ಆಗದು ॥ ೩೯ ॥ ೭೪೪ ॥

ಪೂರ್ವಪಕ್ಷ= ಶೂನ್ಯವಾದಿ ನಿರಾಕರಣ ಯುಕ್ತಿಯಿಂದ ಮಾಯಾವಾದಿ ನಿರಾಕೃತನಾಗುತ್ತಾನೆಂತ ಹೇಳಿದ್ದು ಸರಿಯಲ್ಲ. ಯಾಕಂದರೆ 'ವಿಮತಂ ಕಾರಣಂನಸ್ಯಾದಿ' ಇತ್ಯಾದಿ ಶ್ಲೋಕದಿಂದ ಶೂನ್ಯ ವಾದಿಯನ್ನು ಕುರಿತು, ಶೂನ್ಯಕ್ಕೆ ಕಾರಣತ್ವ ಅಧಿಷ್ಠಾನತ್ವವೂ ಅಸತ್ವಾದಿ ಹೇತು ಪ್ರಯುಕ್ತವಾಗುವದಿಲ್ಲವೆಂತ ಹೇಳಿದಿರಿ. ಈ ಅಸತ್ವ ಸ್ವರೂಪ ಹೇತು, ಮಾಯಾವಾದಿಯನ್ನು ಕುರಿತು ಪ್ರಯೋಗಿಸಲಿಕ್ಕೆ ಬರುವದಿಲ್ಲ. ಯಾಕಂದರೆ ಮಾಯಾವಾದಿಯು ಬ್ರಹ್ಮಗೆ ಸತ್ಯತ್ವವನ್ನು ಅಂಗೀಕರಿಸುತ್ತಾನಾದುದರಿಂದ ಈ ಹೇತುವು ಸಿದ್ಧಿಸುವವಿಲ್ಲವೆಂದು, ಮಾಯಾವಾದಿಯು ಪೂರ್ವಪಕ್ಷ ಮಾಡಿದರೆ ಆ ಶಂಕೆಯನ್ನು ಶ್ಲೋಕ ೩೯-೪೦ ರಿಂದ ನಿರಾಕರಿಸುತ್ತಾರೆ.

ಅನ್ವಯಃ ॥ ಬ್ರಹ್ಮವಾದಿನಃ, ಅಸತ್ವಾತ್, ಇತಿ, ಅಸೌ, ಹೇತುಃ ಅಸಿದ್ಧಃ ಇತಿ, ಮಾ, ಭಾಣೀ, (ಕುತಃ) ತತ್ವಯೋಃ, ಬ್ರಹ್ಮಶೂನ್ಯಯೋಃ, ಅವಿಶೇಷತ್ವಾತ್.

ಅರ್ಥ:- ಬ್ರಹ್ಮವಾದಿನಃ =ಬ್ರಹ್ಮವಾದಿಯಾದ ನನಗೆ, ಅಸತ್ವಾದಿತ್ಯಸೌ ಹೇತು= ಸುಳ್ಳು ಎಂಬ ಕಾರಣ, ಅಸಿದ್ಧ ಇತಿಮಾ ಭಾಣಿ= ಅಸಿದ್ಧವೆಂದು ಅನ್ನಬೇಡಿ, ಯಾಕಂದರೆ, ತತ್ವಯೋಃ =ಶೂನ್ಯವಾದಿ ಮಾಯಾವಾದಿಗಳ ತತ್ವವಾದ ಬ್ರಹ್ಮ ಮತ್ತು ಶೂನ್ಯಗಳಿಗೆ, ಅವಿಶೇಷತ್ವಾತ್= ಎಲ್ಲ ವಿಶೇಷರಹಿತತ್ವ ವಿರೋಣದರಿಂದ ಮಾಯಿನಃ= ಮಾಯಾವಾದಿಗಳಿಗೆ, ಹೇತು ಅಸಿದ್ಧವಾಗಲಿಲ್ಲ. ಸಿದ್ಧಿಸಿತು.

ಭಾವಾರ್ಥ:— ಬ್ರಹ್ಮವಾದಿ =ಬ್ರಹ್ಮನನ್ನು ಒಪ್ಪುವ ಮಾಯಾವಾದಿಯಾದ ನನ್ನಗೆ ಅಸತ್ವಾತ್,= (ಅಸತು) ಇಲ್ಲದ್ದು ಎಂಬ ಹೇತು =(ಒಂದು ವಸ್ತುವನ್ನು ಸಾಧನ ಮಾಡತಕ್ಕದ್ದಕ್ಕೆ ಹೇತು ಅನ್ನುವರು) ಕಾರಣ, ಘಮ್ಮನದು =ತ್ವರದಲಿ (ಇದು ಪಾರಿಭಾಷಿಕ ಶಬ್ದ) ಸಿದ್ಧಿಸದು=ಕೈಗೂಡುವದಿಲ್ಲವೆಂದು, ನೀನು ಮಾಯಾವಾದಿಯಃ ಸರ್ವಥಾ ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ ನೀವಿಬ್ಬರು, ಒಪ್ಪಿಕೊಂಡಿರುವ ಬ್ರಹ್ಮ ಮತ್ತು ಶೂನ್ಯಗಳೆರಡೂ ತತ್ವಗಳಿಗೆ ಸ್ವಲ್ಪವಾದರೂ ಭೇದವಿಲ್ಲದ್ದರಿಂದ, ಹಮ್ಮಿನ= ಏನೂ ತಥ್ಯವಿಲ್ಲದೇ

ಗರ್ವದಿಂದ ಪೇಳುವ. ಅಸದಾತ್ಮಕಂ= ಇಲ್ಲದಿರುವಿಕೆಯೆಂಬ ಹೇಳಿದ ಶೂನ್ಯಕ್ಕೆ ಮತ್ತು ಮಾಯಾವಾದಿಯಾದ ನಿವ್ಹ್ನ ನಿರ್ಧಾರ್ಮಿಕ= ಯಾವ ದರ್ಮವಿಲ್ಲದ, ನಿರ್ಗುಣ= ಗುಣವಿಲ್ಲದ ನಿರಾಕಾರ= ಆಕಾರವಿಲ್ಲದ ಬ್ರಹ್ಮನಲ್ಲಿ ಅರ್ಥಾತು ನೀನು ಪೇಳುವ ಈ ಮಾತಿನಿಂದಲೇ ಸಿದ್ಧಿಸುತ್ತದೆ. =ಕೈಗೂಡುತ್ತದೆ. ಮಾಯಾವಾದಿಯಾದ ನೀನು ಹೇತುವು ಸಿದ್ಧಿಸಲಾಗುವದಿಲ್ಲವೆಂತ ಹೇಳಲಿಕ್ಕೆ ಬರುವದಿಲ್ಲ.

**ಶ್ಲೋಕ ॥ ಸೋಽಂಗೀಕರೋತಿ ಚೇತ್ ಸತ್ವಂ ।**
**ಬ್ರಹ್ಮಣಃ ಸ್ಯಾದ್ವಿಶೇಷಿತಾ ॥**
**ನಚೇತ್ ಪ್ರಾಪ್ತಂ ಪಾರಿಶೇಷ್ಯಾ ।**
**ದಸತ್ವಂ ನ ನಿರಸ್ಯತು ॥ ೪೦ ॥**

ವಾರ್ಧಿಕ ॥ ಮಾಯವಾದಿಯು ಪರಬ್ರಹ್ಮಗಂ ಸತ್ಯತ್ವ ।
ಹಾಯ ಅಂಗೀಕರಿಸೋಪಕ್ಷ ಸವಿಶೇಷತ್ವ ॥
ನೋಯದಲೆ ಧರ್ಮಗಳ್ಳ ತನವೆ ಯಿರಬೇಕಾಯ್ತು
ಸತ್ಯತ್ವ ನೊಪ್ಪದಿರಲು ॥
ಪ್ರಾಯಶಃ ಪರಿಶೇಷ ಪ್ರಾಪ್ತ ಪ್ರಮಾಣದಿಂ ।
ಓಯನೆ ಅಸತ್ವವು ನಿರಾಕರಿಸ ಕೂಡದೈ ।
ಈ ಯುಭಯ ಸಂಕಟದಿ ಪಾಶ ಬದ್ಧಿತನಾದಿ ಹೇತುವಿಗ-
ಸಿದ್ಧಿಯಿಲ್ಲ ॥ ೪೧ ॥ ೮೪೯ ॥

ಪೂ. ಪ.= ಬ್ರಹ್ಮಗೆ ಅಸತ್ವವು ಮಾಯಾವಾದಿಯಾದ ನನ್ನಿಂದ ಅಂಗೀಕರಿಸಲ್ಪಡುವದಿಲ್ಲ. ಸತ್ವವನ್ನೇ ಅಂಗೀಕಾರ ಮಾಡುತ್ತೇವೆ ಕಾರಣ ಅಸತ್ವಾದಿ ಹೇತುವು ಸಿದ್ಧಿಸಲಿಲ್ಲವೆಂದು ಅದ್ವೈತಿಗಳು ಶಂಕಿಸಿದರೆ, ಅದಕ್ಕೆ ಉತ್ತರ ಹೇಳುತ್ತಾರೆ.

ಅನ್ವಯ:— ಸಃ, ಬ್ರಹ್ಮಣಃ, ಸತ್ವಂ, ಅಂಗಿಕರೋತಿ, ಚೇತ್, ವಿಶೇಷಿತಾಸ್ಯಾತ್, ನ, ಚೇತ್, ಪಾರಿಶೇಷ್ಯಾತ್ ಪ್ರಾಪ್ತಂ, ಅಸತ್ವಂ, ನ, ನಿರಸ್ಯತು.

ಅರ್ಥ:— ಸಃ= ಆ ಮಾಯಾಪಾದಿಯು, ಬ್ರಹ್ಮಣಃ= ಪರಬ್ರಹ್ಮಗೆ ಸತ್ವಂ= ಸತ್ವರೂಪವಿಶೇಷವನ್ನು, ಅಂಗೀಕರೋತಿ ಚೇತ್ =ಅಂಗೀಕರಿಸುವ ಪಕ್ಷದಲ್ಲಿ, ಬ್ರಹ್ಮಣಃ ವಿಶೇಷಿತಾಸ್ಯಾತ್= ಬ್ರಹ್ಮಗೆ ನಿರ್ವಿಶೇಷತ್ವ ಹೋಗಿ ಸವಿಶೇಷತ್ವವೇ ಬರುವದು. ನಚೇತ್ =ಬ್ರಹ್ಮಗೆ ಸತ್ವವಿಲ್ಲೆಂದರೆ, ಪರಿಶೇಷಾತ್ ಪ್ರಾಪ್ತಂ =ಪರಿಶೇಷದಿಂದ, ಬಂದಿರುವ ಅಸತ್ವಂ =(ಇಲ್ಲದ್ದನ್ನು) ಅಸತ್ವವನ್ನು, ನ ನಿರಸ್ಯತು= ನಿರಾಕರಣ ಮಾಡಕೂಡದು.

ಭಾವಾರ್ಥ:— ಬ್ರಹ್ಮಗೆ ನಿರ್ಗುಣ ನಿರಾಕಾರ ನಿರ್ವಿಶೇಷತ್ವವನ್ನು ಹೇಳುವ ಮಾಯಾವಾದಿಯು, ಹಾಯ= ಅಯ್ಯೋ ಈಗ ಬ್ರಹ್ಮನಿಗೆ ಸತ್ಯತ್ವವನ್ನು ಒಪ್ಪಿಕೊಳ್ಳುವ ಪಕ್ಷದಲ್ಲಿ, ನೋಯದಲೇ= ಯಾವ ಬಾಧೆಯಿಲ್ಲದಲೇ ಸತ್ಯತ್ವವೆಂಬ ಸವಿಶೇಷತ್ವವು, ಸಗುಣ ಸಾಕಾರವೆಂಬ, ಧರ್ಮಗಳ್ಳತನ= ಸ್ವಭಾವವುಳ್ಳವನೇ (ಧರ್ಮಗಳುಳ್ಳವನೇ) ಆಗ ಬೇಕಾದೀತು. ಇದರಿಂದ ನಿನ್ನ ಅಸತ್ಯತ್ವಾದ್ವಭಾವ, ನಿರ್ಗುಣ ನಿರಾಕಾರವೆಂಬ ಬ್ರಹ್ಮಗೆ ಹಾನಿ. ಬ್ರಹ್ಮಗೆ ಸತ್ಯತ್ವವನ್ನೊಪ್ಪದಿದ್ದರೆ, ಪ್ರಾಯಶಃ =ನಿಯಮೇನ ಬಹುತರವಾಗಿ, ಪರಿಶೇಷ=ಉಳಿದ ಪ್ರಾಪ್ತಪ್ರಮಾಣದಿಂ= ಬ್ರಹ್ಮನಸತು ಎಂಬು ಹೇಳಿಕೊಳ್ಳುತ್ತಾ ಬಂದ ಪ್ರಮಾಣಗಳಿಂದ, ಓಯೆನೆ =ಹೋಹೋ ಆಶ್ಚರ್ಯ ನೋಡು ನೀನು ಹೇಳಿದ ಬ್ರಹ್ಮನು ಅಸತ್ತು ಎಂಬದು ನಿನ್ನಿಂದಲೇ ನಿರಾಕರಣ ಮಾಡಲಾಗಿದ್ದಾಯಿತು. ಹೀಗೆ ಎರಡೂ ರೀತಿ ಯಿಂದ ನಿನ್ನಗೆ ಬಹು ಸಂಕಟ ಬಂದು ಕೊರಳಿಗೆ ಉರುಲುಬಿದ್ದಿತು. ಕಾರಣ ನಮ್ಮ ಹೇತು ವಿಗೆ ಅಸಿದ್ಧಿಯಿಲ್ಲ.

ಸಾರಾಂಶವೇನೆಂದರೆ, ಪರಸ್ಪರ ವಿರುದ್ಧವಾದ ಸತ್ವಾಸತ್ವಗಳಲ್ಲಿ ಒಂದನ್ನು ನಿಷೇಧಿ ಸಿದರೆ, ಮತ್ತೊಂದು ಅಪರಿಹಾರ್ಯವಾಗಿ ಬಂದೇಬರುವುದು. ಪರಬ್ರಹ್ಮಗೆ ಶೂನ್ಯದ ವೈಲಕ್ಷಣ್ಯ ಬರುವ ಸಲುವಾಗಿ ಸತ್ವರೂಪ ವಿಶೇಷವನ್ನಂಗೀಕಾರ ಮಾಡಿದರೆ, ನಿರ್ವಿಶೇಷ ತ್ವಕ್ಕೆ ಭಂಗವು ಬರುವದು, ಆ ಭಯದಿಂದ ಸತ್ವವನ್ನು ನಿಷೇಧ ಮಾಡಿದರೆ, ಪರಿಶೇಷ ಉಳಿದ, ಸತ್ವವಿರುದ್ಧವಾದ ಅಸತ್ವವು ಅಪರಿಹಾರ್ಯವಾಗಿ ಪ್ರಾಪ್ತವಾಗುವದು. ಅಂದ ಬಳಿಕ, ಅಸತ್ವಹೇತುವು ಮಾಯಾವಾದಿಗೆ ಅಸಿದ್ಧವಾಗುವದಿಲ್ಲ.

ಸತ್ವವನ್ನು ಅಂಗೀಕಾರ ಮಾಡಿದರೆ ನಿರ್ವಿಶೇಷತ್ವಕ್ಕೆ ಭಂಗವು. ಅಂಗೀಕಾರ ಮಾಡ ದಿದ್ದರೆ, ಬ್ರಹ್ಮನಿಗೆ ಶೂನ್ಯಾಭೇದವು ಈ ರೀತಿ ಉಭಯತಃ ಎರಡೂ ಪಕ್ಷದಲ್ಲಿ ಮಾಯಾ ವಾದಿಗೆ ಅನಿಷ್ಟ ಬರುವದು.

**ಶ್ಲೋಕ ॥ ವಿಗೀತಂ ನ ವಿಚಾರ್ಯಂ ಸ್ಯಾ ।**
**ನ್ನ ಭಾವ್ಯಂ ನ ಫಲಪ್ರದಮ್ ॥**
**ಶೂನ್ಯಂ ಬ್ರಹ್ಮಾದ್ಯಮದ್ವೈತಂ ।**
**ವಿಧಧೀ ಗೋಚರೋ ನ ಯತ್ ॥ ೪೧ ॥**

ವಾರ್ಧಿಕ ॥ ನಿಮಹೇತುವಿಂ ಬ್ರಹ್ಮನಸತು ಎಂದೊಪ್ಪಿದರೆ ।
ಗಮನಿಸಿದನಿಷ್ಟೇನು? ಮಾಯವಾದಿಯು ಎನ್ನೆ ॥
ಅಮಮ ವಿಷಯವಿವಾದುದರ ದ್ವೈತರಹಿತಾದ ಶೂನ್ಯ
ಬ್ರಹ್ಮಾದಿತತ್ವ ॥

ಸುಮನ ಮೋಕ್ಷೇಚ್ಛುವಿಗೆ ಶ್ರವಣ ಮನನಕೆ ಆಗ್ದು ।
ಅಮಿತ ಧ್ಯಾನಕೆ ವಿಷಯ ಸಲ್ಲದಿದು ವಿಧಿಬುದ್ಧಿ ॥
ಗಮಿಸುವದೆ ಶೂನ್ಯ ವಸ್ತು ನಿರವಯವ ಫಲ ಮೋಕ್ಷಕ್ಕೆ
ಆಗುವದೆ ಮಾಯಿ ॥ ೪೧ ॥ ೮೫೦ ॥

ಹೋಗಲಿಬಿಡು. ಬ್ರಹ್ಮಗೆ ಅಸತ್ವ ಇರಲಿ, ಮಾಯಾವಾದಿಗೆ ಅದರಿಂದ ಅನಿಷ್ಟವೇನೆಂದು ಕೇಳಿದರೆ, ಅದರ ಫಲಿತಾರ್ಥವನ್ನು ಹೇಳುತ್ತಾರೆ.

ಅನ್ವಯಃ— ವಿಗೀತಂ, ಅದ್ವೈತಂ, ಶೂನ್ಯಂ, ಬ್ರಹ್ಮಾದ್ಯಂ, ವಿಧಿಧೀ ಗೋಚರಃ ನ, ಯತ್, ವಿಚಾರ್ಯಂ ನಸ್ಯಾತ್, ಭಾವ್ಯಂ,, ನ. ಫಲಪ್ರದಂ, ನ, ॥

ಅರ್ಥ:— ವಿಗೀತಂ=ವಿಪ್ರತಿಪನ್ನಂ=ವಿವಾದಗ್ರಸ್ತವಾದ, ಅದ್ವೈತಂ=ಭೇದವಿಲ್ಲದ, ಶೂನ್ಯಂ=ಶೂನ್ಯರೂಪವಾದ ಬ್ರಹ್ಮಾದ್ಯಂ=ಬ್ರಹ್ಮಾದಿ ತತ್ವವು, ಯತ್ ಯಾವ ಕಾರಣ ದೆಸೆಯಿಂದ ತತ್=ಪರತತ್ವೇನ ಅಂಗೀಕೃತವಾದ ಬ್ರಹ್ಮಾದಿವಸ್ತು, ವಿಧಿಧೀ ಗೋಚರಃ= ಅಸ್ತಿತ್ವ ಬುದ್ಧಿಗೆ ವಿಷಯವಾಗುವದಿಲ್ಲ ಆ ಕಾರಣದ್ದೆಶೆಯಿಂದ, ವಿಚಾರ್ಯಂ ನಸ್ಯಾತ್= ಶ್ರವಣಮನನಾದಿ ವಿಚಾರಕ್ಕೆ ಯೋಗ್ಯವಲ್ಲ. ಭಾವ್ಯಂ ನ= ಧ್ಯಾನಕ್ಕೂ ಅರ್ಹವಲ್ಲ. ಫಲಪ್ರದಂನ, = ಫಲಪ್ರದವೂ ಆಗಲಾರದು

ಮಾಯಾವಾದಿ ಪ್ರಭೃತಿಗಳಿಂದ ಅಂಗೀಕೃತಪರತತ್ವವು ವಿಚಾರ್ಯಂ=ಮುಮುಕ್ಷುಗಳಾದ ಜನರಿಗೆ, ಶ್ರವಣಮನನಾದಿ ರೂಪ ವಿಚಾರಕ್ಕೆ ಆಸ್ಪದವು ಆಗುವದಿಲ್ಲ. ಮತ್ತು ಭಾವ್ಯಂ=ಧ್ಯಾನ ಮಾಡಲಿಕ್ಕೆ ಯೋಗ್ಯವಾದದ್ದಾದರೂ ಆಗುವದಿಲ್ಲ ಮತ್ತು ಧರ್ಮಾದಿ ರೂಪ್ಯ ಮೋಕ್ಷಫಲವಾದರೂ ಆಗುದದಿಲ್ಲ.

ಭಾವಾರ್ಥ:— ಆಗ್ಗೆ ಮಾಯಾವಾದಿಯು, ಇರಲಿ ನಿಮ್ಮ ಹೇತುವಿನಂತೆ= ನೀವು ಹೇಳಿದ ಕಾರಣದಂತೆ ಬ್ರಹ್ಮನಿಗೆ ಅಸತ್ವ ಎಂದು ಒಪ್ಪಿದರೆ ಗಮನಿಸಿದ=ಬಂದ ಅನಿಷ್ಟೇನು? ಬಯಸದೇ ಇದ್ದ ಬಂದ ಹಾನಿ ಏನೆಂದು ಮಾಯಾವಾದಿಗಳು ಕೇಳಲು, ಅದಕ್ಕೆ ಉತ್ತರ ಹೇಳುತ್ತಾರೆ. ಅಮಿತ= ಬಹು ಆಶ್ಚರ್ಯವು, ವಿಷಯ. ವಿವಾದುದಂ=ಯಾವ ಪರವಾದಿಗಳೊ ಪ್ಪಿದ ವಿವಾದಾಸ್ಪದವಾದ ಪರಬ್ರಹ್ಮವು, ದ್ವೈತರಹಿತಾದ=ಜೀವಜಡರಿಂದ ಭೇದವಿಲ್ಲ ದಿರುವ ಬ್ರಹ್ಮನು, ಶೂನ್ಯಾದಿತತ್ವಗಳು, ಸುಮನ=ಸಮೀಚೀನವಾದ ಮೋಕ್ಷಾಪೇಕ್ಷಿಗಳ, ಶ್ರವಣ ಮನನಾದಿ ವಿಚಾರಕ್ಕೆ ಯೋಗ್ಯವಾಗಲಾರದು ' ಧ್ಯಾನಿಸಲಿಕ್ಕೂ ಅರ್ಹವಾಗ ಲಾರದು. ಯಾಕಂದರೆ ವಿಧಿಬುದ್ಧಿ=ಕೊಡ, ವಸ್ತ್ರ, ಮಠ, ಮರ, ಮೊದಲಾದ ಇರತಕ್ಕ ವಸ್ತುಗಳ ವಿಷಯದಲ್ಲಿ, ಇರುತ್ತವೆಂಬ ಅಸ್ತಿತ್ವ ಬುದ್ಧಿಯು. ಬ್ರಹ್ಮನು ಅಸತ್ತು ಎಂದೊಪ್ಪಿ ದರೆ, ಅಸತ್=ಇಲ್ಲದಿದ್ದದು, ಸತ್=ಇರುತ್ತದೆಂಬ ವಿಧಿವಿಷಯವಾಗಲಾರದು.-ಅಸತು= ಇಲ್ಲದ್ದು (ಇದ್ದದ್ದಲ್ಲವೆಂಬ ನಿಷೇಧಕ್ಕೆ) ವಿಷಯವು ಬೆಕ್ಕಿನ ಕೋಡು, ಮುಂತಾದ ಇಲ್ಲದ

ವಸ್ತುವಿನಂತೆ ಬ್ರಹ್ಮನು ಅಸತು ಎಂದಾದರೆ, ಅದು ಬುದ್ಧಿಗೆ ಗಮನಿಸುವದೇ ?=ತೋರುವದೇ? ಇಲ್ಲದ್ದು (ಅಸತು) ಬುಧಿಗೆ ಎಂದಿಗೂ ತೋರಲಾರದು. ತೋರದ ವಸ್ತು ಧ್ಯಾನಿಸಲಿಕ್ಕೆ ಹೇಗೆ ಬಂದೀತು ? ಕಾರಣ ಧ್ಯಾನಕ್ಕೆ ಯೋಗ್ಯವಲ್ಲ. ಇಂಥ ಶೂನ್ಯ ಅಸತು ನಿರವಯುವ ಪರಬ್ರಹ್ಮವು, ಧರ್ಮಾದಿ ಮೋಕ್ಷ ಫಲಪ್ರದಕ್ಕೆ ಎಂದಿಗೂ ಆಗಲಾರದು. ಕಾರಣ ನಿನ್ನ ಇಂಥ ಅಸತ್ ಪರಬ್ರಹ್ಮನನ್ನು ಮೋಕ್ಷ ಅಪೇಕ್ಷೆಯುಳ್ಳವರೆಂದಿಗೂ ಭಜಿಸಲಾರದು

ಬ್ರಹ್ಮಾದ್ಯ ಮಿತ್ಯಾದ್ಯಶಬ್ದೇನ=ಬ್ರಹ್ಮಾದಿ ಆದಿಪದದಿಂದ ೧. ಶೂನ್ಯವಾದಿಗಳು, ೨. ವಿಜ್ಞಾನವೇ ತತ್ವವೆಂದು ಹೇಳುವ ವಿಜ್ಞಾನವಾದಿಗಳು, ೩. ಶಬ್ದದಿಂದದ್ಯೋತನ ವಾದ (ವೈಯಾಕರಣ ಪ್ರಭೇದ) ಸ್ಫೋಟವೆ ಬ್ರಹ್ಮವೆಂಬ ಸ್ಫೋಟವಾದಿ ಇವರೆಲ್ಲ ಅಸತ್ತಿನಲ್ಲೇ ಸೇರಿರುತ್ತಾರೆಂದು ಭಾವಪ್ರಕಾಶಿಕೆ.

**ಶ್ಲೋಕ ॥ ಖಪುಷ್ಪವದಖಂಡತ್ವಾ |**
**ದ್ವ್ಯತಿರಿಕ್ತಂ ನಿದರ್ಶನಮ್ ॥**
**ಪ್ರಮಾಣಾದಿವದಿತ್ಯೇವ |**
**ಮೂಹನೀಯಂ ಯಥೇಪ್ಸಿತಮ್ ॥ ೪೨ ॥**

ವಾರ್ಧಿಕ ॥ ಅರಿತುಕೋ ಆಕಾಶಪುಷ್ಪದೋಲ್ ಬ್ರಹ್ಮನುಂ ।
ನೆರೆ ಸತ್ವವಲ್ಲಖಂಡತ್ವ ಸತ್ವಾಗ್ದೆಲ್ಲ |
ಧರಮರಹಿತಾಗುವದು ಇಲ್ಲವಿದು ಅರ್ಹಲ್ಲ
ಸುವಿಚಾರಕಾಸ್ಪದವದು ॥

ಭರದಿ ಯಾವಸ್ತು ಸತ್ಯತ್ವ ಪ್ರಮಾಣದಿಂ |
ನಿರುತ ಧರ್ಮುಳ್ಳದ್ದು ಇದ್ದುದಾಗಲಿಬೇಕು |
ಇರುವ ಈ ವ್ಯತಿರೇಕ ದೃಷ್ಟಾಂತ ಸಿದ್ಧವಿದು ನಿನ
ಬ್ರಹ್ಮ ಮೋಕ್ಷ ಕೊಡನೊ || ೪೨ || ೭೫೧ ||

ಈ ವಿಷಯದಲ್ಲಿ ದೃಷ್ಟಾಂತ ಹೇಳುತ್ತಾರೆ.

ಅನ್ವಯ:— ಬ್ರಹ್ಮಾದ್ಯಂ, ಅಖಂಡತ್ವಾತ್, ಖಪುಷ್ಪವತ್, ಯಥೇಪ್ಸಿತ್ಂ ಪ್ರಮಾಣಾದಿವತ್, ವ್ಯತಿರಕ್ತಂ, ನಿದರ್ಶನಂ, ಊಹನೀಯಂ ||

ಅರ್ಥ:— ಬ್ರಹ್ಮಾದ್ಯಂ= ನಿನ್ನ ಬ್ರಹ್ಮಾದಿ ತತ್ವವು, ಅಖಂಡತ್ವಾತ್ = ನಿರ್ವಿಶೇಷವಾದುದ್ದರಿಂದ, ಖಪುಷ್ಪವತ್= ಆಕಾಶ ಪುಷ್ಪದೋಪಾದೆಯಲಿ ಶ್ರವಣಾದ್ಯರ್ಹವಾಗ-

ಲಾರದು. ಅಸ್ತಿ= ಆ ಆಕಾಶಪುಷ್ಪವು ಇರುವದೆಂತ, ಬುದ್ಧಿಗೆ ಸ್ವಭಾವತಃ ಗೋಚರವಾಗುವದೇ ವಿಚಾರಾರ್ಹವೆಂಬ ವಿಷಯದಲ್ಲಿ, ಯಥೇಪ್ಸಿತಂ = ಅಪೇಕ್ಷಾನುಸಾರವಾಗಿ, ಪ್ರಮಾಣಾದಿವತ್ = ಪ್ರಮಾಣ ಪ್ರಮೇಯಗಳಂತೆ, ವ್ಯತಿರಕ್ತಂ ನಿದರ್ಶನಂ,=ವ್ಯತಿರೇಕ ದೃಷ್ಟಾಂತ, ಊಹನೀಯಂ = ಊಹಿಸಿಕೊಳ್ಳತಕ್ಕದ್ದು.

ಭಾವಾರ್ಥ: -- ತಿಳಿದುನೋಡು, ಗಗನಕುಸುಮವೆಂಬ ಶಬ್ದದಿಂದ ತಿಳಿದ ಆಕಾಶ ಹೂವು, ಅಸ್ತಿತ್ವ ಬುದ್ಧಿಗೆ ಹೇಗೆ ವಿಷಯವಾಗುವದಿಲ್ಲವೋ ಹಾಗೆಯೆ ನಿನ್ನ ಪಕ್ಷದಲ್ಲಿ, ಬ್ರಹ್ಮಾದಿ ತತ್ವವು, ಅಖಂಡತ್ವಾತ್ = ಸತ್ವಾದಿ ಧರ್ಮರಹಿತತ್ವ ಇರುವದರಿಂದ, ಅದೇ ಎಂಬ ಬುದ್ಧಿಗೆ ವಿಷಯವಾಗಲಾರದು. ಇಲ್ಲಿ ಹೀಗೆ ಅನುಮಾನ ಪ್ರಯೋಗ ಮಾಡಬೇಕು.

೧ ವಿವಾದ ವಿಷಯೀಭೂತವಾದ ಬ್ರಹ್ಮಾದಿತತ್ವವು ಶ್ರುತ್ಯಾದಿ ವಿಷಯವಲ್ಲ. ಸತ್ವಾದಿಸರ್ವ ವಿಶೇಷದಿಂದ ರಹಿತವಾಗಿರುವದರಿಂದ, ಆಕಾಶಪುಷ್ಪದಂತೆ.

೨. ವಿವಾದವಿಷಯೀಭೂತವಾದ ಬ್ರಹ್ಮಾದಿತತ್ವವು, ವಿವೇಕಿಗಳಿಗೆ, ಶ್ರುತಿ, ಬ್ರಹ್ಮಮೀಮಾಂಸ, ತನ್ನಿರ್ಣಾಯಕ ಯುಕ್ತಿಗಳಿಂದ, ವಿಚಾರಮಾಡಿಸಿಕೊಳ್ಳಲಿಕ್ಕೆ ಯೋಗ್ಯವಾಗಲಾರದು. ಶ್ರುತ್ಯಾದಿಗಳಿಗೆ ಅವಿಷಯವಾದ್ದರಿಂದ, ಆಕಾಶಹೂವಿನಂತೆ.

೩. ವಿವಾದವಿಷಯೀಭೂತವಾದ ಬ್ರಹ್ಮಾದಿತತ್ವವು ನಿರಾಕಾರವಾಗಿರುವದರಿಂದ, ಧ್ಯಾನಮಾಡಲಿಕ್ಕೆ ಯೋಗ್ಯವಾಗಲಾರದು. ಗಗನಾರವಿಂದದತೆ.

೪. ವಿವಾದವಿಷಯೀಭೂತ ನಿನ್ನ ಬ್ರಹ್ಮಾದಿತತ್ವ ವಿಷಯಕವಾದ ಭಾವನೆಯು, ಸಂಸಾರಮೋಚಕವಾಗಲಾರದು. ಅಸದ್ವಿಷಯವಾದುದರಿಂದ, ಮೊಲದ ಕೋಡಿನ ಭಾವನೆಯಂತೆ.

೫. ವಿವಾದ ವಿಷಯವಾದ, ಬ್ರಹ್ಮಾದಿತತ್ವವು ಪುರುಷಾರ್ಥದಾಯಕವಾಗಲಾರದು. ಅಸದ್ರೂಪವಾದ್ದರಿಂದ ಅಶ್ವಶೃಂಗದಂತೆ, ಈ ಅನುಮಾನಗಳಲ್ಲಿ ಪ್ರಮಾಣಾದಿಗಳು ಸದ್ರೂಪವಾದ್ದರಿಂದ ಅಂದರೆ ಸತ್ವರೂಪಧರ್ಮದಿಂದ ವಿಶಿಷ್ಟವಾದ್ದರಿಂದ ವ್ಯತಿರೇಕ ದೃಷ್ಟಾಂತವಾಗುವವು. ಇದರಲ್ಲಿ ಯಾವ್ಯಾವುದು ಹೇಗೆ ಹೇಗೆ ಇದನ್ನು ದೃಷ್ಟಾಂತ ಮಾಡಿಕೊಳ್ಳಬೇಕೆಂಬುದು ತಮ್ಮ ಬುದ್ಧಿಯಿಂದ ವಿಚಾರ ಮಾಡಬೇಕು

ಸಾರಾಂಶವೇನೆಂರೆ ಸತ್ವಾದಿವಿಶೇಷಣ ಇದ್ದ ವಸ್ತುವೇ, ವಿಚಾರ ಮಾಡಲಿಕ್ಕೂ ಧ್ಯಾನಮಾಡಲಿಕ್ಕೂ ಯೋಗ್ಯವಾಗಿ ಫಲವನ್ನು ಕೊಡುತ್ತದೆ ಅಸತ್ವ ಇಲ್ಲದ್ದು ಬ್ರಹ್ಮ ಶೂನ್ಯಗಳು, ಆಕಾಶ ಹೂವಿನಂತೆ, ವೇದಾದಿಗಳಿಗೆ ವಿಷಯವಲ್ಲೇ ಅಲ್ಲ. ಕಾರಣ ವಿಚಾರಾರ್ಹವಲ್ಲ. ಮತ್ತು ನಿರಾಕಾರವಾದ್ದರಿಂದ ಧ್ಯೇಯವೂ ಅಲ್ಲ, ಸದ್ವಸ್ತುವೇ ವಿಚಾರಾದಿಗಳಿಗೆ ವಿಷಯವು. ಪ್ರಮಾಣದಂತೆ ಅನುಮಾನವು

ಈ ವಿಷಯವನ್ನು ಸಾಧಿಸುತ್ತದೆ ಹೇಗಂದರೆ ತಿಳಿಯತಕ್ಕ ಪ್ರಮೇಯವಿದ್ದರೆ, ಅದು ಪ್ರಮಾಣಕ್ಕೆ ವಿಷಯವಾಗುತ್ತದೆ. ಪ್ರಮೇಯವೇ ಇಲ್ಲದಿದ್ದಲ್ಲಿ, ಪ್ರಮಾಣದ ಅವಶ್ಯಕತೆಯೇ ಇಲ್ಲ ವಸ್ತುವೇ ಇಲ್ಲದಿದ್ದರೆ ಆ ವಸ್ತುವಿನ ವಿಷಯ ವಿಚಾರ ಮಾಡುವದು ಕೂಡುವದಿಲ್ಲ. ನಿರಾಕಾರ ವಸ್ತುವಿನ ಧ್ಯಾನವಂತೂ ಇಲ್ಲಿಂದಮೇಲೆ ಫಲಪ್ರದವೂ ಆಗುವದಿಲ್ಲ; ಮೋಕ್ಷ ಕೊಡಲಾರದು.

ನೆರೆ= ಚನ್ನಾಗಿ, ಭರದಿ= ತ್ವರ ನಿರುತ= ನಿತ್ಯದಲ್ಲಿ.

**ಶ್ಲೋಕ ॥ ಆಮ್ನಾಯಾನಾಮ ಮಾನತ್ವೇ ।**
**ಧರ್ಮಾದೇರ ಪ್ರಮಾಣತಾ ।**
**ಧರ್ಮಾದ್ಯಭಾವೇ ನೋ ಮಾನಂ ।**
**ಪ್ರತ್ಯಕ್ಷೈಕಪ್ರಮಾಣಿನಃ ॥ ೪೩ ॥**

**ಪಾರ್ಥಿಕ** ॥ ಆವ ಮಹದ್ಬ್ರಹ್ಮಾಖ್ಯ ವೇದವೇದಿತವೆಂಬ ।
ಏವಮಾದಿ ಸದಾಗಮಕೆ ಅಪ್ರಮಾಣವೆನೆ ॥
ಈ ವಿಧದಿ ಇಂದ್ರಿಯಗಳಿಂ ತಿಳಿಯದಾದದ್ದು ಧರ್ಮಾ
ಧರ್ಮಗಳು ಸಹ ॥

ಕೇವಲ ಪ್ರಮಾಣಯಿಲ್ಲದ್ದೆ ಆಯಿತು ನೋಡು ।
ಆವ ಚಾರ್ವಾಕನ ಪ್ರತ್ಯಕ್ಷಕ್ಕೆ ಧರ್ಮಾದ್ಯ ॥
ಭಾವ ವಿಷಯದಿ ಪ್ರಮಾಣಿಲ್ಲ ವೇದವೆ ಮುಖ್ಯ
ಸಪ್ರಮಾಣೆಂದು ಗ್ರಹಿತ ॥ ೪೩ ॥ ೮೫೨ ॥

ವೇದವೇ ಮುಖ್ಯ ಪ್ರಮಾಣ, ಮತ್ತು ವೇದಕ್ಕೆ ಅಪೌರುಷೇಯತ್ವವನ್ನು ಹೇಳುತ್ತಾರೆ.

ಹಿಂದೆ ೮ನೇ ಶ್ಲೋಕದಲ್ಲಿ ಬ್ರಹ್ಮಾಖ್ಯೋ"ವೇದ ವೇದಿತಃ ಎಂತೆಂದು ಬ್ರಹ್ಮಗೆ ವೇದವೇದ್ಯತ್ವವು ನಿರೂಪಿಸಲ್ಪಟ್ಟಿದೆ. ವೇದವೇ ಅಪ್ರಮಾಣವಾದ ಪಕ್ಷದಲ್ಲಿ, ವೇದ ವೇದ್ಯತ್ವವು ಈಶ್ವರಗೆ ಹೇಗೆ ಕೂಡುತ್ತದೆಂತ ವೇದಪ್ರಮಾಣ ವಿಷಯದಲ್ಲಿ ವಿವಾದವನ್ನು ಮಾಡತಕ್ಕಂಥಾ ಎಲ್ಲ ಪ್ರತಿವಾದಿಗಳನ್ನು ನಿರಾಕರಿಸುತ್ತಾರೆ.

ಅನ್ವಯ :— ಆಮ್ನಾಯಾನಾಂ, ಅಮಾನತ್ವೇ, ಧರ್ಮಾದೇಃ, ಅಪ್ರಮಾಣತಾ, ಧರ್ಮಾದಿ ಅಭಾವೇ, ಪ್ರತ್ಯಕ್ಷ ಏಕ, ಪ್ರಮಾಣಿನಃ, ನೋ, ಮಾನಂ,

**ಅರ್ಥ:**-- ಆಮ್ನಾಯಾನಾಂ =ವೇದಗಳಿಗೆ ಅಮಾನತ್ವೇ= ಅಪ್ರಾಣ್ಯವು ಅಂಗೀಕೃತವಾದ ಪಕ್ಷದಲ್ಲಿ, ಧರ್ಮಾದೇಃ= ಇಂದ್ರಿಯಗಳಿಂದ ತಿಳಿಯದೇ ಇದ್ದ ಅಪ್ರತ್ಯಕ್ಷ ವಸ್ತುಗಳಿಗೆ ಧರ್ಮಾಧರ್ಮಗಳಿಗೆ, ಅಪ್ರಮಾಣತಾ =ಪ್ರಮಾಣಕ್ಕೆ ಶೂನ್ಯತ್ವ ಬರುತ್ತದೆ ಧರ್ಮಾದಿ ಅಭಾವೇ= ಧರ್ಮಾದಿಗಳೇ ಇಲ್ಲವೆಂಬುವ ವಿಷಯದಲ್ಲಿ, ಪ್ರತ್ಯಕ್ಷ ಏಕಪ್ರಮಾಣಿನಃ = ಪ್ರತ್ಯಕ್ಷ ಒಂದೇ ಎಂಬ ಪ್ರಮಾಣವೆಂದೊಪ್ಪಿದವರಿಗೆ, ನೋಮಾನಂ= ಪ್ರಮಾಣವಲ್ಲ.

**ಭಾವಾರ್ಥ:**— ನಾರಾಯಣನು ಸರ್ವೋತ್ತಮನು ಗುಣಪೂರ್ಣನೂ ಸದಾಗಮಗಳಿಂದ, ವೇದ್ಯನು ಎಂದು, ಪೂರ್ವದಲ್ಲಿ ಹೇಳಿದೆ ಇಂಥ ಪರಬ್ರಹ್ಮನನ್ನು ಹೇಳತಕ್ಕ ವೇದಗಳಿಗೆ ಅಪ್ರಾಮಾಣ್ಯ ಹೇಳಿದರೆ, ಧರ್ಮವೇ ಮೊದಲಾದ ಅತೀಂದ್ರಿಯ ಪದಾರ್ಥವು ಸಿದ್ಧವಾಗದೇ ಹೋಗಬೇಕಾದೀತು. ಸರ್ವಸಮ್ಮತವಾದ ಅತೀಂದ್ರಿಯ ಪದಾರ್ಥದಲ್ಲಿ, ಪ್ರತ್ಯಕ್ಷವೂ ಪ್ರಮಾಣವಾಗಲಾರದು. ಪ್ರತ್ಯಕ್ಷ ಸಹಾಯದಿಂದ ರಹಿತವಾದ ಅನುಮಾನವಾದರೂ, ಸ್ವೇಚ್ಛಾಚಾರಿಯಾದ್ದರಿಂದ ಅತೀಂದ್ರಿಯವಸ್ತುವನ್ನು ತಿಳಿಸಲಾರದು. ಆದಕಾರಣ ಅಪೌರುಷೇಯವಾದ ವೇದವೇ ಅತೀಂದ್ರಿಯವಸ್ತು ಸಾಧಕವೆಂದು ಒಪ್ಪಲೇಬೇಕು ಆದರೆ ಧರ್ಮಾದಿಗಳನ್ನೊಪ್ಪದೇ ಇದ್ದ ಚಾರ್ವಾಕನನ್ನು ಕುರಿತು, ಆ ಧರ್ಮಾದ್ಯ ಭಾವದಲ್ಲಿ ರೂಪವಿಲ್ಲದ ಕಾರಣ ಧರ್ಮಾದ್ಯ ಭಾವದಲ್ಲಿ ಪ್ರತ್ಯಕ್ಷವೂ ಪ್ರಮಾಣವಾಗುವದಿಲ್ಲ ಪ್ರತ್ಯಕ್ಷಾತಿರಿಕ್ತವಾದ ಪ್ರಮಾಣವನ್ನು ನೀನು (ಚಾರ್ವಾಕನು) ಒಪ್ಪುವದಿಲ್ಲಾದ್ದರಿಂದ, ಧರ್ಮಾದ್ಯಭಾವ ಸಿದ್ಧಿಸಬೇಕಾದರೆ ಪ್ರಮಾಣವಿಲ್ಲೆಂತಾಗುವದು. ಧರ್ಮಾದ್ಯಭಾವದ ವಿಷಯದಲ್ಲಿ ಪ್ರಮಾಣವಿಲ್ಲವಾದರೆ ಧರ್ಮಾದಿ ವಿಷಯದಲ್ಲಿ ಪ್ರಮಾಣ ಉಂಟೆಂದು ಆಯಿತು. ಆ ಪ್ರಮಾಣವು ಆಗಮವೇ ಆಗುವದು. ಈ ರೀತಿಯಾಗಿ ವಿಚಾರಿಸಿ, ಆ ಚಾರ್ವಾಕನನ್ನು ಕುರಿತು, ಆಗಮದಿಂದಲೇ ಧರ್ಮಾದಿಗಳನ್ನು ಒಪ್ಪಿಸಬೇಕು.

**ಶ್ಲೋಕ ॥ ನ ಪೌರುಷೇಯಂ ವಚನಂ ।**
**ಪ್ರಾಮಾಣ್ಯೇನ ವಿನಿಶ್ಚಿತಮ್ ॥**
**ಪೌರುಷೇಯತ್ವತೋ ಯದ್ವ ।**
**ದ್ವಾಕ್ಯ ಮುನ್ಮತ್ತ ಭಾಷಿತಮ್ ॥ ೪೪ ॥**

ವಾರ್ಧಿಕ ॥ ಬುದ್ಧರೇ ಮೊದಲಾದ ಪುರುಷ ನಿರ್ಮಿತವಾಕ್ಯ ।
ಶುದ್ಧ ಧರ್ಮಾಧರ್ಮ ಭಾವಗಳ ನಿಶ್ಚಯದಿ ।
ಬದ್ಧ ಪ್ರಮಾಣವಾಗದು ಕೇಳು ಉನ್ಮತ್ತನಾ ವಾಕ್ಯದಂತೆ ನಿತ್ಯ॥

ಇದ್ದುದಂ ಪುರುಷನಿರ್ಮಿತ ವಾಕ್ಯನಿಜವೆಂದು ।
ಶ್ರದ್ಧೆಯಲಿ ನಂಬಲಾಗದು ಸುಧರ್ಮಾಧರ್ಮ ।
ಸಿದ್ಧಿಗೆ ಅಪೌರುಷ ಸದಾಗಮ ಪ್ರಮಾಣವಂ
ನೀನೊಪ್ಪು ಚಾರ್ವಾಕನೇ ॥ ೪೪ ॥ ೮೫೩ ॥

ಪೂರ್ವಪಕ್ಷ=ಧರ್ಮಾದಿಸಿದ್ಧಿಗೋಸ್ಕರ ವೇದಪ್ರಾಮಾಣ್ಯವನ್ನು ಯಾಕೆ ಅಂಗೀಕರಿಸಬೇಕು. ಧರ್ಮಾದಿಗಳು ವೇದದಿಂದ ಸಿದ್ಧಿಸದಿದ್ದರೂ, ಪೌರುಷೇಯ=ಪುರುಷ ಪ್ರಣೀತ ವಾಕ್ಯಗಳಿಂದ ಸಿದ್ಧವಾಗುತ್ತದೆಂತ ಚಾರ್ವಾಕನು ಶಂಕಿಸಲು ಅದಕ್ಕೆ ಉತ್ತರವನ್ನು ಹೇಳುತ್ತಾರೆ.

ಅನ್ವಯ:— ಪೌರುಷೇಯಂ, ವಚನಂ, ಪ್ರಾಮಾಣ್ಯೇನ, ನ, ವಿನಿಶ್ಚಿತಂ, (ನಭವತಿ) ಪೌರುಷೇಯತ್ವತಃ, ಉನ್ಮತ್ತ, ಭಾಷಿತಂ. ವಾಕ್ಯಂ, ಯದ್ವತ್ ॥

ಅರ್ಥ:— ಪೌರುಷೇಯಂ=ಬುದ್ಧಾದಿ ಪುರುಷರ ವಚನವು ಪ್ರಾಮಾಣ್ಯತ್ವೇನ=ಧರ್ಮಾದಿಗಳ ಸಿದ್ಧಿಗೆ ಪ್ರಮಾಣತ್ವೇನ, ವಿನಿಶ್ಚಿತಂ ನ ಭವತಿ=ನಿಶ್ಚಯ ಮಾಡಲಿಕ್ಕಾಗುವದಿಲ್ಲ. ಕುತಃ=ಯಾಕೆಂದರೆ, ಪೌರುಷೇಯತ್ವತಃ=ಪುರುಷನು ಆಡಿದ ಮಾತುಗಳಾದ ಕಾರಣ, ಉನ್ಮತ್ತ ಭಾಷಿತಂ ವಾಕ್ಯಂ ಯದ್ವತ್=ಹುಚ್ಚು ಹಿಡಿದವನ ಮಾತಿನಂತೆ.

ಭಾವಾರ್ಥ=ಬುದ್ಧನೇ ಮೊದಲಾದ ಪುರುಷರಿಂದ ನಿರ್ಮಿತ ವಾಕ್ಯ ಗ್ರಂಥವು, ಶುದ್ಧ=ನಿರ್ದೋಷ ಧರ್ಮ ಮತ್ತು ಅಧರ್ಮಗಳ ಅಭಾವ ವಿಷಯದಲ್ಲಿ ಪುರುಷ ನಿರ್ಮಿತ ಮನುಷ್ಯರಿಂದ ರಚಿಸಲ್ಪಟ್ಟ ಕಾರಣ, ಅವು ಪ್ರಮಾಣವೆಂದು ನಿರ್ಣಯ ಮಾಡಲಿಕ್ಕೆ ಆಗುವದಿಲ್ಲ. ಹೇಗಂದರೆ, ಉನ್ಮತ್ತನ=ವಿಸ್ಮೃತ, ಹುಚ್ಚುಹಿಡಿದವನ ಮಾತಿನಂತೆ. ಹುಚ್ಚನು ಹೇಳಿದ ಮಾತು ಸರ್ವಥಾ ಸತ್ಯವೆಂದು, ಶ್ರದ್ಧೆಯಲಿ=ನಂಬಿಕೆಯಿಂದ ನಿಜವಾಗಿ ನಂಬಲಿಕ್ಕಾಗುವದಿಲ್ಲ. ಕಾರಣ ಧರ್ಮಾಧರ್ಮಸಿದ್ಧಿಗೆ ಅಪೌರುಷೇಯ ಪುರುಷ ಪ್ರಣೀತವಲ್ಲದ, ನಿತ್ಯವಾಗಿರುವ ಸದಾಗಮಗಳೇ=ನಿರ್ದುಷ್ಟವಾದ ವೇದಗಳೇ ಮುಖ್ಯ ಪ್ರಮಾಣವೆಂದು, ನೀನು ಚಾರ್ವಾಕನಾದರೂ ಒಪ್ಪಲೇಬೇಕು.

**ಶ್ಲೋಕ ॥ ವಿಮತಃ ಪುರುಷೋಽಜ್ಞಃ ಸ್ಯಾತ್ ।**
**ಸ್ಯಾಚ್ಚಾ (ದ) ಸೌ ವಿಪ್ರಲಂಭಕಃ ॥**
**ಪುಂಸ್ತ್ವಾ ಚ್ಚೈತ್ರವದಿತ್ಯ ।**
**ಸ್ತಾ (ಃ) ಸ (ಸಾ) ರ್ವಜ್ಞೇ ಕೇವಲಾನುಮಾ (ಃ) ॥ ೪೫ ॥**

ವಾರ್ಧಿಕ || ನಿನ್ನ ಬುದ್ಧಾದಿಗಳ ಸರ್ವಜ್ಞ ವಿಷಯದಲಿ |
ಮುನ್ನಂ ವಿವಾದವಿರೆ ಚೈತ್ರತೆರ ಪುರುಷನಿರೆ |
ಘನ್ನ ತತ್ವಜ್ಞಾನ ರಹಿತವಂಚಕನಾಗಿ ಇರಲಿಬೇಕೆಂಬನ್ಯಾಯ ||

ಇನ್ನಿತನು ಮಾನದಿಂ ಪರವಾದಿ ಪೇಳ್ವಂಥ |
ಚನ್ನಶ್ರುತಿ ಬಲವಿರದ ಕೇವಲನುಮಾನವಿದು |
ಭಿನ್ನ ಧರ್ಮಾಧರ್ಮ ಕಸ್ಯ ಚಿತ್ಪ್ರತ್ಯಕ್ಷ ಪರಮಾಣು
ಘಟವದಸ್ತಾ || ೪೫ || ೮೫೪ ||

ಪೂರ್ವಪಕ್ಷ= ಬುದ್ಧಾದಿಗಳು ಸರ್ವಜ್ಞರಾದಕಾರಣ ಅವರ ವಚನವು ಯಾಕೆ ಅಪ್ರಮಾಣವಾಗಬೇಕು. ಅವರ ವಾಕ್ಯಕ್ಕೆ ಉನ್ಮತ್ತ ಹುಚ್ಚನ ವಾಕ್ಯವೆಂಬುವದು, ಸರ್ವಾತ್ಮನಾದೃಷ್ಟಾಂತ ಕೂಡುವದಿಲ್ಲವೆಂದರೆ ಹೇಳುತ್ತಾರೆ.

ಅನ್ವಯ:— ವಿಮತಃ ಪುರುಷಃ, ಪುಂಸ್ತ್ವಾತ್, ಚೈತ್ರವತ್, ಅಜ್ಞ, ಸ್ಯಾತ್, ಅಸೌ, ವಿಪ್ರಲಂಭಕಃ, ಇತಿ ಸಾರ್ವಜ್ಞೇ, ಕೇವಲಾನುಮಾ, ಅಸ್ತಾ,

ಅರ್ಥ:— ವಿಮತ ಪುರುಷಃ=ಸರ್ವಜ್ಞನೆಂಬ ವಿವಾದ ವಿಷಯವಾದ ಪುರುಷನು, ಪುಂಸ್ತ್ವಾತ್ ಚೈತ್ರವತ್=ಪುರುಷನಾದ್ದರಿಂದ ಚೈತ್ರನಂತೆ, ಅಜ್ಞಸ್ಯಾತ್ =ಜ್ಞಾನ ರಹಿತನಾಗಲಿ, ಅಸೌ = ಅವನು, ವಿಪ್ರಲಂಭಕಃ = ವಂಚಕನಾಗಬಹುದು. ಇತಿ ಸಾರ್ವಜ್ಞೇ =ಹೀಗೆ ಯಾವನೋ ಒಬ್ಬ ಸರ್ವಜ್ಞನೆಂಬ ವಿಷಯದಲ್ಲಿ,ಕೇವಲಾನುಮಾ = ಶ್ರುತ್ಯಾದಿ ಸಹಾಯರಹಿತಾನುಮಾನಗಳು, ಅಸ್ತಾ = ನಿರಾಕರಿಸಲ್ಪಡುತ್ತವೆ.

ಭಾವಾರ್ಥ:— ಬುದ್ಧಾದಿಗಳು ಪುರುಷರಾದ ಕಾರಣ, ಚೈತ್ರನಂತೆ, ಅಜ್ಞರು ವಂಚಕರು ಈತೆರ ಬುದ್ಧಾದಿಗಳ ಸರ್ವಜ್ಞತ್ವ ವಿಷಯದಲ್ಲಿ, ಪರಕೀಯರಿಂದ ಮಾಡಲ್ಪಟ್ಟ ಶ್ರುತ್ಯಾದಿ ಸಹಾಯರಹಿತ ಅನುಮಾನಗಳು, ಮತ್ತು ಧರ್ಮಾಧರ್ಮಗಳು ಮತ್ತು ಪರಮಾಣುಗಳು ವಸ್ತುವಾದ ಕಾರಣದಿಂದ, ಪ್ರತ್ಯಕ್ಷವಾದವುಗಳು, ಎಂಬ ಶ್ರುತ್ಯಾದಿ ಸಹಾಯರಹಿತವಾದ ಈ ಅನುಮಾನಗಳಾದರೂ ನಿರಾಕರಿಸಲ್ಪಟ್ಟವು. ಕಾರಣ ಧರ್ಮಾದಿ ವಿಷಯದಲ್ಲಿ ಅಸರ್ವಜ್ಞರಾದ ಬುದ್ಧಾದಿಗಳ ವಚನವು ಪ್ರಮಾಣವೆಂದು ಹೇಳುವದು ಸರಿಯಾದುದಲ್ಲ. ಆದ್ದರಿಂದ ಅಪೌರುಷೇಯವಾದ ವೇದವೆ ಧರ್ಮಾದಿ ವಿಷಯದಲ್ಲಿ ಪ್ರಮಾಣವೆಂದು ಹೇಳಬೇಕಾಗುವದು

ಧರ್ಮಾಧರ್ಮೌಕಸ್ಯ ಚಿತ್ಪ್ರತ್ಯಕ್ಷೌ = ಧರ್ಮಾಧರ್ಮಗಳು ಏನೋ ಒಂದು ಕಾರಣದಿಂದ ಪ್ರತ್ಯಕ್ಷವು, ಪರಮಾಣವಃ = ಜಾಲಸೂರ್ಯಮರೀಚಿಸ್ಥ

ಆರನೇ ಭಾಗಕ್ಕೆ ಷರಮಾಣು, ಕಣ್ಣಿಗೆ ತೋರದಿರುವ ಪರಮಾಣುಗಳು ಕೊಡದಂತೆ ಪ್ರತ್ಯಕ್ಷವೆಂದು ಅನ್ನುತ್ತೇವೆಂದರೆ, ನಿನ್ನ ಮತ ನಿರಸ್ತವಾದಿತು. ಬುದ್ಧರೂಪಿ ಪರಮಾತ್ಮ ನಾದರೂ ಜಿನಾದಿಗಳನ್ನು ವಂಚನೆ ಮಾಡುವ ಉದ್ದೇಶವಾಗಿರುವದು. ಈ ವಂಚಕತ್ವವು ಅನುಮಾನಗಳು ಶ್ರುತಿಸಹಾಯರಹಿತವಾದವುಗಳೇ

**ಶ್ಲೋಕ ॥ ದುಃಖಾ (ಖೀ) ಕರೋತಿ ಯದ್ದೈವಂ ।**
**ದುಃಶ್ಯಾಸ್ತ್ರೇ ಷೂಗ್ರ ಆಗ್ರಹಃ ॥**
**ದುಃಖಾ ಕರೋತಿ ಘೋರಃ ಸ್ಯಾ ।**
**ಲ್ಲೋಕೋಽತಸ್ತದ್ವತಾಂ ಧ್ರುವಃ ॥ ೪೬ ॥**

ವಾರ್ಧಿಕ ॥ ಶ್ರುತ್ಯವಿದ ದುಃಶಾಸ್ತ್ರಗಳಲಿ ಹಟವುಳ್ಳ ಉ ।
ನ್ಮತ್ತರಿಗೆ ಫಲವಿದ್ಕೆ ಕೇಳಾವಕಾರಣದಿ ।
ಸ್ತುತ್ಯ ವೇದೋಕ್ತ ಪರಬ್ರಹ್ಮನಸು ವೇದ ವೀಪರೀತು
ಪಾಸನೆ ಮಾಡ್ವರೊ ॥

ಅತ್ಯರ್ಥದುಃಖಮಯ ಶಾಶ್ವತ ಭಯಂಕರಂ ।
ನಿತ್ಯದಂ ಘೋರ ಅಂಧಃ ತಮವು ಪ್ರಾಪ್ತಿನಿಜ ।
ಮತ್ತೆ ಪುನರಾವರ್ತಿರಹಿತ ಮಹನರಕವಮು
ಜೀವೇಶ ಐಕ್ಯಪಾಸ್ಯಂ ॥ ೪೬ ॥ ೮೫೫ ॥

ಹಿಂದೆ ಹೇಳಿದ ಬುದ್ಧಾದಿ ಶಾಸ್ತ್ರಗಳಲ್ಲಿ ಆಗ್ರಹವುಳ್ಳವರಿಗೆ ಆಗುವ ಫಲವನ್ನು ಹೇಳುತ್ತಾರೆ.

ಅನ್ವಯ:— ಯತ್, ದುಃಶ್ಯಾಸ್ತ್ರೇಷು, ಉಗ್ರಃ, ಆಗ್ರಹಃ, ದೈವಂ, ದುಃಖೀ ಕರೋತಿ, ಅತಃ, ತದ್ವತಾಂ, ದುಃಖಾಕರಃ, ಅತಿಘೋರ ಲೋಕಃ, ಧ್ರುವಃ, ಸ್ಯಾತ್, ॥

ಅರ್ಥ:— ಯತ್ =ಯಾವ ಕಾರಣ, ದುಃಶ್ಯಾಸ್ತ್ರೇಷು= ವೇದವಿರುದ್ಧ ಶಾಸ್ತ್ರ ಗಳಲ್ಲಿ, ಉಗ್ರಃ ಆಗ್ರಹಃ =ಅತಿ ಧೃಢತರವಾಗಿ ಇದೇ ಪ್ರಾಮಾಣ್ಯವೆಂಬ ದುರಾಭಿಮಾನ ದಿಂದ, ॥ ದೈವಂಕ್ರೀಡಾದಿಗುಣ ವಿಶಿಷ್ಟನಾದ ಭಗವಂತನನ್ನು, ದುಃಖೀಕರೋತಿ = ವೇದಾದಿಗಳಲ್ಲಿ ಹೇಳಿದ ರೀತಿಯನ್ನು ಬಿಟ್ಟು ವಿಪರೀತವಾಗಿ ತಿಳಿಯುತ್ತಾರೊ, ಅತಃ = ಹೀಗೆ ವಿಪರೀತೋಪಾಸನೆ ಕಾರಣದಿಂದ, ತದ್ವತಾಂ =ದುಃಶಾಸ್ತ್ರದಲ್ಲಿ ಆಗ್ರಹವುಳ್ಳವರಿಗೆ,

**ದುಃಖಾಕರಃ** =ದುಃಖಿಗಳಿಗೆ ಉತ್ಪತ್ತಿ ಸ್ಥಾನಭೂತವಾದ, ಅತಿಘೋರ =ತಡೆಯಲಿಕ್ಕೆ ದುಸ್ಸಹವಾದ, ಲೋಕಃ = ಅಂಧಃತಮುಸ್ಸು, ಧ್ರುವಃ = ಶಾಶ್ವತವಾಗಿ ಸ್ಯಾತ್ = ಆಗುವದು.

**ಭಾವಾರ್ಥ:—** ಶ್ರುತ್ಯವಿದ = ವೇದಗಳಿಗೆ ಸಮ್ಮತವಾಗದ ದುಃಶಾಸ್ತ್ರಗಳಲ್ಲಿ ಹಟ = ದುರಾಭಿಮಾನಮೂಲಕ ದಾರ್ಢ್ಯವಾದ ನಂಬಿಕೆಯುಳ್ಳ ಉನ್ಮತ್ತರು = ಚಿತ್ತ, ವಿಭ್ರಮರಾದ ಹುಚ್ಚರಿಗೆ ಯಾವ ಫಲವಾಗುವದೆಂದು ಕೇಳಿರಿ, ದುರಾಭಿಮಾನದಿಂದ, ಸ್ತುತ್ಯವೇದೋಕ್ತ = ವೇದ ಪ್ರತಿಪಾದ್ಯನೂ ಸ್ತೋತ್ರಾರ್ಹನೂ ಆದ ಪರಮಾತ್ಮನು, ನಿರ್ದೋಷನು ಚಿದಾನಂದನು ಸಾಕಾರನು ಗುಣಪೂರ್ಣನೂ, ಚರಾಚರರಿಂದ ಭಿನ್ನನೂ ಎಂಬುದನ್ನು ಬಿಟ್ಟು ಇವುಗಳ ವಿರುದ್ಧವಾಗಿ, ಜೀವೇಶ ರೈಕ್ಯವೆಂಬುವ, ಉಪಾಸನೆ ಮಾಡುವವರಿಗೆ ಅತ್ಯರ್ಥಃ =ಅತಿಶಯ ದುಃಖಮಯವಾದದ್ದು, ದುಃಖಮಯ =ಮಹಾ ಭಯಂಕರ ಕಷ್ಟವನ್ನು ಕೊಡುವದು, ಪುನರಾವರ್ತಿಯಿಲ್ಲದೇ ನಿತ್ಯವಾದದ್ದು. ಅಲ್ಲಿಯ ದುಃಖಬಾಧೆಗಳನ್ನು ತಡೆಯಲಿಕ್ಕೆ ಅಸಾಧ್ಯವಾದದ್ದು ಇಂಥ ಕಠಿತಣತರವಾದ ಅಂಧಃ ತಮುಸ್ಸೆನ್ನುವ ಶಾಶ್ವಿತವಾದ ಮಹಾನರಕವೇ ಪ್ರಾಪ್ತವಾಗುತ್ತದೆ.

**ಶ್ಲೋಕ ॥ ಅಸ್ಮಾಕೇಽಪೇಕ್ಷಿತೇ ಪಕ್ಷೇ ।**
**ಮೋಕ್ಷಂ ದದ್ಯಾದಧೋಕ್ಷಜಃ ॥**
**ಯತ್ರ ಸ್ವಾನಂದಿನಃ ಸಂತಃ ।**
**ಸೇವಂತೇ ವಿಷಯಾನ್ ಬಹೂನ್ ॥ ೪೭ ॥**

ವಾರ್ಧಿಕ ॥ ಬೇಡೆಲವೊ ಖೋಡಿಯೆ ಇಂತಿದು ದುರಾಗ್ರಹವು ।
ನೋಡು ಸಚ್ಛಾಸ್ತ್ರದಲಿ ನಿರತರಿಗೆ ಸುಫಲಿದಂ ।
ಬಾಧ ನಮುಸಿದ್ಧಾಂತ ಸಪ್ರಮಾಣೆಂದಂಗಿಕೃತ ಪಕ್ಷದಲಿ ವೇದದಿಂ॥
ಈಡಿತಂ ಪ್ರತ್ಯಕ್ಷಗೋಚರ ಅಧೋಕ್ಷಜನು ।
ಬೇಡದಲೆ ಮೋಕ್ಷವನು ಕೊಡುವನಾ ಮುಕ್ತಿಯಲಿ ।
ಆಡುತಲೆ ಸಜ್ಜನರು ಸೂಕ್ಷ್ಮಸ್ವರೂಪಸುಖಮಾನಂದ
ಅನುಭವಿಪರ್ಕೈ ॥ ೪೭ ॥ ೮೫೬ ॥

ಇನ್ನು ಸಚ್ಛಾಸ್ತ್ರದಲ್ಲಿ ನಿರತರಾದವರಿಗೆ ಯಾವ ಫಲ ಉಂಟಾಗುವದೆಂದು ಹೇಳುತ್ತಾರೆ.

ಅನ್ವಯ:— ಅಸ್ಮಾಕೇ ಪಕ್ಷೇ ಅಪೇಕ್ಷಿತೇ, ಅಧೋಕ್ಷಜಃ, ಮೋಕ್ಷಂ, ದದ್ಯಾತ್, ಯತ್ರ, ಸಂತಃ ಸ್ವಾನಂದಿನಃ, ಬಹೂನ್, ವಿಷಯಾನ್, ಸೇವಂತೇ ॥

ಅರ್ಥ: ಅಸ್ಮಾಕೇ ಪಕ್ಷೇ=ನಾವು ಅಂಗೀಕಾರ ಮಾಡಿದ ಸಿದ್ಧಾಂತವು, ಅಪೇಕ್ಷಿತೆ = ಯಥಾರ್ಥವಾಗಿ ಪ್ರಮಾಣತ್ವೇನ ಗ್ರಹಿಸಿದರೆ, ಅಧೋಕ್ಷಜಂ = ಅಧಕೃತ ಅಕ್ಷಯಂ ಇಂದ್ರಿಯಜ್ಯನಜ್ಞಾನಂ = ಜಡೇಂದ್ರಿಯಗಳಿಗೆ ಪ್ರತ್ಯಕ್ಷಗೋಚರನಾಗದ, ಅಥವಾ ಜಿತೇಂದ್ರಿಯರಿಗೆ ಗೋಚರಿಸುವ ಶ್ರೀಮನ್ನಾರಾಯಣನು, ಮೋಕ್ಷಂ ದದ್ಯಾತ್ = ದುಃಖಮಿಶ್ರವಿಲ್ಲದ ಸ್ವರೂಪಾನಂದಾವಿರ್ಭಾವವಾದ ನಿತ್ಯಸುಖರೂಪ ಮೋಕ್ಷವನ್ನು ಕೊಡುವನು ಯತ್ರಸಂತಃ =ಆ ಮುಕ್ತಿಯಲ್ಲಿ ಸಜ್ಜನರು, ಸ್ವಾನಂದಿನಃ = ಸ್ವರೂಪಭೂತ ಆನಂದವುಳ್ಳವರಾಗಿ, ಬಹೂನ್ ವಿಷಯಾನ್ ಸೇವಂತೇ = ಪ್ರಕೃತಿ ಸಮ್ಬಂಧವಿಲ್ಲದ ಅಪ್ರಾಕೃತವಾದ ಅನೇಕ ಸುಖಗಳನ್ನು ಅನುಭೋಗಿಸುತ್ತಾರೆ

ಭಾವಾರ್ಥ:— ದುಃಶ್ಶಾಸ್ತ್ರ ಸೇವಿಸುವದರಿಂದ ನಿತ್ಯ ನರಕವಾಗುತ್ತದೆ. ಕಾರಣ ಎಲೋ ಖೋಡಿಯೇ=ಕೆಟ್ಟ ಮನುಜನೇ, ಹೀಗೆ ದುಃಶ್ಶಾಸ್ತ್ರಗಳಲ್ಲಿ ದುರಾಗ್ರಹವಾದ ಹಟಮಾಡಬೇಡ. ಇತ್ತನೋಡು ಸಚ್ಛಾಸ್ತ್ರವು ಬ್ರಹ್ಮನು ಜೀವರಿಂದ ಭಿನ್ನ, ತಾರತಮ್ಯ ಪಂಚಭೇದ ಸತ್ಯ, ಜಗತ್ತು ಸತ್ಯ, ತನ್ನಿಯಾಮಕನಾದ ಹರಿಯು, ಸೃಷ್ಟ್ಯಾದ್ಯಷ್ಟಕರ್ತ ದೋಷದೂರ, ಗುಣಪೂರ್ಣನೆಂದು ಯಾವ ಸಚ್ಛಾಸ್ತ್ರವಾದ ನಮ್ಮ ದ್ವೈತಸಿದ್ಧಾಂತದಲ್ಲಿ ಹೇಳುತ್ತದೊ ' ಕಾರಣಮಧ್ವಮತದ ಪರಿಮತಗಳು, ಸಪ್ತಸಮುದ್ರತನಕ ಪುಡುಕಿದರಿಲ್ಲ " ಎಂಬುದರಿಂದ ಬಾಢ =ನಿಶ್ಚಯವಾಗಿ ಈ ಸಚ್ಛಾಸ್ತ್ರ ಸಮೀಚೀನವಾದುದು ಸಪ್ರಮಾಣ ವಾದುದೆಂದು, ನಿರಭಿಮಾನದಿಂದ ನಂಬಿ ವೇದದಲ್ಲಿ ಹೇಳಿದಂತೆ ಆ ಭಗವಂತನ ಉಪಾಸನೆ ಮಾಡಿದರೆ, ಈಡಿತಂ=ಸ್ತೋತ್ರಾರ್ಹನಾದ, ಪ್ರತ್ಯಕ್ಷವಾದ ಜಡೇಂದ್ರಿಯಗಳಿಗೆ ತೋರದೇ ಇರುವ, ಕೇವಲ ಆಗಮೈಕಗಮ್ಯನಾದ ಹರಿಯನ್ನು ಯಾರು ಇಂದ್ರಿಯ ಜಯಾದಿಗಳನ್ನು ಮಾಡಿ ಸ್ವರೂಪಭೂತಜ್ಞಾನ ಚಕ್ಷುಸಿನಿಂದ ನೋಡುವರೋ ಅಂಥವರಿಗೆ ಮಾತ್ರ ಸ್ವಪ್ರಸಾದ ದಿಂದ ಅವರ ಸ್ವರೂಪ ಯೋಗ್ಯತೆಯಂತೆ ತೋರುವ, ಅಧೋಕ್ಷಜನಾದ ಪರಮಾತ್ಮನು ನಿತ್ಯಾಪರೋಕ್ಷಿಗಳಾದ ದೇವತೆಗಳಿಗೆ, ಬೇಡದಲೆ ಮುಕ್ತಿಯನ್ನು ಕೊಡುವನು ಮನು ಜಾದಿಗಳು ಸಾಧನಮಾಡಿ ಮುಕ್ತಿಯನ್ನು ಬೇಡಿದರೆ " ಸುಮ್ಮಗೀವನು ಅವರವರ ನಿಜ ಗತಿಯಾ" ಎಂಬ ವಚನಾನುಸಾರ ಮೋಕ್ಷವನ್ನು ಕೊಡುವನು. ಆ ಮೋಕ್ಷದಲ್ಲಿ ಮುಕ್ತ ರಾದ ಸಕಲ ಸಜ್ಜೀವರು, ಆಡುತಲೇ =ಶ್ರೀಹರಿಯನ್ನೇ ವಿಷಯೀಕರಿಸಿ ಅನೇಕ ವಿಹಾರ ಗಳನ್ನು ಮಾಡುತ್ತಾ, ನಿರ್ದುಃಖವಾದ ಸ್ವಸ್ವರೂಪಾನಂದಾವಿರ್ಭಾವ ಅಪ್ರಾಕೃತನಿತ್ಯ ಸುಖವನ್ನು ಅನುಭೋಗಿಸುವರು.

**ಶ್ಲೋಕ ॥ ಸ್ವವ್ಯಾಹತ್ಯಾದಿನೋ ಪೇಕ್ಷ್ಯಾ ॥**
**ಮುಕ್ತಿರ್ಯಾ ನಿರ್ವಿಶೇಷಿ(ಷ)ತಾ ॥**
**ಕದೇತ್ಯಾದ್ಯನು ಯೋಗೇಽಸ್ಯ ।**
**ವಿಶೇಷಃ ಸ್ಯಾನ್ನನೂತ್ತರೇ ॥ ೪೮ ॥**

ವಾರ್ಧಿಕ || ಮೋಕ್ಷವದು ನಿರ್ವಿಶೇಷಂ ಬ್ರಹ್ಮಭಾವವೆನೆ |
ಮೋಕ್ಷದಲಿ ಜೀವಗಾನಂದ ಅನುಭವವೆಲ್ಲಿ |
ಪಕ್ಷ ಯಿದನಂಗಿಕರಿಸಲು ನಿರ್ವಿಶೇಷಕ್ಕೆ ಭಂಗ
ಸ್ವವ್ಯಾಹತಿಯಿದು ||
ಆಕ್ಷೇಪ ಮುಕ್ತಿಯಾವಾಗೆ ಹೇಗಾಗ್ವದೆನೆ |
ಈಕ್ಷಣದಿ ನೀನೈಕ್ಯ ಜ್ಞಾನ ಪರಿಪಾಕವದು |
ಮೋಕ್ಷವೆನುತಂ ಬ್ರಹ್ಮನಿರ್ವಿಶೇಷನು ಎನೆ ಅನುಕ್ತಿ
ದೋಷವು ಬರುವುದು || ೪೮ || ೮೫೭ ||

ಮೋಕ್ಷವೆಂಥದು, ಅವರ ಸ್ವರೂಪವೇನೆನ್ನುವದನ್ನು ವರ್ಣಿಸುತ್ತಾರೆ.

ಸಚ್ಛಾಸ್ತ್ರರತರಿಗೆ ಸ್ವರೂಪಾನಂದಾವಿರ್ಭಾವ, ಮೋಕ್ಷವಾಗುತ್ತದೆ, ಎಂತ ಸಿದ್ಧಾಂತಿಗಳು ಹೇಳಲು, ಜೀವನಿಗೆ ನಿರ್ವಿಶೇಷ ಬ್ರಹ್ಮಭಾವವೇ ಮೋಕ್ಷವೆಂದು ಅದ್ವೈತಿಗಳು ಹೇಳಲಾಗಿ ನಿರ್ವಿಶೇಷ ಬ್ರಹ್ಮಭಾವವಾದರೆ ಮುಕ್ತಿಯಲ್ಲಿ, ಆನಂದಾನುಭವ ಹೇಗೆ? ಈ ಆನಂದಾನುಭವವನ್ನು ಅಂಗೀಕರಿಸಿದರೆ, ನಿರ್ವಿಶೇಷಕ್ಕೆ ಭಂಗ, ಕಾರಣ ನಿರ್ವಿಶೇಷ ಬ್ರಹ್ಮಭಾವ ಮೋಕ್ಷವಲ್ಲೆಂದು ಹೇಳುತ್ತಾರೆ.

ಅನ್ವಯ:- ನಿರ್ವಿಶೇಷತಾ, ಯಾ, ಮುಕ್ತಿಃ, ಸಾಸ್ವವ್ಯಾಹತ್ಯಾದಿ, ನಾ, ಉಪೇಕ್ಷ್ಯಾ. ಕದಾ, ಇತ್ಯಾದಿ ಅನುಯೋಗೆ ಉತ್ತರೇ (ದತ್ತೇ) ಅಸ್ಯಾಃ, ವಿಶೇಷಃ, ಸ್ಯಾತ್, ನನು, ||

ಅರ್ಥ:— ನಿರ್ವಿಶೇಷತಾ= ನಿರ್ಗತವಿಶೇಷೋ ಯಸ್ಮಾತ್ ಸಃ ನಿರ್ವಿಶೇಷಃ ತಸ್ಯ ಭಾವ ನಿರ್ವಿಶೇಷತಃ ಸರ್ವವಿಶೇಷರಹಿತಾ= ಯಾವ ಗುಣಧರ್ಮವಿಲ್ಲದ ಬ್ರಹ್ಮ ಸ್ವರೂಪವಾದ, ಯಾಮುಕ್ತಿ = ಯಾವ ಮುಕ್ತಿಯೋ, ಸಾ = ಅದು, ಸ್ವವ್ಯಾಹತ್ತ್ಯಾದಿನಾ= ಸ್ವವಚನ ವಿರೋಧ ಮೊದಲಾದ ದೂಷಣದಿಂದ ಯುಕ್ತವಾದದ್ದು ಅದರಿಂದ ಆದರ ಮಾಡತಕ್ಕದ್ದಲ್ಲ. ಸ್ವವ್ಯಾಹತದಿಂದ ದೂಷಿತವಾದದ್ದು ಹೇಗಂದರೆ, ಕದಾ ಇತ್ಯಾದಿ ಅನುಯೋಗ = ಯಾವಾಗೆ, ಹೇಗೆ ಮುಕ್ತಿ ಇತ್ಯಾದಿ ಪ್ರಶ್ನ ಮಾಡಲ್ಪಟ್ಟರೆ ಉತ್ತರೇದತ್ತೇಸತಿ = ಉತ್ತರ ಕೊಡುತ್ತ ಇರಲಿಕ್ಕೆ, ಆ ಉತ್ತರದ ಅರ್ಥವೇ, ಅಸ್ಯಾಃ ವಿಶೇಷಃ ಸ್ಯಾತ್= ಈ ಮುಕ್ತಿಗೆ ವಿಶೇಷವು ಪ್ರಾಪ್ತವಾಯಿತು. ನನು =ನಿಶ್ಚಯವು.

ಭಾವಾರ್ಥ: ಯಾವ ವಿಶೇಷವೂ ಇಲ್ಲದಿರುವ ಅದ್ವೈತನಾದ ಪರವಾದಿ ಹೇಳುವ ಬ್ರಹ್ಮಸ್ವರೂಪಲಾಭವೆಂಬುದು, ಮೋಕ್ಷವದೋ ಆ ಮೋಕ್ಷವು, ಸ್ವವ್ಯಾಹತಿ. ಅನುಕ್ತಿ ಮೊದಲಾದ, ದೋಷಗಳಿಂದ ಯುಕ್ತವಾದ ಕಾರಣ ಮುಮುಕ್ಷುಗಳು ಆ ನಿರ್ವಿಶೇಷ ಬ್ರಹ್ಮಭಾವ ಮೋಕ್ಷವನ್ನು ಬಿಡತಕ್ಕದ್ದು. ಆಪರವಾದಿಗಳಿಗೆ ಮುಕ್ತಿ ಯಾವಾಗ್ಗೆ ಹೇಗೆ ಎಂದು ಪ್ರಶ್ನ ಮಾಡಿದರೆ, ಆಗ್ಗೆ ಆ ಪರವಾದಿಯು ಪ್ರತ್ಯುತ್ತರ ಕೊಟ್ಟ ಪಕ್ಷದಲ್ಲಿ

ಅವರು ಹೇಳುವ ಮುಕ್ತಿಗೆ ವಿಶೇಷವು ಬಂದೇಬರುತ್ತದೆ. ದ್ವೈತಿಗಳಾದ ಭೇದವಾದಿಗಳು, ಅಭೇದವಾದಿಗಳಾದ ಅದ್ವೈತರನ್ನು ಕುರಿತು, ನಿಮ್ಮ ಪಕ್ಷದಲ್ಲಿ, ಜೀವನಿಗೆ ಬ್ರಹ್ಮಸ್ವರೂಪವಾದ ಮೋಕ್ಷವು ಯಾವಾಗ ಹ್ಯಾಗೆ ಆಗುತ್ತದೆಂದು ಕೇಳಿದಾಗ್ಗೆ ಐಕ್ಯಜ್ಞಾನ, ಪರಿಪಾಕ ಪೂರ್ಣವಾದ ಮೇಲೆ ಮುಕ್ತಿಯಾಗುತ್ತದೆಂದು ಉತ್ತರ ಕೊಡಲು ಆಗ ಐಕ್ಯಜ್ಞಾನದ ಉತ್ತರ ಕಾಲದ ಸಮ್ಮಂಧ ವಿಶೇಷವು, ಮುಕ್ತಿಗೆ ಬಂದೀತೆಂದು ಒಪ್ಪಿ ಬ್ರಹ್ಮನು ನಿರ್ವಿಶೇಷನೆಂದು ಹೇಳುವಾಗ. ತಮ್ಮ ಮಾತು ತಮಗೆ ವಿರುದ್ಧವಾದುದರಿಂದ, ಸ್ವವ್ಯಾಹತಿ ಎಂಬ ದೋಷ ಬರುತ್ತದೆ. ಮತ್ತು ಉತ್ತರ ಕೊಡದೆ ಮೂಕನಂತೆ ಕುಳಿತರೆ, ಮಾತಿಲ್ಲದಿರುವದೆಂಬ ದೋಷ, ಅನುಕ್ತ್ಯಾಖ್ಯ ನಿಗ್ರಹಸ್ಥಾನವು ಬಂದೊದಗುತ್ತದೆ. ಹೀಗೆ ಎರಡೂ ಕಾರಣದಿಂದ ನಿರ್ವಿಶೇಷ ಬ್ರಹ್ಮಭಾವ ಮುಕ್ತಿ ಎಂಬುದು ಕೂಡುವದಿಲ್ಲ.

**ಶ್ಲೋಕ ॥ ಅಪಿ ಬುದ್ಧ್ಯಾದಿರಹಿತಃ ।**
**ಪುರುಷಾರ್ಥೀ ನ ಸರ್ವಥಾ ॥**
**ನಿಖಿಲಾನುಭವಾಭಾವಾತ್ ।**
**ಪುತ್ತಲೀಕಾ ಪುರೋಗವತ್** ॥ ೪೯ ॥

ವಾರ್ಧಿಕ ॥ ನೋಡು ಈ ಯುಕ್ತಿ ಸಹ ಕೂಡದದು ನಿರವಯವು ।
ಬಾಧವೇ ಮುಕ್ತನಿಗೆ ಅಂತಃಕರುಣವೊದಲು ॥
ನೋಡು ವಿಂದ್ರಿಯಂಗಳುಂ ಇಲ್ಲದಿದ್ದಡೆ ಅವಗೆ
ಸರ್ವಥಾ ಪುರುಷಾರ್ಥವು ॥

ನಾಡೆ ಇರಲಿಕ್ಕಿಲ್ಲ ನಿಖಿಲಾನುಭವ ಅಭಾ ।
ವಾಢಳಿತ ಬಾಹ್ಯ ಅಭ್ಯಂತರ ಜ್ಞಾನಿರದೆ ॥
ಕೂಡುವದು ದಾರು ಪುತ್ಥಳಿಯಂತೆ ಜಡವತ್ವ
ಮುಕ್ತಗೆಲೊ ಮಾಯಿಗಳೆನೀಂ ॥ ೪೯ ॥ ೮೫೮ ॥

ನಿರ್ವಿಶೇಷ ಬ್ರಹ್ಮಭಾವವು (ಸ್ವರೂಪವು) ಮುಕ್ತಿ ಅಲ್ಲವೆಂಬ ವಿಷಯದಲ್ಲಿ ಇನ್ನೊಂದು ದೂಷಣಾಂತರವನ್ನು ಹೇಳುತ್ತಾರೆ.

ಅನ್ವಯ:- ಅಪಿ, ಬುದ್ಧ್ಯಾದಿರಹಿತಃ, ನಿಖಿಲಾನುಭವಾ ಭಾವಾತ್, ಪುತ್ತಲೀಕಾ, ಪುರೋಗವತ್, ಸರ್ವಥಾ, ಪುರುಷಾರ್ಥೀ, ನ, ॥

ಅರ್ಥ:— ಅಪಿ= ಮತ್ತು, ಮುಕ್ತಃ ಬುದ್ಧ್ಯಾದಿರಹಿತಃ ಚೇತ್= ಮುಕ್ತನು ಜ್ಞಾನರಹಿತನಾದರೆ, ನಿಖಿಲ ಅನುಭವ ಅಭಾವಾತ್ =ಸಮಸ್ತವಾದ ಅನುಭವ, (ಜ್ಞಾನಾದಿಗಳ)

**ಅಭಾವಾತ್**= ಇಲ್ಲದಿದ್ದರಿಂದ, **ಪುತ್ತಲೀಕಾ ಪುರೋಗವತ್**= ಕಟ್ಟಿಗೆ ಗೊಂಬೆ ಮೊದಲಾದುವುಗಳು ಹೇಗೋ ಅದರಂತೆ, **ಸರ್ವಥಾ**= ಯಾವ ಬಗೆಯಿಂದಲೂ, **ಪುರುಷಾರ್ಥೀ ನ**= ಪುರುಷಾರ್ಥವುಳ್ಳವನಾಗುವದಿಲ್ಲ.

ಭಾವಾರ್ಥ:— ನಿರ್ವಿಶೇಷ ಬ್ರಹ್ಮಭಾವ ನಿರವಯುವು ಖರೆಯುವೆ? ಎಲೈ ಮಾಯಾವಾದಿಗಳೆ ನೋಡಿ ನೀವು ಹೇಳಿದ ಈ ಯುಕ್ತಿ ಸಹ ಕೂಡುವದಿಲ್ಲ. ಮುಕ್ತನಿಗೆ ಮನ ಬುದ್ಧ್ಯಾದಿ, ಅಂತರಂಗದಲ್ಲಿರುವ ಇಂದ್ರಿಯಗಳು, ಕಣ್ಣು ಕಿವಿ ಮೊದಲಾದ ಬಾಹ್ಯೇಂದ್ರಿಯಗಳು ಇಲ್ಲದೇ ಇದ್ದ ಪಕ್ಷದಲ್ಲಿ, ಆ ಮುಕ್ತನಿಗೆ ಎಂದೆಂದಿಗೂ ಯಾವ ವಿಧವಾದ ಬಾಹ್ಯ ಅಂತರ ಅನುಭವವು ಇಲ್ಲದೆ, ಕಟ್ಟಿಗೆ ಮೊದಲಾದ ಜಡ ಪದಾರ್ಥಗಳಿಂದ ಮಾಡಿದ ಗೊಂಬೆಗಳಂತೆ, ಆ ಮುಕ್ತನು ಸಹಿತ, ಜಡವಸ್ತುವೇ ಯೆಂತ ಹೇಳಿದಂತಾಯಿತು. ಸರಿ ಮುಕ್ತನು ಜಡವಾದ ಮೇಲೆ, ಇಂಥ ಮುಕ್ತನನ್ನು ಸರ್ವರಿಂದಲೂ, ಬಯಸುವ ಮೋಕ್ಷವೆಂಬ ಉತ್ಕೃಷ್ಟವಾದ ಆನಂದಾನುಭವ ಹೊಂದಿದವನೆಂದು ಕರೆಯುವದು ಸರ್ವಥಾ ಕೂಡುವದಿಲ್ಲ. ಮುಕ್ತನು ಜಡನಲ್ಲ ಚಿದ್ವಸ್ತು ಕಾರಣ ಮುಕ್ತನಿಗೆ ಸ್ವರೂಪ ಸುಖ ಅನುಭವವುಂಟು. (ವೈಶೇಷಕನು ಸಹ ಮುಕ್ತರಿಗೆ ಬುದ್ಧ್ಯಾದಿ ರಾಹಿತ್ಯವನ್ನಂಗೀಕರಿಸುವದರಿಂದ ಆ ವೈಶೇಷಿಕನ ಮುಕ್ತಿಯು ಸಹ ನಿರಾಕರಿಸಲ್ಪಟ್ಟಿತು.)

**ಭಾಢವೆ?**= ಸತ್ಯವೆ **ನೋಡುವಿಂದ್ರಿಯಗಳು**=ಕಣ್ಣು ಮೊದಲಾದವು, **ನಾಡೆ** = ಚನ್ನಾಗಿ, ನಿಖಿಲಾನುಭವಾಭಾವ= ಎಲ್ಲ ಅನುಭವ ಜ್ಞಾನವು ಇಲ್ಲದ್ದರಿಂದ, ಆಡಳಿತ= ಸ್ಥಿತಿಯು (ಆಳಿಕೆಯು) ದಾರು= ಕಟ್ಟಿಗೆ, ಪುಥ್ಥಳಿ =ಗೊಂಬೆ. ಸಾರಾಂಶ, ಬುದ್ಧ್ಯಾದಿ ರಹಿತನಾದ ಮುಕ್ತನು ಪುರುಷಾರ್ಥ ಉಳ್ಳವನಾಗಲಾರನು. ಬುದ್ಧ್ಯಾದಿರಹಿತನಾದ ಮೇಲೆಬಾಹ್ಯಾಂತರ, ಜ್ಞಾನವಿಲ್ಲದೇ ದಾರುಮಯಗೊಂಬೆಯಂತೆ ಅವಸ್ಥೆಯು ಪ್ರಾಪ್ತವಾಗುವದು. ಕಾರಣ ಇಂಥ ನಿರ್ವಿಶೇಷವಾದ ಮುಕ್ತಿಯನ್ನು ಹೇಳಕೂಡದು.

**ಶ್ಲೋಕ ॥ ಜ್ಞಾನಪ್ರಯತ್ನವಾಂಛಾವಾ ।**
**ನೀಶೋ ನ ಹ್ಯಶುಭಂ ಭ (ವ್ರ) ಜೇತ್ ॥**
**ಸ್ವಸಾಮರ್ಥ್ಯೇನ ತೇನೈವ ।**
**ತಂ ಚ ಕುರ್ಯಾತ್ಸ ತಾದೃಶಮ್ ॥ ೫೦ ॥**

ವಾರ್ಧಿಕ ॥ ಜ್ಞಾನಪ್ರಯತ್ನೇಚ್ಛೆಯುಳ್ಳೀಶ ದುಃಖವಂ ।
ತಾನುಂ ಸ್ವಸಾಮರ್ಥ್ಯದಿಂದ ಪೊಂದುವದಿಲ್ಲ ।
ಮೇಣು ಸುಪ್ರಸಿದ್ಧ ವಿಲ್ಲದೊಡೆ ಈಶ್ವರ-
ನೆಂಬುದಕ್ಕೆ ವ್ಯಾಹತಿ ಬರುವಷ್ಟೆ ॥

ಜಾನೀಶ ಧಾತುವಿಂ ಈಶ್ವರನ ಶಬ್ದವದು |
ಸಾನುರಾಗದ ಸುಸೋಪಾಸಕಂ ಭಕ್ತನುಂ ।
ಜ್ಞಾನಾದಿ ಗುಣವಂತನಂ ಅಶುಭ ಭೋಗ ವರ್ಜಿತನ
ಮಾಡ್ವಂಸ್ವಸದೃಶ || ೫೦ || ೬೫೯ ||

ಸಾರೂಪ್ಯ = ಈಶ್ವರನ ಸಮಾನರೂಪ ಮಾತ್ರ ಹೊಂದಿದ ಮುಕ್ತನಿಗೆ ಬುದ್ಧ್ಯಾದಿ ರಾಹಿತ್ಯವು ಯುಕ್ತಿ ವಿರುದ್ಧವೆಂದು ಹೇಳುತ್ತಾರೆ.

ಅನ್ವಯ:- ಜ್ಞಾನಪ್ರಯತ್ನ ವಾಂಛಾವಾನ್, ಈಶ, ಸ್ವಸಾಮರ್ಥ್ಯೇನೈವ, ಅಶುಭಂ, ನವೃಜೇತ್, ಹಿ, ಸಃ, ತೇನೈವವಾ, ತಂಚ. ತಾದೃಶಂ, ಕುರ್ಯಾತ್ ||

ಅರ್ಥ:— ಜ್ಞಾನಪ್ರಯತ್ನ ವಾಂಛಾವಾನ್ ಈಶಃ= ಜ್ಞಾನಪ್ರಯತ್ನ ಇಚ್ಛಾ ಪೂರ್ಣನಾದ ನಾರಾಯಣನು, ಸ್ವಸಾಮರ್ಥ್ಯೇನ= ಸ್ವಸಾಮರ್ಥ್ಯದಿಂದ, ಅಶುಭಂ ನವೃಜೇತ್ = ದುಃಖವನ್ನು ಹೊಂದುವದಿಲ್ಲ, ಹಿ= ಇದು ಪ್ರಸಿದ್ಧ, ಸಃ= ಆ ಈಶ್ವರನು ತೇನೈವ= ಅದೇ ಸ್ವಸಾಮರ್ಥ್ಯದಿಂದ, ತಂಚ= ತನ್ನ ಉಪಾಸಕವನ್ನು ಕೂಡಾ, ತಾದೃಶಂ ಕುರ್ಯಾತ್ = ಅದರಂತೆ ದುಃಖರಹಿತನನ್ನಾಗಿ ಮಾಡಿ, ಜ್ಞಾನಾನಂದ ಗುಣವುಳ್ಳವನನ್ನು ಮಾಡುವನು, ಅಂದರೆ ಸಾರೂಪ್ಯ ಮುಕ್ತಿಯನ್ನು ಕೊಡುವನು.

ಭಾವಾರ್ಥ:— ಜ್ಞಾನೇಚ್ಛಾ ಕ್ರೀಯಾ, ಈ ಮೂರು ಶಕ್ತಿ, ಜ್ಞಾನ= ತಿಳುವಳಿಕೆ, ಕ್ರೀಯಾ= ಪ್ರಯತ್ನ ಯಿಚ್ಛಾ= ಅಪೇಕ್ಷ ಈ ಮೂರು ಸ್ವರೂಪ ಶಕ್ತಿಯುಳ್ಳ ಈಶ= ನಾರಾಯಣನು, ತಾನು ತನ್ನ ಸಾಮರ್ಥ್ಯದಿಂದಲೇ, ದುಃಖವನ್ನು ಹೊಂದುವದಿಲ್ಲ. ಮೇಣು=ಮೇಲಾಗಿ ಮತ್ತು ' ಈಶಸ್ತಾವದ್ದುಃಖನಭುಂಕ್ತ ಇತಿ, ಪ್ರಸಿದ್ಧಂ ' ಶುಭಂಪಿಬತಿ ಹರೇರ್ನಿತ್ಯಂ ನಾಶುಭಂಹರಿಃನಃಪಿಬೇತ್' ಎಂಬ ವಚನಗಳಿಂದಲ್ಲದೇ ಈಶ್ವರನು ಸ್ವತಂತ್ರನು ಈಶಃ= ಪ್ರಭು, ಸಮರ್ಥ, ಒಡೆಯನೆಂಬುದು ಜಾನ್= ತಿಳಿ ಈಶ್ವರ= ಈ ಶಬ್ದವು, ಈಶ=ಧಾತುವಿನಿಂದ ಉತ್ಪತ್ತಿ ಕಾರಣ ಸ್ವತಂತ್ರನಾದ ಈಶ್ವರನು ತನ್ನ ಸಾಮರ್ಥ್ಯದಿಂದಲೇ ಅಮಂಗಲವಾದ ದುಃಖವನ್ನು ಬಿಡುವನು. ಸ್ವಾಖ್ಯರಸವಿಭಾಗ ವಾದ ತನ್ನ ಮಂಗಳರೂಪ ಸುಖವನ್ನೇ ಅನುಭವಿಸುವನು. ಇಲ್ಲದಿದ್ದರೆ ಈಶ್ವರನೆಂಬ ಶಬ್ದಾಕ್ಕೆ ವ್ಯಾಹತಿ= ನಿರರ್ಥಕತ್ವವಷ್ಟೆ? ಸ್ವತಂತ್ರನಾದ ಈಶ್ವರನು, ತನ್ನ ಸಾಮರ್ಥ್ಯ ದಿಂದಲೇ ಆತ್ಯಾದರದಿಂದ ತನ್ನನ್ನು ಭಜಿಸುವ ಸ್ವರೂಪಜ್ಞಾನಪ್ರಯತ್ನ ಇಚ್ಛಾವಂತ ಜೀವರನು ಅಶುಭಭೋಗ= ದುಃಖ ಮೊದಲಾದ ಅನುಭವದಿಂದ ರಹಿತನನ್ನಾಗಿ ಮಾಡಿ, ಜ್ಞಾನಾನಂದಾದಿಗುಣಗಳುಳ್ಳ, ಸ್ವಸದೃಶ= ತನ್ನಂತೆ ರೂಪವುಳ್ಳ ಸಾರುಪ್ಯ ಮುಕ್ತಿಯನ್ನು ಕೊಡುತ್ತಾನೆ. ಕಾರಣ ಮುಕ್ತರಿಗೆ ಬುದ್ಧ್ಯಾದಿ ಇಂದ್ರಿಯಗಳಿಲ್ಲವೆಂಬುದು ಯುಕ್ತಿ ವಿರುದ್ಧವಾದದ್ದು.

( " ನೇಷ್ವಶ್ಚೀತ್, ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ಕಾಮಸ್ಯಯತ್ರಾಪ್ತಾಃ ಕಾಮಸ್ತತ್ರಮಾಮೃತಂ ಕೃಧೀತಿ ವೇದೋಕ್ತಿಃ || )

" ವಿಜ್ಞಾನೇತ್ಯಾದಿನಾ ಚರಮೇವ, ತಂಚ-ತಾದೃಶಮೇವ ಕುರ್ಯಾತ್ । ಜೀವ ಜ್ಞಾನಪ್ರಯುಕ್ತವಾಂಛಾವಂತ ಮೇವಾಶುಭೋಗವನ್ ಭುಂಜಾನಂ, ಕುರ್ಯಾದೀಶ್ವರಃ

ಎಂದು ಭಾವಪ್ರಕಾಶಕೆಯ ಪ್ರಮಾಣಗಳು ಮೇಲಿನ ಅರ್ಥವನ್ನೇ ವಿಶದ ಕರಿಸುತ್ತವೆ

**ಶ್ಲೋಕ ॥ ದುಃಖವ್ಯಾಪ್ತಂ ಸುಖಂ ಬದ್ಧೇ ।**
**ದೃಷ್ಟ್ವಾ ಮುಕ್ತೇರ್ನಿ (ಕ್ತೇ ನಿ)ರಸ್ಯತಾಂ ॥**
**ಸ್ವರೂಪಂ ಚ ನಿರಸ್ಯೇತ ।**
**ಶೂನ್ಯವಾದೀ ತದಾ ಭವೇತ್ ॥ ೫೧**

ವಾರ್ಧಿಕ ॥ ಸಂಸಾರ ಬಂಧನಕ್ಕೊಳಗಾದ ಜೀವನಲಿ ।
ಸಂಶ್ರಿತಂ ಸುಖವಿರಲು ದುಃಖವಿರುವನ್ಯಾಯ ||
ಸಂಸಾರದಿಂ ಮುಕ್ತಿ ಹೊಂದಿದವನಲ್ಲಿ ಸಹ ದುಃಖ
ವಿಲ್ಲೆಂದು **ಸುಖದಾ** ||
ಅಂಶವಿರದೆಂದು ಸುಖವನು ನಿರಾಕರಿಪ ಮಹ |
ಭ್ರಂಶ ವಾದಿಯೆ ಜೀವನಸ್ವರೂಪಿರದಾಯ್ತು ||
ಹಂಸ ಮುಕ್ತನಿಗೆ ಶೂನ್ಯವು ಪೇಳಿದೆಲೊ ಮಾಯಿ
ನೀ ಶೂನ್ಯವಾದಿಯೆ ನಿಜ || ೫೧ || ೮೬೦

ಮುಕ್ತನು ಸುಖಿಯಾದರೆ, ಆ ಮುಕ್ತನಲ್ಲಿ ದುಃಖವೂ ಇರಬೇಕು. ಈ ದುಃ ರೂಪವಾದ ಬಾಧೆಯ ಶಂಕೆಯನ್ನು ನಿರಾಕರಿಸುತ್ತಾರೆ.

**ಅನ್ವಯ:**— ಬದ್ಧೇ ಸುಖಂ, ದುಃಖ ವ್ಯಾಪ್ತಂ, ದೃಷ್ಟ್ವಾ, ಮುಕ್ತೇ, (ಸುಖಂ ನಿರಸ್ಯತಾ= ಸ್ವರೂಪಂ, ಚ, ನಿರಸ್ಯೇತ್, ತದಾ, ಶೂನ್ಯವಾದೀ ಭವೇತ್ ||

**ಅರ್ಥ:**— ಬದ್ಧೇಸುಖಂ=ಸಂಸಾರವಲ್ಲಿನ ಜೀವನಲ್ಲಿ, ಸುಖವು ದುಃಖವ್ಯಾಪ್ತ ದೃಷ್ಟ್ವಾ= ನಿಯಮೇನ ದುಃಖದಿಂದ ಕೂಡಿರುವನದ್ನು ನೋಡಿ, ಮುಕ್ತೇ (ಸುಖಂ)= ಸಂಸಾರದಿಂದ ಬಿಡುಗಡೆಹೊಂದಿದ ಮುಕ್ತನಲ್ಲಿ, ನಿರಸ್ಯತಾ =ದುಃಖ ಬರುವದೆಂಬ ಭಯ ದಿಂದ, ಸುಖವನ್ನು ನಿರಾಕರಿಸತಕ್ಕ ವಾದಿಯಿಂದ, ಸ್ವರೂಪಂಚ= ಸ್ವರೂಪವಾದರೂ ನಿರಸ್ಯೇತ್=ನಿರಾಕರಿಸಲ್ಪಡಲಿ, ತದಾ =ಆ ಕಾಲದಲ್ಲಿ ಅವನು, ಶೂನ್ಯವಾದೀ ಭವೇತ್: ಶೂನ್ಯವಾದಿಯೇ ಆಗುವನು.

" ಸ್ವರೂಪಂಚ ಬದ್ಧೇ ದುಃಖ ವ್ಯಾಪ್ತಿದೃಷ್ಟಮ್ । ತಥಾ
ಚಾಯಂ ಪ್ರಯೋಗಃ ॥ ವಿಮತೋ ಮುಕ್ತಃ ಸ್ವರೂಪ ಶೂನ್ಯೋ
ದುಃಖರಹಿತತ್ವಾತ್, ಯಃ ಸ್ವರೂಪ ಶೂನ್ಯೋ ನಭವತಿ, ಸಃ ದುಃಖ
ರಹಿತೋನ ಭವತಿ ಯಥಾ ಸಂಸಾರೀತ್ಯಾದಿ ಪ್ರಸಂಗಃ " ॥

ಹೀಗೆ ಭಾವಪ್ರಕಾಶಿಕೆಯಲ್ಲಿ ಹೇಳಿದ್ದಾರೆ.

ಭಾವಾರ್ಥ:— ಸಂಸಾರದಲ್ಲಿ ಬದ್ಧರಾದ ಜೀವರಲ್ಲಿ ಸಂಶ್ರಿತಂ = ಆಶ್ರಯ ಮಾಡಿದ ಸುಖದುಃಖಗಳು, ಮಿಶ್ರವಾಗಿರುವದರಿಂದ ಸುಖವಿದ್ದರೆ ದುಃಖವೂ ಇರಲಿಕ್ಕೆ ಬೇಕು ಈನುಮಾನದಿಂದ, ಈ ಸಂಸಾರವಾದ ಧುಃಖನಿವೃತ್ತಿಯನ್ನು ಹೊಂದಿ ಆನಂದಾನುಭವಿಪ ಮುಕ್ತನಾದ ಜೀವನಲ್ಲಿ ಈಷದಪಿದುಃಖಿಲ್ಲವೆಂಬಕಾರಣ ಸುಖದ ಅಂಶವು ಲೇಶವಾದರೂ ಇಲ್ಲೆಂದು, ಸುಖವನ್ನು ನಿರಾಕರಣಮಾಡುವ, ಭ್ರಂಶ =ಯುಕ್ತಿ ತಿಳಿಯದೇ ಮಾತಿನಲ್ಲಿ ಬೀಳುವ ವಾದಿಗಳೇ ಹೀಗೆಂದರೆ ಜೀವನು, ಸ್ವರೂಪದಿಂದಲೇ ಇರದಂತಾಯಿತು. ಮುಕ್ತನು ಚೇತನನಾಗಿ ದುಃಖರಹಿತನಾದರೆ, ಸ್ವರೂಪಶೂನ್ಯನಾಗಲಿ, ವ್ಯತಿರೇಕದೃಷ್ಟಾಂತದಿಂದ ಸಂಸಾರಿಯಂತೆ, ಈರೀತಿ ಮುಕ್ತನು ಸ್ವರೂಪರಹಿತನಾದರೆ ಹಂಸ =ಶುದ್ಧ, ನಿರ್ದುಷ್ಟನಾದ ಮುಕ್ತನಿಗೆ, ನೀನು ಶೂನ್ಯತ್ವ ಹೇಳಿದಿ ಕಾರಣ ನೀನು ಶೂನ್ಯವಾದಿಯೇ ಆಗಬೇಕಾದಿತು. ನಿನಗೂ ಶೂನ್ಯವಾದಿಗೂ ಏನು ಭೇದವಿಲ್ಲ.

**ಶ್ಲೋಕ ॥ ನನು ವಿಪ್ರತಿಪನ್ನಃ ಸ್ಯಾ ।**
**ದೂರ್ಮಿಮಾನ್ ದೇಹವತ್ವತಃ ॥**
**ಚೈತ್ರೋ ಯಥೇತ್ಯುಪಾಧಿಃ ಸ್ಯಾ ।**
**ತ್ತ (ದ) ತ್ರ ಚಾಶುದ್ಧದೇಹಿತಾ ॥ ೫೨ ॥**

ವಾರ್ಧಿಕ ॥ ಭರದಿ ಮುಕ್ತಂಗೆ ಬುದ್ಧ್ಯಾದಿ ಇಂದ್ರಿಯಗಳುಂ ।
ಇರುವದೆಂದಂಗಿಕರಿಸಲು ಅರೂಪಗೆ ರೂಪ ॥
ವಿರುವುದು ವಿವಾದುದಂ ಮುಕ್ತ ಜೀವನು ಸಹಿತ
ಸಂಸೃತಿಯ ಚೈತ್ರ ತೆರದಿ ॥

ಧರ ದೇಹಿನಾದುದಕೆ ಆರೂರ್ಮಿ ಉಳ್ಳನಾ ।
ಗಿರಲಿ ಎನೆ ಮಾಯಿ ಪಾಕೃತ ಶರೀರಕೆ ನಿಜ ॥
ಚರಿಪ ಊರ್ಮಿಗಳುಂಟು ಮುಕ್ತನ ಪ್ರಾಕೃತ
ಶರೀರಕಿದು ಕೂಡದೆಂದು ॥ ೫೨ ॥ ೮೬೧ ॥

ಈ ಪ್ರಕಾರವಾಗಿ ಮುಕ್ತನಿಗೆ ಜ್ಞಾನಾನಂದಾದಿ ಸಾಧನಮಾಡಿ ಮುಕ್ತನಿಗೆ ಚಿದ್ದೇಹವಾದ ಸ್ವರೂಪ ದೇಹವಿರುವದೆಂದು ಈಗ ಸಾಧನಮಾಡುತ್ತಾರೆ.

ಮತ್ತು ಮುಕ್ತನಿಗೆ ದೇಹಭಾವ ಇದ್ದರೆ, ಬುದ್ಧ್ಯಾದಿ ಇಂದ್ರಿಯುಳು ಇರಲು ದುರ್ಘಟವು, ಸಾಧ್ಯವಿಲ್ಲವೆಂತ ವೈಶೇಷಿಕ ಮತರೀತ್ಯಾ ಶಂಕಿಸಿ ಉತ್ತರವನ್ನು ಕೊಡುತ್ತಾರೆ.

ಅನ್ವಯ:— ನನು, ವಿಪ್ರತಿಪನ್ನಃ, ದೇಹವತ್ವತಃ, ಊರ್ಮಿಮಾನ್, ಸ್ಯಾತ್ ಯಥಾ, ಚೈತ್ರಃ, ಇತಿ, ಅತ್ರ, ಚ, ಅಶುದ್ಧ, ದೇಹಿತಾ, ಉಪಾಧಿ, ಸ್ಯಾತ್ ॥

ಅರ್ಥ:— ನನು, =ಹಾಗಾದರೆ ಒಂದು ಆಕ್ಷೇಪವೇನಂದರೆ, ವಿಪ್ರತಿಪನ್ನಃ =ಮುಕ್ತಿವುಳ್ಳವನೋ ಅಲ್ಲವೋ ಎಂಬ ವಿವಾದಕ್ಕೆ ವಿಷಯನಾದ ಮುಕ್ತನು ದೇಹವತ್ವತಃ =ದೇಹವುಳ್ಳವನಾಗಿರುವದರಿಂದ, ಊರ್ಮಿಮಾನ್‌ಸ್ಯಾತ್ =ಜನನಮರಣಾದಿ ತರಂಗಗಳುಳ್ಳವನಾಗುವನು. ಯಥಾಚೈತ್ರ ಇತಿಃ=ದೃಷ್ಟಾಂತವೇನಂದರೆ, ಚೈತ್ರನೆಂಬ ಒಬ್ಬ ಪುರುಷನಂತೆ, ಹೀಗೆ ಯುಕ್ತಿ ಹೇಳಿದರೆ, ಅತ್ರಚ =ಈ ಚೈತ್ರನಲ್ಲಿ ಷಡೂರ್ಮಿಗಳಿರಲು, ಅಶುದ್ಧ ದೇಹಿತಾ ಉಪಾಧಿ = ಅಶುದ್ಧವಾದ ಪ್ರಾಕೃತದೇಹಉಂಟೆಂಬ ಕಾರಣ, ಉಪಾಧಿ ಸ್ಯಾತ್ =ಪ್ರಯೋಜಕವು ಆಗುತ್ತದೆ.

ಭಾವಾರ್ಥ:— ಮುಕ್ತನಿಗೆ ಬುದ್ಧ್ಯಾದಿ ಇಂದ್ರಿಯಗಳುಂಟೆಂದು, ಆ ಬುದ್ಧ್ಯಾದಿ ಇಂದ್ರಿಯಗಳಿಗೆ ಆಶ್ರಯವಾದ ದೇಹವನ್ನಾದರೂ ಒಪ್ಪಬೇಕಾಗುವದು ದೇಹವಿರುವದರಿಂದ ಷಡೂರ್ಮಿಗಳು ಮುಕ್ತನಿಗೆ ಬರುವವು. ಷಡೂರ್ಮಿಗಳು ಬಂದರೆ ಮುಕ್ತತ್ವವು ಕೂಡುವದಿಲ್ಲ. ಕಾರಣ ಮುಕ್ತನಿಗೆ ಷಡೂರ್ಮಿ ಪರಿಹಾರಗೋಸುಗ ದೇಹಾಭಾವವನ್ನು ಅಂಗೀಕಾರ ಮಾಡಬೇಕು. ದೇಹಾಭಾವ ಹೇಳಿದರೆ ಬುದ್ಧ್ಯಾದಿಮತ್ವವು ನೀವು ಹೇಳಿದ್ದು ಕೂಡುವದಿಲ್ಲವೆಂದು ವೈಶೇಷಿಕರು ಅನ್ನುತ್ತಾರೆ. ಕಾರಣ ಅವರ ಅನುಮಾನವನ್ನು ದೂಷಿಸುತ್ತಾರೆ.

ಉಪಾಧಿರಿತಿ =ಅಶುದ್ಧ ದೇಹವಾದ ಪ್ರಾಕೃತ ದೇಹವಿದ್ದಲ್ಲಿ ಷಡೂರ್ಮಿಗಳು ಇರಬೇಕಲ್ಲದೇ ಮುಕ್ತರಿಗೆ ಅಪ್ರಾಕೃತ ದೇಹವಿದ್ದಲ್ಲಿ ಆರು ಊರ್ಮಿಗಳು ಇರಬೇಕಾಗಿಲ್ಲ ಮುಕ್ತರಿಗೆ ಅಪ್ರಾಕೃತವಾದ ಶುದ್ಧ ಸ್ವರೂಪ ದೇಹವಿದೆ. ಉಪಾಧಿ ನಿಯಮದಿಂ ಸಾಧ್ಯದೊಡನೆಯಿದ್ದು, ಕ್ವಚಿತ್ ಸಾಧನದೊಡನೆ ಇಲ್ಲದಿರುವದು. ಷಡೂರ್ಮಿಯೇ = ಸಾಧ್ಯ, ದೇಹವೇ=ಸಾಧನ, ಅಶುದ್ಧವಾದ ಪ್ರಾಕೃತ ದೇಹವೇ =ಉಪಾಧಿ, ಷಡೂರ್ಮಿಗಳಿದ್ದಲ್ಲಿ ಅಶುದ್ಧ ದೇಹವಿದೆ. ಅಶುದ್ಧ ಜಡ ದೇಹವಿದ್ದಲ್ಲಿ ಷಡೂರ್ಮಿಗಳಿವೆಂ ಸಾಧಿಸಬಹುದಲ್ಲದೇ ಶುದ್ಧವಾದ ಅಪ್ರಾಕೃತ ಚಿದಾನಂದ ದೇಹವಿದ್ದಲ್ಲಿ ಈ ಶುದ್ಧ ದೇಹವಿದೆಂದು ಷಡೂರ್ಮಿಗಳನ್ನು ಸಾಧಿಸಲು ಸಾಧ್ಯವಿಲ್ಲ. ಯಾವನಲ್ಲಿ ಊರ್ಮಿತ್ವ ಸಾಧಮಾಡುವಿರೊ, ಆ ಪಕ್ಷನಾದ ಮುಕ್ತನಲ್ಲಿ ಅಶುದ್ಧ ದೇಹತ್ವಯಿಲ್ಲ ಆದ್ದರಿಂದ ಉಪಾಧಿಯಿಲ್ಲದ ಕಾರಣ, ಸ್ವವ್ಯಾಪ್ಯವಾದ ಷಡೂರ್ಮಿತ್ವವೂ ಇಲ್ಲ. " ವಿಮತೋ ಮುಕ್

ಘೂರ್ಮಿವಾನ್ ಭವತಿ, ಅಶುದ್ಧದೇಹರಹಿತತ್ವಾತ್ ಈಶ್ವರವದಿತಿ" ವಿವಾದ ವಿಷಯವಾದ, ಮುಕ್ತನು ಷಡೂರ್ಮಿ ಉಳ್ಳವನಲ್ಲ. ಅಶುದ್ಧದೇಹರಹಿತನಾದದ್ದರಿಂದ ಈಶ್ವರನಂತೆ, ಈ ಪ್ರಕಾರ ದೇಹವತ್ವ ಅನುಮಾನಕ್ಕೆ ಸೋಪಾಧಿಕತ್ವ ಮೂಲಕ, ದುಷ್ಟತ್ವ ಬರುವರದರಿಂದ, ಮುಕ್ತನಿಗೆ ಷಡೂರ್ಮಿತ್ವ ಸಾಧ್ಯ ಸಿದ್ಧಿಯಾಗಲಾರದು.

ಷಡೂರ್ಮಿಗಳು ಯಾವಂದರೆ,

**ಭಾಗವತದಲ್ಲಿ,** ೧. ಅಸ್ತಿ, ೨. ಜಾಯತೇ, ೩. ವರ್ಧತೇ, **೪. ಕ್ಷೀಯತೇ,** ೫. ಹ್ರಸತೇ, ೬. ನಶ್ಯತೇ.

**ಭಾಗವತ ಸಾರೋದ್ಧಾರದಲ್ಲಿ,** ೧. ಅಶನ, ೨. ಪಿಪಾಸ, ೩. ರಾಗ, ೪. ದ್ವೇಷ **೫. ಶೋಕ, ೬.** ಮೋಹ.

**ಶ್ಲೋಕ ॥ ಅನೈಕಾಂತಿಕತಾ ಹೇತೋಃ ।**
**ದೇಹವತ್ವಾದಧೀಶಿತುಃ ॥**
**ಸೋಽದೇಹಶ್ಚೇದನಿಚ್ಛಾದಿ ।**
**ಭವೇಚ್ಛಶವಿಷಾಣವತ್ ॥ ೫೩ ॥**

ವಾರ್ಧಿಕ ॥ ಮುಕ್ತಂಗೆ ದೇಹವಿದ್ದುದರಿಂ ಷಡೂರ್ಮಿ ಏನೆ ।
ವ್ಯಕ್ತ ವ್ಯಭಿಚಾರದೋಷವು ಬರುವಧೇಗೆನಲು ।
ಶಕ್ತನೀಶಗೆ ದೇಹವಿದೆ ಷಡೂರ್ಮಿಗಳಿಲ್ಲವೆನಲು
ಸಾಧ್ಯಾಭಾವವು ॥

ಯುಕ್ತದೇಹನು ಅಲ್ಲ ಈಶನೆನೆ ಜ್ಞಾನೇಚ್ಛ ।
ತ್ಯಕ್ತ ಗುಣನಾಗಬೇಕಾಯಿತ್ತೆ ಶಶಿಶೃಂಗ ॥
ಉಕ್ತ ತೆರನೀಶಸ್ವರೂಪದಿಂದಲೆ ಇರನು ।
ನಿನಗಸಮ್ಮತಿಯು ಮಾಯಿ ॥ ೫೩ ॥ ೮೬೨ ॥

ಮುಕ್ತನಿಗೆ ದೇಹವತ್ವವು ಇರುವ ಕಾರಣ ಷಡೂರ್ಮಿಗಳಿದ್ದೇ ಇರಬೇಕೆಂದು ಅದ್ವೈತಿಯು ಶಂಕಿಸಿದರೆ, ಅದಕ್ಕೆ ದೂಷಣಾಂತರವನ್ನು ಹೇಳುತ್ತಾರೆ.

ಅನ್ವಯ:— ಅಧೀಶಿತು, ದೇಹವತ್ವಾತ್, ಹೇತೋಃ, ಅನೇಕಾಂತಿಕತಾ ಸ್ಯಾತ್, ಃ ಅದೇಹ:, ಚ್ಛೆತ್, ಶಶಿವಿಷಾಣವತ್, ಅನಿಚ್ಛಾದಿಃ ಭವೇತ್, ॥

**ಅರ್ಥ:—** ಅಧಿಶಿತುಃ = ಸರ್ವೇಶ್ವರನಿಗೆ, ದೇಹವತ್ವಾತ್ = **ದೇಹವಿರುವ ಯುಕ್ತ ಹೇತೋಃ =** ಪೂರ್ವಶ್ಲೋಕದಲ್ಲಿ ಹೇಳಿದಂತೆ ದೇಹವಿದೆಂಬ **ಹೇತುವಿಗೆ,**

**ಅನೇಕಾಂತಿಕತಾಸ್ಯಾತ್**=ವ್ಯಭಿಚಾರವು ಬರುತ್ತದೆ. **ಸಃ**=ಆ ಈಶ್ವರನು ದೇಹರಹಿತನಾದವನಾದರೆ **ಶಶಿವಿಷಾಣವತ್**= ಮಲದಕೋಡಿನೋಪಾದೆಯಲಿ, **ಅನಿಚ್ಛಾದಿಃ ಭವೇತ್**= ಇಚ್ಛಾ, ಜ್ಞಾನಪ್ರಯತ್ನಾದಿ ಗುಣದಿಂದ, ರಹಿತನಾದವನಾಗಲಿ.

ಭಾವಾರ್ಥ:— ಮಾಯಾವಾದಿಗಳು ಹಿಂದಿನ ಶ್ಲೋಕದಲ್ಲಿ ಆಕ್ಷೇಪಿಸಿದಂತೆ, ಮುಕ್ತರಿಗೆ ದೇಹವಿದ್ದ ಕಾರಣದಿಂದಲೇ ಜನನ ಮರಣಾದಿ ಆರು ತೆರೆಗಳುಂಟೆಂದು ಹೇಳಿದರೆ, ಈ ಯುಕ್ತಿಯಲ್ಲಿ 'ಅನೇಕಾಂತಿಕತಾ' ಎಂದರೆ ವ್ಯಭಿಚಾರ ದೋಷ ಬರುತ್ತದೆ. ಹೇಗಂದರೆ ಸ್ವಾಮಿಯಾದ ಈಶ್ವರನಲ್ಲಿ ದೇಹವಿದೆ, ಹೇತುವಾದ ದೇಹವಿದೆ, ಸಾಧ್ಯವೆನಿಸಿದ ಷಡೂರ್ಮಿಗಳಿಲ್ಲ ಈ ಅನುಮಾನದಿಂದ, ವ್ಯಭಿಚಾರವೆಂಬ ದೋಷಯುಕ್ತವಾದಿತು ಎಂದರೆ, ಯಾವನು ದೇಹವುಳ್ಳವನಿರುವನೋ ಅವನು ಊರ್ಮಿಗಳುಳ್ಳವನೆಂಬ ವ್ಯಾಪ್ತಿಯೇ ಇರುವದಿಲ್ಲ. ಹೀಗೆ ಈ ವ್ಯಭಿಚಾರ ದೋಷ ನಿವಾರಿಸಲು. ಈಶ್ವರನು ದೇಹವಂತನಲ್ಲೆಂದು ಹೇಳಬೇಕು. ಹೇತುವು ಇಲ್ಲವಾದರೆ, ಜ್ಞಾನಪ್ರಯತ್ನೇಚ್ಛಾದಿ ಗುಣಗಳಿಂದ ರಹಿತನಾಗಬೇಕಾದೀತು. ಮೊಲದ ಕೋಡಿನಂತೆ ಈಶ್ವರನಿಗೆ ಅಸತ್ವ ಬರಲು ಇದು ನಿನಗೆ ಅಭಿಮತವಲ್ಲವು.

**ಅನೇಕಾಂತಿಕತಾ**=ವ್ಯಭಿಚಾರ, ಸಾಧ್ಯಾಭಾವವುಳ್ಳ ವಸ್ತುವಿನಲ್ಲಿ ಹೇತುವಿನ ಇರುವಿಕೆಯು, ಅನೇಕಾಂತಿಕತೆ, ಎಂದು ಹೆಸರು. ಇದಕ್ಕೆ ವ್ಯಭಿಚಾರವೆಂದ ಅನ್ನುತ್ತಾರೆ. ಉದಾಹರಣೆ, 'ಧೂಮವಾನ್ ವಹ್ನಿ' ಎಂಬ ಉದಾಹರಣೆಯಲ್ಲಿ ಧೂಮರೂಪ ಸಾಧ್ಯಾಭಾವವುಳ್ಳ ಅಯೋಗೋಳಕದಲ್ಲಿ ವಹ್ನಿ ರೂಪ ಹೇತು ಇದ್ದದರಿಂದ ವಹ್ನಿರೂಪಹೇತು ಅನೇಕಾಂತಿಕ (ವ್ಯಭಿಚರಿತವೆಂದು ಅನ್ನುವರು.)

**ವ್ಯಾಪ್ತಿ**= ಹೇತು ಇದ್ದಲ್ಲೆಲ್ಲಾ ಸಾಧ್ಯವೂ ಇರಬೇಕು. ಇದ್ದಕ್ಕೆ ವ್ಯಾಪ್ತಿ, ಧೂಮ ಇದ್ದಲ್ಲೆಲ್ಲಾ ವಹ್ನಿ ಇರುವದು.

**ಹೇತು**= ಯಾವುದರಿಂದ ಯಾವುದನ್ನು ಸಾಧಿಸುತ್ತಾರೋ ಅದು ಹೇತು. ಹೊಗೆ (ಧೂಮ) ಯಿಂದ ವಹ್ನಿಯನ್ನು ಸಾಧಿಸುತ್ತಾರೆ ಆದ್ದರಿಂದ ಧೂಮವು ಹೇತು ಎಂದು ಅನಿಸುತ್ತದೆ.

**ಸಾಧ್ಯ**= ಸಾಧನ ಮಾಡಿಸಿಕೊಳ್ಳತಕ್ಕ ವಸ್ತುವಿಗೆ ಸಾಧ್ಯವೆಂದು ಹೆಸರು ವಹ್ನಿಯು ಸಾಧನ ಮಾಡಿಸಿಕೊಳ್ಳುವದಾದ್ದರಿಂದ ಇದಕ್ಕೆ ಸಾಧ್ಯವೆಂದು ಕರೆಯುತ್ತಾರೆ.

---

**ಶ್ಲೋಕ ॥ ಜ್ಞಾತ್ರಾದಿರೂಪಮಸ್ಯ ಸ್ಯಾ ।**
**ದ್ವೈಲಕ್ಷಣ್ಯಾಯ ಚೇತ್ತತಃ ॥**
**ತದೇವ ದೇಹಶಬ್ದೋಕ್ತಂ ।**
**ನ ಹ್ಯಸೌ ಪ್ರಾಕೃತಾ ಕೃತಿ**

ವಾರ್ಧಿಕ || ಒಡನೆ ಮಾಯಿಯು ಮುಲದ ಕೊಂಬಿನಂತೀಶಲ್ಲ ।
ಸುಡಿವ ವೈಲಕ್ಷಣ್ಯಸಿದ್ಧ್ಯರ್ಥ ಜ್ಞಾತ್ರಾದಿ ।
ಕಡು ರೂಪ ಈಶ್ವರಗಿಪೆಂದು ಪೇಳುವ ಪಕ್ಷ
ಪದೆ ದೇಹವೆನಿಪುದಯ್ಯಾ ||

ಬಿಡದೆ ನಾಂ ಪೇಳ್ವೆನಿದೆ ರೂಪನೀನೊಪ್ಪಲುಂ ।
ದೃಷ ನಿನ್ನ ಅನುಮಾನದಲ್ಲಿ ದೋಷವೆ ಬಂತು ||
ಮೃಡವಂದ್ಯನೀಶ ಪ್ರಾಕೃತ ದೇಹನಲ್ಲ
ಅಪ್ರಾಕೃತ ಶರೀರನು ನಿಜ || ೫೪ || ೬೩೩ ||

ನನು ಈಶ್ವರಸ್ಯಜ್ಞಾತ್ರಾದಿರೂಪ ಸದ್ಭಾವಾತ್ ಕಥಂ ಶಶಶೃಂಗ ಸಾಮ್ಯಮಿತ್ಯಾಹ ||
ಈಶ್ವರನು ಜ್ಞಾತವಾದಕಾರಣ ಜ್ಞಾತ್ರಾದಿ ರೂಪಗಳು ಇರುವದರಿಂದ ಶಶಿಶೃಂಗ ಸಾಮ್ಯವು ಹೇಗೆ ಪ್ರಾಪ್ತವಾಗುತ್ತದೆಂದು ವಾದಿಯು ಶಂಕಿಸಿದರೆ, ಉತ್ತರವನ್ನು ಹೇಳುತ್ತಾರೆ.

ಅನ್ವಯ:— ಅಸ್ಯ, ತತಃ, ವೈಲಕ್ಷಣ್ಯಾಯ, ಜ್ಞಾತ್ರಾದಿ, ರೂಪಂ, ಸ್ಯಾತ್, ಚೇತ್, ತತ್, ಏವ ದೇಹಶಬ್ದೋಕ್ತಂ, ಅಸೌ, ಪ್ರಾಕೃತ, ಆಕೃತಿ, ನ, ಹಿ, ||

ಅರ್ಥ:-- ಅಸ್ಯತತಃ= ಈ ಈಶ್ವರನಿಗೆ ಶಶಿವಿಷಾಣದ ದೆಶೆಯಿಂದ, ವೈಲಕ್ಷಣ್ಯಾಯ ಬೇರೆ ಇದ್ದಾನೆಂದು, ಭೇದ ಸಿದ್ಧಿಸುವಗೋಸುಗ, ಜ್ಞಾತ್ರಾದಿರೂಪಂ ಸ್ಯಾತ್‌ಚೇತ್= ಜ್ಞಾತೃ ಇಚ್ಛಾರೂಪವು ಅದೇ ಎಂಗು ಒಪ್ಪಿದ ಪಕ್ಷದಲ್ಲಿ ತತ್ ಏವ ದೇಹಶಬ್ದೋಕ್ತಂ= ಆ ರೂಪವೇ ದೇಹವೆಂಬ ಶಬ್ದದಿಂದ ಹೇಳಲ್ಪಟ್ಟಿತು, ಅಸೌ= ಆ ಈಶ್ವರನು ಪ್ರಾಕೃತ ಆಕೃತಿನಹಿಃ= ವಿಕಾರಭೂತವಾದ ದೇಹವುಳ್ಳವನಲ್ಲ. ಆದ ಪ್ರಯುಕ್ತ ಆತನಿಗೆ ಜನನ ಮರಣಾದಿಗಳಿಲ್ಲವು.

ಭಾವಾರ್ಥ:— ಒಡನೆ ತಕ್ಷಣಕ್ಕೆ ಆ ಮಾಯಾವಾದಿಯು, ಅಸತ್ಯ= ಇಲ್ಲದಿರುವ ಮೊಲದ ಕೊಂಬಿನಂತೆ ಈಶ್ವರನಲ್ಲಿ ಈ ಮಲದ ಕೊಂಬಿನಿಂದ ಬೇರೆಯಾಗಿರುವನೆಂದು ಸಾಧಿಸಲಿಕ್ಕಾಗಿ ಜ್ಞಾತ್ರಾದಿ= ಜ್ಞಾನ ಇಚ್ಛಾ ಮೊದಲಾದ ರೂಪವು ಕಡು= ಚನ್ನಾಗಿ ಇರುವದೆಂದು ಹೇಳುವ ಪಕ್ಷದಲ್ಲಿ ಆ ಜ್ಞಾನಾದಿ ಕರ್ತೃರೂಪವೇ ಈಶ್ವರನಿಗೆ ದೇಹವೆನಿಸುತ್ತದೆ. (ಈಶ್ವರನಿಗೂ ಆತನ ಜ್ಞಾನಾನಂದಾದಿ ಗುಣಗಳಿಗೂ ಕಿಂಚಿತ್ತಾದರೂ ಭೇದ ವಿಲ್ಲ.) ಈ ಕಾರಣದಿಂದ, ಮೃಡವಂದ್ಯ= ರುದ್ರದೇವರಿಂದ ನಮಸ್ಕರಿಸಿಕೊಳ್ಳಲ್ಪಡುವ, ಈಶ= ಒಡೆಯನಾದ ನಾರಾಯಣನು, ಸಂಸಾರಿಗಳಂತೆ ಪ್ರಾಕೃತ ಅಶುದ್ಧವಾದ ಜಡ ದೇಹನಲ್ಲ. ಜ್ಞಾನಾದಿ ಗುಣಗಳಿಂದ ಯುಕ್ತವಾದ ಅಪ್ರಾಕೃತ ಸಚ್ಚಿದಾನಂದ ದೇಹವುಳ್ಳವನೆಂದು ನಾವು ಹೇಳಿದ ದೇಹ ಒಪ್ಪಿದರಿಂದ ನಿನ್ನ ಅನುಮಾನಕ್ಕೆ ವ್ಯಭಿಚಾರ ದೋಷವು ಮತ್ತೂ ಸ್ಥಿರವಾದಿತು.

**ಶ್ಲೋಕ ॥ ಏವಂ ಸ್ವರೂಪ ದೇಹತ್ವಂ ।**
**ಮುಕ್ತಸ್ಯಾಪ್ಯುರರೀಕೃತಮ್ ॥**
**ಸಾನಿಷ್ಟ ಭೋಗಸ್ತೇನ ಸ್ಯಾತ್ ।**
**ಪ್ರಾಕೃತ ಕ್ಷೇತ್ರ ಸಂಭವಃ ॥ ೫೫ ॥**

ವಾರ್ಧಿಕ ॥ ಇಂತು ಪರವಾದಿ ಅನುಮಾನ ದೂಷಣ ಫಲವ ।
ದೆಂತು ಪೇಳ್ವೆವು ಈಶನಂತೆ ಮುಕ್ತಗೆ ಸಹ ನಿ ॥
ರಂತರಂ ಜ್ಞಾನಮಾನಂದಸ್ವರೂಪ ದೇಹವು ನಾವು
ಅಂಗಿಕರಿಪೇಂ ॥

ಕಂತೆ ಪ್ರಾಕೃತದಿ ಬರುವಾನಿಷ್ಟ ಅನುಭವವು ।
ಎಂತೆಂತು ಮುಕ್ತಗಿಲ್ಲವೂ ಅಪ್ರಾಕೃತ ದೇಹಿ ॥
ಗಿಂತೆ ಪರಮಾನಂದ ಭೋಗ ನಿಜಸುಖಿಯಾಗೆ
ದುಃಖಿರಲಿ ಎಂಬುದಲ್ಲ ॥ ೫೫ ॥ ೮೬೪ ॥

**ಈ** ಪ್ರಕಾರ ಮಾಯಾವಾದಿಯ ಅನುಮಾನವು ದೂಷಿತವಾಗಲಾಗಿ, **ಅದರಿಂದ ಲಬ್ಧ**ವಾದ ಅರ್ಥವನ್ನು ಹೇಳುತ್ತಾರೆ.

ಅನ್ವಯ:— ಏವಂ, ಮುಕ್ತಸ್ಯ, ಅಪಿ, ಸ್ವರೂಪ ದೇಹತ್ವಂ, **ಉರರೀಕೃತಂ, ತೇನ, ಪ್ರಾಕೃತ, ಕ್ಷೇತ್ರ**ಸಂಭವಃ, ಅನಿಷ್ಟಭೋಗಃ ನಸ್ಯಾತ್, ॥

**ಅರ್ಥ**:— ಏವಂ= **ಇದೇ** ಪ್ರಕಾರವಾಗಿ, ಮುಕ್ತಸ್ಯಾಪಿ= **ಮುಕ್ತನಿಗಾದರೂ, ಸ್ವರೂಪದೇಹತ್ವಂ**= ಜ್ಞಾನಾನಂದಾದಿ ಸ್ವರೂಪದೇಹವು, ಅಸ್ಮಾಭಿಃ= **ನಮ್ಮಗಳಿಂದ ಉರರೀಕೃತಂ**= ಅಂಗೀಕಾರ ಮಾಡಲ್ಪಡುತ್ತದೆ. **ತೇನ** ಪ್ರಾಕೃತಕ್ಷೇತ್ರಸಂಭವಃ= **ಆ ಕಾರಣದಿಂದ** ಪ್ರಾಕೃತ ದೇಹದಿಂದ ಹುಟ್ಟುವ ಅನಿಷ್ಟ ಭೋಗನಸ್ಯಾತ್= **ದುಃಖಾನುಭವವು ಆಗಲಾರದು.**

ಭಾವಾರ್ಥ:— **ಹೀಗೆ** ಪರವಾದಿಗಳಿಂದ ಪೇಳಿದ **ಯುಕ್ತಿಗಳು** ನಿರಾಕರಿಸಿದ **ಫಲಿತಾಭಿಪ್ರಾಯವೇನೆಂದರೆ ಈಶ್ವರನಾದ** ಶ್ರೀ ನಾರಾಯಣನು ನಾಶವಾಗದ **ವಿಕಾರ ರಹಿತವಾದ ಪ್ರಕೃತಿ ಸಮ್ಮಂಧ**ವಾದ, ಸತ್ವರಜತಮೋ ಗುಣಾದಿಗಳಿಂದ **ಎಂದೆಂದಿಗೂ ಸಮ್ಮಂಧವಿಲ್ಲದ** ಅಪ್ರಾಕೃತ ದೇಹವುಳ್ಳವನು. ಅಂದರೆ ನಿತ್ಯವಾದ **ಜ್ಞಾನಾನಂದಾದಿ ಅನಂತಗುಣ ಪರಿಪೂರ್ಣತ್ವದಿಂದ ಸಚ್ಚಿ**ದಾನಂದ **ಸ್ವರೂಪ**ನಾಗಿದ್ದಾನೆ. **ಇಂಥ ಸಚ್ಚಿದಾನಂದ (ದೇಹ) ರೂಪವಿದ್ದರೂ ಈಶ್ವರನಲ್ಲಿ** ಜನನ ಮರಣಾದಿ **ಷಡೂರ್ಮಿಗಳಿಲ್ಲ.**

ಹೀಗೆ ಈಶ್ವರನಂತೆಯೇ ಮುಕ್ತ ಜೀವನು ಕೂಡಾ ಜ್ಞಾನಾನಂದಿಸ್ವರೂಪ ದೇಹವುಳ್ಳವನೆಂದು ನಾವು ದ್ವೈತರು ಅಂಗೀಕರಿಸುತ್ತೇವೆ. ಕಾರಣ ಪ್ರಾಕೃತಕಂತೆ= ಅಶುದ್ಧವಾದ ಜಡದೇಹದಿಂದ ಬರುವ ದುಃಖಾದಿ ಅನಿಷ್ಟಗಳ ಭೋಗವು ಮುಕ್ತಜೀವರಿಗೆ ಇಲ್ಲವು. ಮುಕ್ತನು ಅಪ್ರಾಕೃತದೇಹಿ ಪ್ರಕೃತಿ ಗುಣ ಸಮ್ಮಂಧವಿಲ್ಲದ ಜ್ಞಾನಾನಂದಾತ್ಮಕ ಸ್ವರೂಪ ಶರೀರವುಳ್ಳವನು. ನಿಜಾನಂದವಾದ ಸ್ವರೂಪ ಸುಖವನ್ನೇ ಅನುಭೋಗಿಸುತ್ತಾನೆ ಹೊರ್ತಾಗಿ ಸಂಸಾರದಲ್ಲಿರುವ ಜೀವರುಗಳಂತೆ ದುಃಖಾದ್ಯನರ್ಥಗಳನ್ನೆಂದಿಗೂ ಅನುಭವಿಸಲಾರನು. ಕಾರಣ ಮುಕ್ತನು ಸುಖಿಯಾದರೆ, ದುಃಖಿಯಾಗಲಿ ಎಂಬ ಈ ಆಕ್ಷೇಪವು ಅಯುಕ್ತವು.

ನಾವು ದ್ವೈತಿಗಳು, ಈಶ್ವರನು ಸಚ್ಚಿದಾನಂದನು ನಿತ್ಯ ಸುಖಪೂರ್ಣನು, ಜೀವರೂ ನಿತ್ಯರು ಜ್ಞಾನಂದರೂಪರು, ಈಶ್ವರನ ಪ್ರತಿಬಿಂಬರು, ಈಶ್ವರನ ಆಧೀನರೆಂದು ತಿಳಿಯುತ್ತೇವೆ ಹೊರ್ತಾಗಿ ಈಶ್ವರನಂತೆ ಸ್ವತಂತ್ರನೆಂದು ತಿಳಿಯುವದಿಲ್ಲ.

**ಶ್ಲೋಕ ॥ ವಿಮುಕ್ತೋ ಸಾವಯವವಾನ್ ।**
**ವಿನಾಶಿತ್ವಪ್ರಸಂಗತಃ ॥**
**ಪಟವಚ್ಛೇಧವಯವಾ ।**
**ನಿರಸ್ಯಂತೇಽತ್ರ ಕೀದೃಶಾಃ ॥ ೫೬ ॥**

ವಾರ್ಧಿಕ್ಯ ॥ ಅವಯವಂ ವುಳ್ಳನಲ್ಲನೊ ವಿವಾದಿರೆ ಮುಕ್ತ ।
ನವನಾಶವಾದಾನು ಎಂಬುವ ಪ್ರಸಕ್ತಿಯಿಂ ॥
ದವನು ಸ್ವರೂಪವಾದುದು ದೇಹದಿಂದಿರನು
ಪಟದೋಲ್ ವಿರುದ್ಧೋಪಮೆ ॥

ಅವಮಾಯಿ ಸಾಧಿಸಲು ಅರೆ ಮುಕ್ತಗೆಂತಹವು ।
ಅವಯವವು ಇಲ್ಲಿನುವಿ ಮುಕ್ತನಿಂ ಭಿನ್ನ ಜಡ ॥
ಅವಯವವೊ ಆಥವಾ ಅಭಿನ್ನಸ್ವರೂಪ ಜ್ಞಾನಾ
ನಂದ ದೇಹವಿಲ್ಲೋ ॥ ೫೬ ॥ ಆ೬೫ ॥

ಪೂ. ಪ. ಮುಕ್ತನು ಸ್ವರೂಪದೇಹವುಳ್ಳವನೆಂದರೆ, ದೇಹಾತ್ಮಕನು ಆತನ ಸ್ವರೂಪಕ್ಕೂ ದೇಹಕ್ಕೂ ಭೇದವಿಲ್ಲದಂತಾಯಿತು ದೇಹವು ಕರಚರಣಾದಿ ಅವಯವರೂಪಾದ್ದರಿಂದ, ಮುಕ್ತನು ಸಹ ತದಾತ್ಮಕನನಾದುದರಿಂದ ಸಾವಯವನಾದನು. ಸಾವಯುವವಾದ

ವಸ್ತುವಿಗೆ ಲೋಕದಲ್ಲಿ ವಿನಾಶ ಕಂಡುಬರುತ್ತದೆ. ಕಾರಣ ಮುಕ್ತನಿಗೂ ನಾಶ ಬರಲೆಂದು ಮಾಯಾವಾದಿ ಶಂಕಿಸಿದರೆ ಅವನಿಗೆ ಪ್ರಶ್ನೆ ಮಾಡುತ್ತಾರೆ.

ಅನ್ವಯ:— ವಿಮತಃ, ವಿನಾಶಿತ್ವ ಪ್ರಸಂಗತಃ, ಅವಯುವವಾನ್, ನ, ಪಟವತ್ ಚೇತ್, ಅತ್ರ, ಕೀದೃಶಾಃ, ಅವಯವಾಃ, ನಿರಸ್ಯಂತೇ, ಇತಿ,

ಅರ್ಥ:— ವಿಮತಃ= ವಿವಾದ ವಿಷಯವಾದ ಮುಕ್ತನು, ವಿನಾಶಿತ್ವ ಪ್ರಸಂಗತಃ= ನಾಶಹೊಂದುವ ಪ್ರಸಂಗ ಬರುವ ಕಾರಣ, ಅವಯುವವಾನ್ =ಅವಯುವವುಳ್ಳವನಾಗುವದಿಲ್ಲ. ಪಟವತ್= ವಸ್ತ್ರದಂತೆ, ಚೇತ್=ಹೀಗೆ ಹೇಳಿದ ಪಕ್ಷದಲ್ಲಿ, ಅತ್ರಕೀದೃಶಾಃ = ಈ ಮುಕ್ತಿಯಲ್ಲಿ ಮುಕ್ತನಿಗೆ ಎಂಥಾ, ಅವಯುವಃ=ಮುಕ್ತನಿಗೆ ಭಿನ್ನ ಅವಯುವಗಳೊ ಅಥವಾ ಅಭಿನ್ನ ಅವಯುವಗಳೊ, ನಿರಸ್ಯತೇ= ನಿರಾಕರಿಸಲ್ಪಡುತ್ತದೆ

ಭಾವಾರ್ಥ:— ದೇಹವುಳ್ಳ ಮುಕ್ತನು, ಅವಯುವವುಳ್ಳವನೋ ಇಲ್ಲವೋ ಅವನು ನಾಶ ಹೊಂದುವನೆಂಬ ಪ್ರಸಂಗ ಬಂದೊದಗಬಹುದು. ಕಾರಣ ಅವಯುವವುಳ್ಳವನಾಗುವದಿಲ್ಲ. ಹೇಗಂದರೆ, ವಿರುದ್ಧ ದೃಷ್ಟಾಂತ ವಸ್ತ್ರದಂತೆ, ವಸ್ತ್ರದಲ್ಲಿ ನೂಲು ಮೊದಲಾದ ಅವಯುವಗಳು ಇವೆ. ನಾಶವು ಇದೆ. ವಿನಾಶಿತ್ವ ಎಲ್ಲಿದೊ ಅಲ್ಲಿ ಸಾವಯುವತ್ವ ಉಂಟು. ಯಾವುದು ನಾಶಹೊಂದುತ್ತದೋ ಅದು ಅವಯುವವುಳ್ಳದ್ದು ವಿಮತನಾದ ಮುಕ್ತನು ಅವಿನಾಶಿಯಾದ್ದರಿಂದ ನಿರವಯುವು. ಯಾವುದು ಅವಿನಾಶಿಯೋ ಅದು ಪರಮಾಣುವಿನಂತೆ ನಿರವಯುವು. ಈ ಅನುಮಾನದಲ್ಲಿ ಹೇತುವಿರಲಿ, ಸಾಧ್ಯ ಬೇಡವೆಂತ ಅಪ್ರಯೋಜಕ ಶಂಕೆಯನ್ನು ಮಾಡಿದರೆ, ಅವಯುವಿಯಾದರೆ, ಪಟದಂತೆ ವಿನಾಶಿಯಾಗಬೇಕಾದೀತು ಈ ಭಾಧಕ ತರ್ಕವಿದ್ದದರಿಂದ ಹೇತುವು ಅಪ್ರಯೋಜಕತ್ವ ಬಾರದೇ ನಿರ್ದುಷ್ಟವಾದಿತು. ಇಂಥ ಹೇತುವಿನಿಂದ ನಿರವಯುವತ್ವವು ಸಿದ್ಧವಾಯಿತು; ಸಾವಯುವ ದೇಹಾತ್ಮಕತ್ವವು ಮುಕ್ತನಿಗೆ ಸಿದ್ಧವಾಗಲಾರದು, ಹೀಗಂದರೆ, ಇದನ್ನು ದೂಷಣ ಮಾಡುವದಕ್ಕಾಗಿ ವಿಕಲ್ಪಿಸುತ್ತಾರೆ. ಆದಕಾರಣ ಮುಕ್ತನ ಸ್ವರೂಪದಲ್ಲಿ ಕರಚರಣಾದಿ ಅವಯುವಗಳಿಲ್ಲವೆಂದು, ಈ ಬಾಧಿತ ತರ್ಕಗಳಿಂದ ವಾದಮಾಡುವ ವಾದಿಗಳಿಗೆ ನಾವು ಹೀಗೆ ಪ್ರಶ್ನೆ ಮಾಡುತ್ತೇವೆ. 'ಅತ್ರ ಮುಕ್ತೇಕೀದೃಶಾಃ ಅವಯುವಾಃ ನಿರಸ್ಯಂತೇ ಇತಿ' ಮುಕ್ತನಲ್ಲಿ ಇಲ್ಲವೆಂದು ಹೇಳುವ ಅವಯುವಗಳು, ಅವನ ಸ್ವರೂಪದಿಂದ ಭಿನ್ನವಾದವುಗಳೊ? ( ಜಡಾವಯುವಗಳೊ? ) ಅಥವಾ ಮುಕ್ತನಿಗೆ ಅಭಿನ್ನ ಸ್ವರೂಪವಾದ ಜ್ಞಾನಾನಂದ ಅವಯುವಗಳೋ ಹೇಳು.

**ಶ್ಲೋಕ ॥ ಸಿದ್ಧಸಾಧನತಾ ಹೇತೋ |**
**ಸ್ತೇ ಭಿನ್ನಾಶ್ಚೇದಚಿನ್ಮಯಾಃ ॥**
**ಆತ್ಮನೋ ಭೇದರಹಿತಾ |**
**ಏಷ್ಟವ್ಯಾ ಏವ ವಾದಿಭಿಃ** ॥ ೫೭ ॥

ವಾರ್ಧಿಕ ॥ ಮುಕುತರಿಗೆ ಭಿನ್ನ ಜಡದೇಹ ವಿಲ್ಲೆಂಬುದನು ।
ಅಕುಟಿಲ ಸುಸಿದ್ಧಾಂತಿಗಳು ಮೊದಲೆ ಸಾಧಿಸಿರೆ ॥
ಚಕನೆ ಅದು ಪುನಹ ಪೇಳಲು ಸಿದ್ಧಿ ಸಾಧನದ
ದೋಷ ಬರುವದು ಮಾಯಿಯೇ ॥

ಮುಕುತರ್ಗೆ ಸುಸ್ವರೂಪಾವಯವು ಇಲ್ಲೆನಲು ।
ಮುಕುತ ಜೀವನೆ ಇಲ್ಲದಂತಾಯಿತ್ತೈ ಕೊನಿಗೆ ॥
ಸಕಲ ಜೀವರಭಿನ್ನ ಈಶ್ವರನು ಸಹನಿರನು ನಿನ್ನ
ಸಿದ್ಧಾಂತ ಹಾನಿ ॥ ೫೭ ॥ ೧೬೬ ॥

ಮುಕ್ತರಾದ ಜೀವರಿಗೆ ಭಿನ್ನವಾದ (ಜಡಾವಯುವಗಳು) ಇಲ್ಲವೆಂದು ಹೇಳಿದರೆ, ದೋಷವನ್ನು ಹೇಳುತ್ತಾರೆ.

ಅನ್ವಯ :— ತೇ, ಅಚಿನ್ಮಯಾಃ, ಭಿನ್ನಾಃ, ಚೇತ್, ಹೇತೋಃ, ಸಿದ್ಧಸಾಧನ ತಾಸ್ಯಾತ್, ಆತ್ಮನಃ, ಭೇದರಹಿತಾಃ, ವಾದಿಭಿಃ, ಏಷ್ಟವ್ಯಾಃ, ಏವ, ॥

ಅರ್ಥ :— ತೇ ಅಚಿನ್ಮಯಾಃ ಆ ಅವಯುವಗಳು ಜಡಾತ್ಮಕವಾಗಿ ಭಿನ್ನಾಃ ಚೇತ್ =ಸ್ವರೂಪಕ್ಕಿಂತಲೂ ಬೇರೆಯಾದ ಪಕ್ಷದಲ್ಲಿ ಹೋತೋಃ=ನಿರವಯುವ ಸಾಧಕ ಅವಿನಾಶತ್ವ ಹೇತು, ಸಿದ್ಧಸಾಧನತಾ=ಮುಕ್ತನಿಗ ಭಿನ್ನ ಅವಯುವ ಇಲ್ಲವೆಂದು, ನಾವು ಹೇಳಿದ್ದನ್ನೇ ನೀನು ಸಾಧನ ಮಾಡಿದಂತಾಗಿ, ಸಿದ್ಧಸಾಧನತ್ವ ಎಂಬ ದೋಷವು, ಸ್ಯಾತ್=ಪ್ರಾಪ್ತವಾಗುತ್ತದೆ. ಆತ್ಮನಃ ಭೇದರಹಿತಾಃ=ಜೀವನಿಗೆ ಭೇದರಹಿತವಾದ ಅವಯುವಗಳು, (ಅಂದರೆ ಜೀವನಿಗೆ ಅಭಿನ್ನವಾದ ಅವಯುವಗಳನ್ನು ನಿರಾಕರಣಮಾಡಲು ಶಕ್ಯವಿಲ್ಲ) ವಾದಭಿಃ = ವಾದಿಗಳಿಂದ ಏಷ್ಟವ್ಯಾಃಏವ =ಅವಶ್ಯ ಅಂಗೀಕರಿಸಲು ಯೋಗ್ಯವಾದವುಗಳು.

ಭಾವಾರ್ಥಃ— ಮುಕುತರಾದ ಜೀವರಿಗೆ, ಅವರಿಂದ ಭಿನ್ನ, ಬೇರೆಯಾದ ಜಡಾವಯುವು ಇಲ್ಲವೆಂಬದನು, ಅಕುಟಿಲ =ನಿಷ್ಕಪಟಿಗಳಾದ ವಂಚನಮಾಡಿ ಸುಳ್ಳುಹೇಳದೇಯಿದ್ದ ಸುಸಿದ್ಧಾಂತಿಗಳು= ಸಮಿಾಚೀನವಾದ ಮತವನ್ನು ಸ್ಥಾಪಿಸಿದವರು, ಮೊದಲಿಗೇವೆ ಸಿದ್ಧಮಾಡಿರುತ್ತಾರೆ. ಚಕನೆ = ಈಗ ಪುನಃ ತ್ವರದಿಂದ ಅದೇಮಾತು ಹೇಳುವದು, **ಸಿದ್ಧಸಾಧನದ ದೋಷ** ಯಾಕಂದರೆ ಯಾವ ಪ್ರಮೇಯವನ್ನು ಸಿದ್ಧಾಂತಿಗಳು ಮೊದಲೇ ಅಂಗೀಕರಿಸಿದ್ದಾರೋ, ಆ ಪ್ರಮೇಯವನ್ನೇ ಅದ್ವೈತಿಗಳು, ವಿನಾಶಿತ್ವರೂಪ ಅನುಮಾನಗಳಿಂದ ಸ್ಥಾಪನೆ ಮಾಡಿದರೆ, ಅದಕ್ಕೆ ಸಿದ್ಧಸಾಧನವೆಂತ ಅನುಮಾನ ದೋಷವು ಬರುತ್ತದೆ. (ಅನುಮಾನದಲ್ಲಿ ಹೇತುವಿನಿಂದ ಸಾಧಿಸಲ್ಪಡುವದು, ಮತ್ತೊಂದು

ಪ್ರಮಾಣದಿಂದ ಮೊದಲು ಸಿದ್ಧವಾಗಬಾರದು). ಸಾರಾಂಶ ಮುಕ್ತರಿಗೆ ಭಿನ್ನವಾದ ಜಡ ದೇಹವು ಇಲ್ಲೆಂದು ಸಿದ್ಧಾಂತಕಾರರು, ಮೊದಲೇ ಸ್ಥಾಪಿಸಿ ಹೇಳಿದ್ದಾರೆ ಕಾರಣ ಪುನಃ ಹೇಳುವದು ದೋಷ ( ಮುಕ್ತನಿಗೆ ಪ್ರಾಕೃತ ದೇಹವಿಲ್ಲೆಂತ ನಾವು ಒಪ್ಪುತ್ತೇವೆ ).

ಇನ್ನು ಮುಕುತನಿಗೆ ಜೀವನಸ್ವರೂಪಾವಯವಗಳು ನಿರಾಕರಿಸಲ್ಪಡುವದೆಂದರೆ, ಜೀವನಸ್ವರೂಪ ಅವಯವಗಳೇ ಇಲ್ಲ. ಸ್ವರೂಪ ದೇಹವೆ ಇಲ್ಲೆಂದು ಹೇಳಲು ಅದ್ವೈತಿಗಳಿಗೆಂದಿಗೂ ಸಮ್ಮತವಲ್ಲ ಇದು ಅಶಕ್ಯವು, ಸ್ವರೂಪ ಅವಯವು ಇಲ್ಲೆನುವ ಪಕ್ಷದಲ್ಲಿ ಮುಕ್ತನಾದಂಥಾ ಜೀವನೇ ಇರದಂತಾದನು. ಜೀವರೇ ಇಲ್ಲವಾದರೆ ಅದ್ವೈತ ರೀತ್ಯಾ ಜೀವರಿಗೆ ಭೇದರಹಿತನಾದ ಈಶ್ವರನು ಸಹ ಇಲ್ಲದಂತಾಯಿತು. ಜೀವೇಶ್ವರರು ಒಂದೇ ಎಂಬ ಅದ್ವೈತ ಸಿದ್ಧಾಂತಕ್ಕೆ ಹಾನಿ

ಕಾರಣ ಮುಕ್ತ ಜೀವನಿಗೆ ಅಭಿನ್ನವಾದ ಸ್ವರೂಪ ದೇಹವಿದೆಂಬುದನ್ನು ಅವಶ್ಯವಾಗಿ ಸರ್ವರೂ, ಅಂಗೀಕರಿಸಬೇಕಾದದ್ದೆ ನಿಶ್ಚಯತತ್ವ.

**ಶ್ಲೋಕ ॥ ಪರಮಾಣ್ವಾದಿ ದೇಶೇಷು ।**
**ವ್ಯಾಪ್ತ್ಯೈ ವ್ಯಾಮಾದಿಕೇಷ್ವಪಿ ॥**
**ಯಥಾತ್ಮನಃ ಪ್ರದೇಶಾಃ ಸ್ಯು ।**
**ಸ್ತೇಷಾಂ ಸೋಽವಯವಾಸ್ತಥಾ ॥ ೫೮ ॥**

ವಾರ್ಧಿಕ ॥ ವೈಶೇಷಿಕನ ಪಕ್ಷ ಜೀವ ಪರಮಾತ್ಮರಿಗೆ ।
ದೇಶವೆಲ್ಲಾ ವ್ಯಾಪ್ತಿ ಸಾಧಿಸುವಗೋಸುಗದಿ ॥
ದೇಶ ಪರಮಾಣ್ವಾದಿ ವ್ಯಾಮಾದಿಯಲ್ಲಿ ಸಹ
ವ್ಯಾಪ್ತಾವಯವು ಒಪ್ಪಿರೆ ॥

ಲೇಸು ಅದರೋಲ್ ನಮ್ಮ ಸಿದ್ಧಾಂತದಲ್ಲಿ ಸಹ ।
ಈಶ ಜೀವರಿಗು ಅವರವರ ಭಿನ್ನಾದವಂ ॥
ಲೇಶ ದೋಷಿಲ್ಲದ ಸುಖಸ್ವರೂಪಾವಯವು
ಮುಕ್ತರಿಗೆ ವುಂಟು ಮಾಯಿ ॥ ೫೮ ॥ ೮೬೭ ॥

ಮುಕ್ತನಿಗೆ ಅಭಿನ್ನಾಯವಗಳನ್ನು ಯಾಕೆ ಅಂಗಿಕರಿಸಬೇಕೆಂದು ಶಂಕಿಸಲು, ವೈಷಿಕರು ಆತ್ಮನಿಗೆ ಅಭಿನ್ನವಾದ ಅವಯುವಗಳಿರುವವೆಂದು ಅಂಗಿಕರಿಸಿದ ದೃಷ್ಟಾಂತದಿಂದ ಸ್ವಮತವನ್ನು ಸಾಧಿಸುತ್ತಾರೆ.

ಅನ್ವಯ:- ತೇಷಾಂ, ಆತ್ಮನಃ, ವ್ಯಾಪ್ತ್ಯೈಃ, ಪರಮಾಣ್ವಾದಿ ದೇಶೇಷು, ವ್ಯಾಮಾದಿ ಕೇಷು, ಅಪಿ, ಯಥಾ, ಆತ್ಮನಃ, ಪ್ರದೇಶಾಃ, ಸ್ಯು:, ತಥಃ, ನಃ, ಅವಯವಾಃಸ್ಯುಃ

ಅರ್ಥ:— ತೇಷಾಂ=ವೈಶೇಷಿಕರ ಮತದಲ್ಲಿ, ಆತ್ಮನಃ=ಪರಮಾತ್ಮನಿಗಾಗಲಿ ಅಥವಾ ಜೀವಾತ್ಮನಿಗಾಗಲಿ ವ್ಯಾಪ್ತ್ಯೈಃ=ವ್ಯಾಪ್ತಿಸಿದ್ಧಿಗೋಸುಗ, ಪರಮಾಣ್ವಾದಿ ದೇಶೇಷು=ದ್ವ್ಯಣುಕತ್ರ್ಯಣುಕಾದಿ ಪರಮಾಣು ಸ್ಥಳಗಳಲ್ಲಿ, ವ್ಯಾಮಾದಿಕೇಷ್ವಪಿ=ಮನುಷ್ಯನ ಎರಡು ಕೈಚಾಚಿದಷ್ಟು ಸ್ಥಳದ (ಮಾರು) ಪರಿಯಂತರ, ಯಥಾ=ಹೇಗೆ ಆತ್ಮನಃ ಪ್ರದೇಶ= ಆತ್ಮನ ಅವಯವಗಳು ಸ್ಯುಃ= ವ್ಯಾಪ್ತವಾಗಿರುವವು ತಥಃ= ಹಾಗೇವೆ, ನಃ= ನಮ್ಮ ಪಕ್ಷದಲ್ಲಿ, ಅವಯವಃ ಸ್ಯು=ಸ್ವರೂಪಾಭಿನ್ನ ಅವಯವಗಳಿರುವವು.

ಭಾವಾರ್ಥ:— ವೈಶಿಷಕರಾದ, ತಾರ್ತಿಕರ ಮತದಲ್ಲಿ ಅನೇಕ ಜೀವಾತ್ಮರಿಗೆ ಒಬ್ಬ ಈಶ್ವರನಿಗೆ ಸರ್ವತ್ರದಲ್ಲಿ ವ್ಯಾಪ್ತಿಯನ್ನು ಸಾಧನ ಮಾಡಲು, ಪರಮಾಣುವೇ ಮೊದಲಾದ ದ್ವ್ಯಣಕ, ತ್ರ್ಯಣಕ, ಅಲ್ಪ ಸ್ಥಾನದಲ್ಲೂ, ವ್ಯಾಮಾದಿ=ಚೇತನರಾದ ದೇಹಧಾರಿಗಳು ತಮ್ಮ ಎರಡು ಬಾಹುಗಳನ್ನು ಚಾಚಲು ಎಷ್ಟು ಉದ್ದವಾಗುತ್ತದೊ ಆ ಮಧ್ಯಪ್ರದೇಶ ವೆಂದರೆ, ಒಂದು ಮಾರು ವರೆಗೆ ಇರುವ ಸ್ಥೂಲ ದೇಶದಲ್ಲಿಯೂ ಚೇತನರಾದ ಜೀವ ಪರ ಮಾತ್ಮರಿಗೆ ವ್ಯಾಪ್ತಿಯನ್ನು ಹೇಳುತ್ತಾ, ಆ ಪ್ರದೇಶಗಳು ಆತ್ಮಾಭಿನ್ನಗಳೆಂದೆ ಹೇಳುತ್ತಾರೆ. ಅಂದರೆ ಸೂಕ್ಷ್ಮಸ್ಥೂಲ ಪ್ರದೇಶಗಳಲ್ಲಿ, ಪರಮಾತ್ಮ ಮತ್ತು ಜೀವಾತ್ಮರಿಗೆ ಅವರವರಿಗೆ ಅಭಿನ್ನ ಅವಯಗಳಿವೆ ಎಂದು ಸಾಧಿಸಿದ್ದಾರೆ ಅನ್ಯಥಾ= ಹಾಗಿರದಿದ್ದರೆ ಒಬ್ಬ ಆತ್ಮನಿಗೆ ಸರ್ವ ವ್ಯಾಪ್ತಿಯು ಕೂಡುವದಿಲ್ಲ. ಹೀಗೆ ಆವೈಶೇಷಿಕರು ತಮ್ಮ ಪಕ್ಷದಲ್ಲಿ ಆತ್ಮದಿಂದ ಅಭಿನ್ನಗಳಾದ ಪ್ರದೇಶಗಳೊಪ್ಪುವಂತೆ, ನಮ್ಮ ಪಕ್ಷದಲ್ಲಿ ಮುಕ್ತ ಜೀವನಿಗೆ ಸುಖಜ್ಞಾನಾ ತ್ಮಕ ಅಭಿನ್ನವಾದ ಅವಯವಗಳು ಅಂಗಿಕರಿಸಿದ್ದು ಕೂಡುತ್ತದೆ. ಇದು ಯಾವ ಕಾರಣ ದಿಂದಲೂ ಅಸಂಭಾವಿತವಲ್ಲ. ಮುಕ್ತರಿಗೆ ಅಭಿನ್ನವಾದ ಸ್ವರೂಪಭೂತವಾದ ಅವಯವ ಗಳುಳ್ಳ ದೇಹವನ್ನು ನಾವು ಅಂಗೀಕರಿಸುತ್ತೇವೆ.

**ಶ್ಲೋಕ ॥ ಮುಕ್ತೋ ರೂಪಾದಿ ವಿತ್ಸತ್ವಾ ।**
**ಜ್ಜಡಾನ್ಯತ್ವೇ ಸತೀಶವತ್ ॥**
**ದೃಷ್ಟಾಂತೋಽಸಾಧ್ಯವಿಕಲ ।**
**ಸ್ತಸ್ಯ ಸರ್ವಜ್ಞತಾ ಗ್ರಹಾತ್ ॥ ೫೯ ॥**

ವಾರ್ಧಿಕ ॥ ಮುಕುತ ಜೀವರು ಜಡದಿ ಭಿನ್ನ ಚಿನ್ಮಯಕರಣ ।
ಸುಖದ ಚಿದ್ವಸ್ತುಯಿರೆ ರೂಪರಸಗಂಧಾದಿ ॥
ನಿಖಿಳ ಜ್ಞಾನುಳ್ಳವರು ಚೇತನಾದುದರಿಂದ
ಈಶ್ವರನ ತೆರದಿ ನೋಡು ॥

ಅಕಳಂಕನೀಶರೂಪಾದಿ ಜ್ಞಾನಿಯು ಅಲ್ಲ |
ವಿಕಲ ಸಾಧ್ಯದ ದೋಷಬರುವದೆಂದವ ಪೇಳೆ ।।
ಸಕಲಜ್ಞ ಈಶ್ವರೆಂದೊಪ್ಪೆ ನೀಂ ಸಾಧ್ಯವೈಕಲ್ಯ
ದೋಷೆಲ್ಲಿ ಮಾಯಿ ।। ೫೯ ।। ೮೬೮ ।।

ಪೂರ್ವೋಕ್ತ ರೀತ್ಯಾ ಮುಕ್ತರಿಗೆ ಅಭಿನ್ನವಾದ, ಚಿದಾನಂದಾತ್ಮಕ ಸ್ವರೂಪ ಅವಯವಗಳಿವೆಂದು ಸಯುಕ್ತಿಗಳಿಂದಲೂ ಪ್ರಮಾಣಗಳಿಂದಲೂ ನಿಜತತ್ವವನ್ನು ದಾರಢ್ಯಗೊಳಿಸಿ ಈಗ ಮುಕ್ತರಿಗೆ ಸ್ವರೂಪೇಂದ್ರಿಯಗಳುಂಟೆಂದು ನಿರ್ಧರಿಸುತ್ತಾರೆ.

ಅನ್ವಯ:— ಮುಕ್ತಾಃ ಜಡಾನ್ಯತ್ವೇ, ಸತಿ, ಸತ್ವಾತ್, ಈಶವತ್, ರೂಪಾದಿವತ್ ತಸ್ಯ, ಸರ್ವಜ್ಞತಾ ಗ್ರಹಾತ್, ದೃಷ್ಟಾಂತಃ, ಅಸಾಧ್ಯವಿಕಲಃ ||

ಅರ್ಥ:— ಮುಕ್ತಾಃ= ಮುಕ್ತಜೀವನು, ಜಡಾನ್ಯತ್ವೇಸತಿ ಸತ್ವಾತ್ =ಜಡವಲ್ಲದೇ ಸತ್ಪದಾರ್ಥಚೇತನನಾದ ಕಾರಣ, ಈಶವತ್=ಪರಮಾತ್ಮನಂತೆ, ರೂಪಾದಿವಿತ್= ರೂಪ ರಸಗಂಧಾದಿ ಜ್ಞಾನವುಳ್ಳವನು, ತಸ್ಯ= ಆ ಪರಮಾತ್ಮಗೆ, ಸರ್ವಜ್ಞತಾಗ್ರಹಾತ್= ಸರ್ವಜ್ಞತ್ವವನ್ನು ನೀವು ಅಂಗೀಕಾರ ಮಾಡಿದ್ದರಿಂದ, ದೃಷ್ಟಾಂತಃ= ಈಶನೆಂತೆಂಬುವ ಉದಾಹರಣೆಯು, ಅಸಾಧ್ಯವಿಕಲಃ = ಸಾಧ್ಯವಿಕಲ್ಲವಲ್ಲ.

ಭಾವಾರ್ಥ;— ಮುಕ್ತಜೀವರು ಜಡವಸ್ತುಗಳಿಂದ ಭಿನ್ನರಾದವರು ಚಿದ್ವಸ್ತು= ಚೇತನರಾಗಿ ಇರತಕ್ಕ ವಸ್ತುವಾದ ಕಾರಣ, ರೂಪರಸ, ಗಂಧಶಬ್ದಾದಿ ವಿಷಯಗಳ ಜ್ಞಾನವುಳ್ಳವರಾಗಿದ್ದಾರೆ. ಯಾವನು ಚೇತನನಾಗಿರುವನೋ, ಜಡನಲ್ಲವೊ ಆತನು ಗಂಧ ರೂಪ, ರಸಾದಿಗಳ ಜ್ಞಾನವುಳ್ಳವನಾಗಿದ್ದಾನೆ. ಹೇಗಂದರೆ ಇದಕ್ಕೆ ದೃಷ್ಟಾಂತ ಈಶ್ವರನಂತೆಯೆ ! ಈಶ್ವರನು ಸಚ್ಚೇತನನಾಗಿದ್ದಾನೆ ಚೇತನನಾದುದರಿಂದ ರೂಪರಸಾದಿ ಜ್ಞಾನವಂತನು. ಹಾಗಾದರೆ ಪರಮಾತ್ಮನಲ್ಲಿ ರೂಪರಸಗಂಧಾದಿ ಜ್ಞಾನವಿಲ್ಲದ ಕಾರಣ ದೃಷ್ಟಾಂತದಲ್ಲಿ ಸಾಧ್ಯವಿಲ್ಲವೆಂದು, ಸಾಧ್ಯವೈಕಲ್ಯದೋಷ ಬರುವದಲ್ಲವೇ ಎಂದರೆ, ಆ ಈಶ್ವರನು ಸರ್ವಜ್ಞ=ಸರ್ವವನ್ನು ಬಲ್ಲವನೆಂದು, ಅದ್ವೈತಿಗಳು ಒಪ್ಪಿಕೊಂಡದ್ದರಿಂದ ಸರ್ವಜ್ಞನಾದ ಮೇಲೆ ರೂಪರಸಾದಿ ಜ್ಞಾನವು ಇದ್ದೇ ಯಿದೆ ಎಂಬುದರಿಂದ ಸಾಧ್ಯವೈಕಲ್ಯ ದೋಷವಿಲ್ಲ.

ಹೀಗೆ ಮುಕ್ತನಿಗೆ ರೂಪರಸ ಗಂಧಾಧಿ ಜ್ಞಾನವಿರಬೇಕಾದರೆ ಕಣ್ಣು ಕಿವಿ ನಾಲಿಗೆ ಮೂಗು ತ್ವಗಾದಿ ಜ್ಞಾನೇಂದಿಯಗಳು ವಾಗಾದಿ ಕರ್ಮೇಂದ್ರಿಯಗಳು ಸ್ವರೂಪಭೂತವಾದವು ಇರುತ್ತವೆಂದು ಫಲಿತಾರ್ಥವು. ಇಂತು ಮುಕ್ತಜೀವನಿಗೆ ಸ್ವರೂಪೇಂದ್ರಿಯಗಳುಂಟೆಂದು ಸಿದ್ಧವಾದಿತು.

**ಶ್ಲೋಕ ॥ ಈಶ್ವರೋ ನ ಸುಖೀ ತೇನ ।**
**ರೂಪಾದ್ಯನುಭವನ್ನಪಿ ॥**
**ದುಃಖಪ್ರಸಂಗಾದಿತಿ ಮಾ ।**
**ವಾದಿ ತದ್ವ್ಯಾಪ್ತಿದೂಷಣಾತ್ ॥ ೬೦ ॥**

ವಾರ್ಧಿಕ ॥ ಈಶ್ವರನು ರೂಪರಸವೊದಲು ವಿಷಯವನು ತಾ ।
ಲೇಸು ಅನುಭವಿಸುತಿರೆ ರೂಪಾದಿ ಜ್ಞಾನದಿಂ ॥
ಆಶು ಸುಖಿಯಾಗ ಏಕೆನೆ ಸುಖವು ಇದ್ದಲ್ಲಿ
ದುಃಖೆಂಬ ಸಂಸಾರಿಯೋಲ್ ॥

ದೂಷಣಂ ವ್ಯಾಪ್ತಿಯಿದು ಯಾವ ಸುಖಿ ಅವ ದುಃಖಿ ।
ಪಾ ಸಟಿಯ ನ್ಯಾಯವಿದು ಮೊದಲೆ ಖಂಡಿಸಿ ಯಿದೆಯೋ ।
ಈಶನಲಿ ದುಃಖಿಲ್ಲ ಸುಖರೂಪ ಜ್ಞಾನವಿದೆ ಸಾಧ್ಯ
ವಿಕಲಿದು ಬಾರದು ॥ ೬೦ ॥ ೮೬೯ ॥

**ಮುಕ್ತ**ನಿಗೆ ಸುಖಾನುಭವವನ್ನು ಕೊಡುವ ರೂಪರಸಾದಿಜ್ಞಾನವು ಉಂಟೆಂದು ಸಿದ್ಧಾಂತಿಗಳ ನಿರ್ಣಯವು. ಅಂಥ ಸುಖಾನುಭವವನ್ನುಂಟುಮಾಡುವದಕ್ಕೆ ರೂಪಾದಿ ಜ್ಞಾನವನ್ನು ಅದ್ವೈತಿಗಳು ಈಶ್ವರನಲ್ಲಿ ಅಂಗೀಕಾರ ಮಾಡುವದಿಲ್ಲಾದ ಕಾರಣ, ಈಶ್ವರ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವು ಯಾಕೆ ಬರಬಾರದೆಂಬ ಅವರ ಪೂರ್ವ ಪಕ್ಷವನ್ನು ಹೇಳಿ ಅದನ್ನು ನಿರಾಕರಿಸುತ್ತಾರೆ.

**ಅನ್ವಯ:--** ಈಶ್ವರಃ, ರೂಪಾದಿ-ಅನುಭವವನ್ನಪಿ, ದುಃಖ ಪ್ರಸಂಗಾತ್, ತೇನ, ನ, ಸುಖೀ, ತತ್, ವ್ಯಾಪ್ತಿ, ದೂಷಣಾತ್, ಇತಿ, ಮಾ, ವಾದಿ ॥

**ಅರ್ಥ:--** ಈಶ್ವರಃ= ಸರ್ವೇಶ್ವರನಾದ ನಾರಾಯಣನು, ರೂಪಾದಿ ಅನುಭವನ್ನಪಿ =ರೂಪರಸಗಂದಜ್ಞಾನವುಳ್ಳನಾಗ್ಯಾದರೂ ದುಃಖಪ್ರಸಂಗಾತ್= ದುಃಖ ಬರುವನೆಂಬ ಭಯದಿಂದ ತೇನನಸುಖೀ= ಆ ರೂಪಾದಿಜ್ಞಾನದಿಂದ ಸುಖವಂತನಾಗುವದಿಲ್ಲ ನೆಂತ ಹೇಳುತ್ತೇವೆ. ಇತಿ=ಹೀಗೆಂದರೆ ತತ್‌ವ್ಯಾಪ್ತಿ ದೂಷಣಾತ್ =ಆ ವ್ಯಾಪ್ತಿಯು ಪೂರ್ವದಲ್ಲಿ ದೂಷಣ ಮಾಡಿರುವದರಿಂದ, ಮಾ ವಾದಿ = ನೀನು ಹೀಗೆ ಹೇಳಬೇಡ.

**ಭಾವಾರ್ಥ:-** ಈಶ್ವರ =ಸರ್ವೇಶ್ವರನಾದ ನಾರಾಯಣನು, ರೂಪ ರಸ ಮೊದಲಾದವುಗಳನ್ನು ಚನ್ನಾಗಿ ತಿಳಿದ ಜ್ಞಾನವಂತನಾದರೂ, ಸುಖವುಳ್ಳಾತನಾಗಲಾರನು. ಯಾಕೆಂದರೆ ಸುಖವಿದೆ ಎಂದರೆ, ಸುಖವಿದ್ದಲ್ಲಿ ದುಃಖವೂ ಆತನಲ್ಲಿ ಬಂದೀತಾದ್ದರಿಂದ, ಈಶ್ವರನಲ್ಲಿ ಸುಖವಿಲ್ಲೆಂದು ಎಲೈ ವಾದಿಯೆ ನೀನು ಹೇಳಕೂಡದು.

" ಯಾವನು ಸುಖಿಯೋ ಅವನು ದುಃಖಿಯೆಂಬ " ನೀನು ಹೇಳುವ, ಪಾಸಟಿ= ಆ ಸುಳ್ಳು ನ್ಯಾಯವಾದ ವ್ಯಾಪ್ತಿಯನ್ನು "ನನು ಸೌಖ್ಯಾದಿಮಾನ್ನೀಶ" ಎಂಬ ಇದೇ ಸರ್ಗ ಹಿಂದೆ (೧೬)ನೇ ಶ್ಲೋಕದಲ್ಲಿ ಸ್ವತಂತ್ರನಾದ ಈಶ್ವರನಲ್ಲಿ ಲೇಶವಾದರೂ ದುಃಖವಿಲ್ಲ ಸ್ವಸ್ವರೂಪಸುಖಾನುಭವಶಕ್ತಿಯಿದೆಂದು, ಮೊದಲಿಗೇವೆ ನಿರಾಕರಿಸಿದ್ದೇವೆ.

ಕಾರಣ ಈಶ್ವರನಲ್ಲಿ ಕಿಂಚಿತ್ತಾದರೂ ದುಃಖವಿಲ್ಲ. ಸುಖವು ಇದೆ ರೂಪಾದಿ ಜ್ಞಾನವು ಇದೆ ಈ ಕಾರಣ ಸಾಧ್ಯವೈಕಲ್ಯದೋಷವೆಂದಿಗೂ ಬರುವದಿಲ್ಲ.

ಶ್ಲೋಕ ॥ ದೃಷ್ಟಾಂತೋ ಯಸ್ಯ ನೇಷ್ಟೋಯಂ ।
ತಸ್ಯ ಸ್ಯಾದ್ವ್ಯತಿರೇಕವಾನ್ ।
ಶಿಲಾವದಿತ್ಯತಃ ಶುದ್ಧ ।
ಚ್ಚಿದ್ದೇಹೇಂದ್ರಿಯಭೋಗ್ಯಸೌ ॥ ೬೧ ॥

ವಾರ್ಧಿಕ ॥ ಈಶ್ವರನೆ ಇಲ್ಲೆನೊ ನಿರೀಶ್ವರಂ ವಾದಿಗಿದು ।
ಈಶ ದೃಷ್ಟಾಂತ ಮಿಷ್ಟಿಲ್ಲಮೊಡೆ ವ್ಯತಿರೇಕ ॥
ಗೈಸೆ ದೃಷ್ಟಾಂತ ತೋರಿಸಬಹು ಯಾವಸ್ತು
ರೂಪರಸಜ್ಞಾನಿಲ್ಲದು ॥
ಐಸೆ ಆ ವಸ್ತು ಚೇತನವಲ್ಲ ಜಡ ನೋಡು ।
ಈ ಶಿಲಿಗೆ ರೂಪರಸಜ್ಞಾನಿಲ್ಲ ಚಿತುವಲ್ಲ ॥
ಆ ಸುಮುಕ್ತನು ಚೇತನಾದುದಕೆ ಶುದ್ಧ ದೇಂದ್ರಿಯನು
ಸುಖಭೋಗಿಯು ॥ ೬೧ ॥ ೮೭೦ ।

ಇನ್ನು ಈಶ್ವರನನ್ನು ಒಪ್ಪದಿರುವ ವಾದಿಗಳನ್ನು ಕುರಿತು, ಈಶ್ವರದೃಷ್ಟಾಂತದಿಂ ಮುಕ್ತರಿಗೆ ರೂಪಾದಿವಿತ್ವಸಾಧಿಸುವದು, ಸರಿಯಲ್ಲವೆಂತ ಶಂಕಿಸಿದರೆ, ಉತ್ತರವನ್ನು ಹೇಳು ತ್ತಾರೆ.

ಅನ್ವಯ:— ಯಸ್ಯ, ಅಯಂ, ದೃಷ್ಟಾಂತಃ, ನಇಷ್ಟಃ, ತಸ್ಯ, ವ್ಯತಿರೇಕವಾನ್ ಶಿಲಾವತ್, ಅತಃ, ಅಸೌಃ, ಶುದ್ಧಃ, ಚಿತ್, ದೇಹಃ, ಇಂದ್ರಿಯಾಣಿ, ಭೋಗಿ, ಭವತಿ.

ಅರ್ಥ:— ಯಸ್ಯ =ಯಾವ ನಿರೀಶ್ವರವಾದಿಗಳಿಗೆ, ಅಯಂ ದೃಷ್ಟಾಂತಃ ಈ ಈಶನ ದೃಷ್ಟಾಂತ ಸಾಮ್ಯವಲ್ಲವೋ ಅಂದರೆ ಈಶ್ವರನೇ ಇಲ್ಲೆನುವ ವಾದಿಗಳಿಗೆ, ; ಇಷ್ಟಃ =ಸಮ್ಮತವಲ್ಲವೋ, ತಸ್ಯ, ಆನಿರಿಶ್ವರ ವಾದಿಗೆ, ವ್ಯತಿರೇಕವಾನ್=ವ್ಯತಿರೇಕ —ಸ್ಯಾಸ್ತೀತಿ ವ್ಯತಿರೇಕವಾನ್, ಸಾಧ್ಯಸಾಧನಯೋ ಅಭಾವಃ ಅಸ್ಯಾಸ್ತಿ ಸಾಧ್ಯಸಾಧ ಉಳ್ಳಂಥಾದ್ದು ದೃಷ್ಟಾಂತವು ಆಗುವದು. ಶಿಲಾವತ್ =ಕಲ್ಲಿನಂತೆ, ಅತಃ=ಆಕಾರ

ದ್ದೆಶೆಯಿಂದ ಅಸೌ=ಮುಕ್ತನು, ಶುದ್ಧಃ=ಅಪ್ರಾಕೃತವಾದ, ಸ್ವರೂಪಭೂತವಾದ, ಚಿತ್=ಜ್ಞಾನವು, ದೇಹ=ಶರೀರವು, ಇಂದ್ರಿಯಾಣಿ ವಿಷಯ ಸನ್ನಿಕರ್ಷಮಾಡತಕ್ಕ ಪಂಚ ಜ್ಞಾನೇಂದ್ರಿಯಗಳು ಪಂಚ ಕರ್ಮೇಂದ್ರಿಯಗಳು. ಅಂದರೆ ಸ್ವರೂಪಭೂತ ಇಂದ್ರಿಯಗಳು ಇವುಗಳಿಂದ, ಭೋಗಿ= ಸುಖವುಳ್ಳವನು ಆಗುವನು.

ಭಾವಾರ್ಥ:— ಈಶ್ವರನೇ ಇಲ್ಲೆನುವ ನಿರೀಶ್ವರ ವಾದಿಗಳಿಗೆ, ಈಶ್ವರನ ದೃಷ್ಟಾಂತವು ಕೂಡುವದಿಲ್ಲ. ಅವರಿಗೆ ವ್ಯತಿರೇಕ ದೃಷ್ಟಾಂತದಿಂದ ತೋರಿಸಬಹುದು. ಯಾವ ಪದಾರ್ಥವು ರೂಪರಸಾದಿಜ್ಞಾನ, ತಿಳುವಳಿಕೆಯಿಲ್ಲದ್ದು, ಐಸೆ= ಅಪ್ಪೇ? ಆ ಪದಾರ್ಥವು ಚೇತನವಲ್ಲ ಅದು ಜಡವು ನೋಡು ಈ ಕಲ್ಲು ಜಡ, ಇದಕ್ಕೆ ರೂಪ, ರಸಾದಿ ಜ್ಞಾನವು ಇಲ್ಲ ಕಾರಣ ಚೇತನವಲ್ಲ. ಚೇತನ ವಸ್ತುವಿಗೆ ರೂಪರಸಾದಿ ಜ್ಞಾನ ವುಂಟು. ಆಸು ಮುಕ್ತನು, ದುಃಖರಹಿತನಾದ ಸಮೀಚೀನಜ್ಞಾನಾನಂದವುಳ್ಳ ಶುದ್ಧ ಮುಕ್ತರು, ಚೇತನರಾದ ಕಾರಣ, ಸ್ವರೂಪವಾದ ಚಿನ್ಮಯದೇಹೇಂದ್ರಿಯ ಬುದ್ಧಿಯುಳ್ಳ ವರು, ರೂಪರಸಾದಿ ಜ್ಞಾನವುಳ್ಳವರು ಸುಖಸ್ವರೂಪವುಳ್ಳವರು, ಸ್ವರೂಪಭೂತವಾದ, ಆನಂದಾನುಭವವನ್ನು ಅನುಭೋಗಿಸುತ್ತಾರೆ.

ಶ್ಲೋಕ ॥ ಸ್ವಾನಂದವಿಷಯೇ ಮೋಕ್ಷೇ ।
ವೇದೋಕ್ತೇ ಯುಕ್ತಿಸಾಧಿತೇ ॥
ದ್ವೇಷೋಽಯಂ ವಾದಿನಾ ಕಸ್ಮಾ ।
ತ್ತದ್ವಿರುದ್ಧೇಽಥ ವಾಗ್ರಹಃ ॥ ೬೨ ॥

ವಾರ್ಧಿಕ ॥ " ಅಕ್ಷಣ್ವಂತ ಸತತ್ರ ಪರ್ಯೇತಿ ಸೋಶ್ನುತೆ ।
ಲಕ್ಷಣಂ ನುಡಿ ವೇದ ಮೋಕ್ಷದಲಿ ಮುಕ್ತರುಂ ॥
ಚಕ್ಷು ಮೊದಲಾದ ಇಂದ್ರಿಯಗಳಿಂ ಸ್ವೇಚ್ಛೆಯಲಿ
ಸುಖವನನುಭೋಗಿಪರೆಸೊ ॥
ಪಕ್ಷ ಸಿದ್ಧಾಂತ " ಜ್ಞಾನಪ್ರಯತ್ನ ವಾಂಛಾನಿ " ।
ಈಕ್ಷಿಸದೆ ಈ ಯುಕ್ತಿ ಇತರರಿಗೆ ದೋಷವದು ॥
ಮೋಕ್ಷದಲಿ ಏಕೆ ಪುಟ್ಟಿತೊ? ತದ್ವಿರುದ್ಧಾಗ್ರಹಂ
ನಿರ್ಗುಣ ಬ್ರಹ್ಮ ಭಾವೇಂ ॥ ೬೨ ॥ ೮೭೧ ॥

ಹಾಗಾದರೆ, ಸಿದ್ಧಾಂತಿಗಳಾದ, ನಿಮ್ಮಿಂದ ಹೇಳಲ್ಪಟ್ಟ, ಮೋಕ್ಷಪ್ರಕಾರವನ್ನು ಅಂಗೀ ರಿಸದೆ, ವಾದಿಗಳು ಇದಕ್ಕೆ ವಿರುದ್ಧವಾದ ಮೋಕ್ಷ ಏಕೆ ಹೇಳುತ್ತಾರೆಂದು ಕೇಳಿದರೆ, ದಕ್ಕೆ ಉತ್ತರ.

ಅನ್ವಯ:-ಸ್ವಾನಂದ ವಿಷಯೇ, ವೇದೋಕ್ತೇ, ಯುಕ್ತಿಸಾಧಿತೇ, ಮೋಕ್ಷೇ, ವಾದಿನಾಂ, ಅಯಂ, ದ್ವೇಷಃ, ಕಸ್ಮಾತ್, ಅಥವಾ, ತತ್, ವಿರುದ್ಧೇ, ಆಗ್ರಹಾಃ, ಕಸ್ಮಾತ್.

ಅರ್ಥ:-ಸ್ವಾನಂದ ವಿಷಯೇ=ಸ್ವರೂಪಭೂತ ಆನಂದಭೋಗ್ಯವಾಗ್ಯುಳ್ಳ, ವೇದೋಕ್ತೆ= ವೇದದಿಂದ ನಿರೂಪಿತವಾದ, ಯುಕ್ತಿಸಾಧಿತೇ =ಯುಕ್ತಿಗಳಿಂದ ಸಾಧಿಸಲ್ಪಟ್ಟ, ಮೋಕ್ಷೆ= ಮೋಕ್ಷದ ವಿಷಯದಲ್ಲಿ, ವಾದಿನಾಂ=ವಾದಿಗಳಿಗೆ, ಅಯಂದ್ವೇಷಃ=ಯಾವ ಈ ದ್ವೇಷವು, ಕಸ್ಮಾತ್= ಯಾವ ಕಾರಣದಿಂದ, ಅಥವಾ ತದ್ವಿರುದ್ಧೇ= ತದ್ವಿರುದ್ಧವಾದ ನಿರ್ವಿಶೇಷ ಮೋಕ್ಷದಲ್ಲಿ, ಆಗ್ರಾಹಾಃ ಕಸ್ಮಾತ್=ದುರಾಭಿಮಾನವಾದ ಹಟವು ಯಾತರ ದೆಶೆಯಿಂದ? ಅವರ ಸ್ವಭಾವದ ಹೊರ್ತಾಗಿ ಎಂದರೆ ದ್ವೇಷಾಗ್ರಹಿಗಳಿಗೆ ಕಾರಣವನ್ನು ಕಾಣಲಾರೆವು.

ಭಾವಾರ್ಥ:— ಮುಕ್ತಿಯಲ್ಲಿ ಮುಕ್ತರು, ತಮ್ಮ ತಮ್ಮ ಸ್ವರೂಪಾನಂದ ಸುಖವನ್ನು ಅನುಭೋಗಿಸುತ್ತಲಿರುವರೆಂದು, ವೇದಗಳು ಹೇಳುತ್ತವೆ "ಯತ್ರಾನಂದಾಶ್ಚ ಮೋದಾಶ್ಚ ಮುದಪ್ರಮುದ ಆಸತೇ, ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮ್ಯತಂ ಕೃದೀಂದ್ರಾ ಯೋಂದ್ರೋ ಪರಿಶ್ರವೇ" "ಅಕ್ಷಣ್ವಂತ್ ಕರ್ಣವಂತಃ ಸಖಾಯಃ" ಸತಕ್ರಪ್ರರ್ಯೇತಿ, ಜಕ್ಷನ್‌ಕ್ರೀಡನ್, ರಮಮಾಣ ಸೋಸ್ನುತೇ ಸರ್ವಾನ್ ಕಾಮಾನ್ ಸಹೇತ್ಯಾದಿ, ಸಲ್ಲಕ್ಷಣ ವಾದ ವೇದವಾಕ್ಯಗಳು ಕಣ್ಣು ಕಿವಿ ಮೊದಲಾದ ಇಂದ್ರಿಯಗಳುಳ್ಳ ಮುಕ್ತರು ತಮ್ಮ ತಮ್ಮ ಇಷ್ಟ ಬಂದಂತೇ ಕ್ರೀಡಿಸುತ್ತಾ, ಸ್ವರೂಪಾನಂದವಾದ ಅಪ್ರಾಕೃತ ಸುಖವನ್ನು, ಮೋಕ್ಷ ದಲ್ಲಿ ಅನುಭೋಗಿಸುವರೆಂದು ವೇದವಚನದಿಂದ ಸಿದ್ಧವಾದದ್ದೆ. ಮತ್ತು ಜ್ಞಾನಪ್ರಯತ್ನ ವಾಂಛಾವಾನ್ ಮೊದಲಾದ ಈ ವಾಕ್ಯಗಳನ್ನು ನೋಡದೆ, ಹಿಂದೆ ಹೇಳಿದ ಯುಕ್ತಿಗಳಿಂದ ಸಾಧಿಸಿದ ಮೋಕ್ಷದಲ್ಲಿ ಇತರ ವಾದಿಗಳಿಗೆ ದ್ವೇಷವು ಯಾವ ಕಾರಣದಿಂದ ಹುಟ್ಟಿತೋ ಅಥವಾ ನಾವು ಹೇಳಿದ ಸಿದ್ಧಾಂತವಿರುದ್ಧವಾದ, ನಿರ್ವಿಶೇಷ ನಿರ್ಗುಣ ಬ್ರಹ್ಮಸ್ವರೂಪ ಮೋಕ್ಷವನ್ನೇ ಹೇಳಬೇಕೆಂಬ ದುರಾಗ್ರಹರೂಪವಾದ ಹಟವು ಯಾವ ಕಾರಣ ಹುಟ್ಟಿತೋ ತಿಳಿಯದು, ಆದರೂ ಇದರ ಮೂಲ ಕಾರಣ ಅವರವರ ನಿಜಸ್ವಭಾವವೇ ಹೊರ್ತಾಗಿ ಮತ್ತೊಂದಲ್ಲ.

ಶ್ಲೋಕ ॥ ತತಃ ಸ್ವತಃ ಪ್ರಮಾಣೇನ ।
ದೇವೋ ವೇದೇನ ವೇದಿತಃ ॥
ವಿಷ್ಣುರ್ಮೋಕ್ಷಸ್ಯ (ಮೋಕ್ಷಾದಿ) ದಾತೇತಿ ।
ವಿಶ್ವಂ ಭವತಿ ಶೋಭನಂ ॥ ೬೩ ॥

ವಾರ್ಧಿಕ || ಅಸ್ಮಿನ್ಮತಕೆ ವಿರುದ್ಧಾದ ಸಿದ್ಧಾಂತೆಲ್ಲ |
ಕಶ್ಮಲಪ್ರಾಮಾಣ್ಯವೆಂದು ಅವುಗಳಬಿಟ್ಟು ||
ತಾಂ ಸ್ವತಹ ಸಪ್ರಮಾಣಾಗಿರುವ ವೇದ ಪ್ರತಿಪಾದ್ಯ
ಗುಣಪೂರ್ಣ ದೇವಾ ||

ಮುಷ್ಮಿಕಂ ವೀವ ವಿಷ್ಣುವೆ ಎಂದು ಒಪ್ಪಿದರೆ ।
ತಸ್ಮಿನಾವೋಕ್ಷಾದಿ ಸಕಲ ಪ್ರಮೇಯವಂ ||
ನಿಶ್ಚಯದಿ ಮಂಗಳಕರಾಗುವವು ಯಾವದು
ವಿರೋಧನಿಷ್ಟಿಲ್ಲ ನೋಡೈ || ೬೩ || ೧೭೨ ||

ನಮ್ಮ ದ್ವೈತ ಸಿದ್ಧಾಂತಧಲ್ಲಿ ಪೇಳಿದಂತೆ ಅಧೋಕ್ಷಜನಾದ ಶ್ರೀಹರಿಯು ಮೋಕ್ಷ ವನ್ನು ಕೊಡುತ್ತಾನೆಂದು ಹೇಳಿ ಶ್ರೀ ಸರ್ವಜ್ಞರು ತಮ್ಮ ಉಪನ್ಯಾಸವನ್ನು ಉಪಸಂಹಾರ ಮಾಡುತ್ತಾರೆ.

ಅನ್ವಯ:— ತತಃ, ಸ್ವತಃ, ಪ್ರಮಾಣೇನ, ವೇದೇನ, ವೇದಿತಃ, ದೇವಃ, ವಿಷ್ಣುಃ, ಮೋಕ್ಷಾದಿದಾತಾ, ಇತಿ, ವಿಶ್ವಂ ಶೋಭನಂ, ಭವತಿ, ||

ಅರ್ಥ:— ತತಃ= ಇತರ ಮತಗಳು ಅಪ್ರಮಾಣವಾದ ಪ್ರಯುಕ್ತ ಸ್ವತಃ ಪ್ರಮಾಣೇನ= ತನ್ನಿಂದ ತಾನೆ ನಿಜವಾಗಿ ಸಿದ್ಧವಾಗಿರುವ ಪ್ರಮಾಣಗಳಿಂದ, ವೇದ ವೇದಿತಃ= ವೇದಗಳಿಂದ ಪ್ರತಿಪಾದಿಸಲ್ಪಟ್ಟಂಥ, ದೇವ=ಕ್ರೀಡಾದಿ ಗುಣವಿಶಿಷ್ಟನಾದಂಥ, ವಿಷ್ಣುಃ= ವ್ಯಾಪ್ತನಾದ ಶ್ರೀ ನಾರಾಯಣನು ಮೋಕ್ಷಾದಿದಾತಾ= ಮೋಕ್ಷಾದಿ ಸಕಲ ಪುರುಷಾರ್ಥ ಪ್ರದನು ಇತಿ =ಹೀಗೆ ಅಂಗೀಕಾರ ಮಾಡಿದರೆ, ವಿಶ್ವಂ= ಸಮುಸ್ತವಾದ ಮೋಕ್ಷಾದಿಗಳು ಶೋಭನಂ ಭವತಿ =ಮಂಗಳಕರವಾಗುವದು.

ಭಾವಾರ್ಥ:— ಅಸ್ಮಿನ್ ಮತಕೆ, =ನಮ್ಮ ದ್ವೈತ ಸಿದ್ಧಾಂತಕ್ಕೆ, ವಿರುದ್ಧವಾದ ಅದ್ವೈತಾದಿ ಮತಗಳು ಕಶ್ಮಲ=ಹೊಲಸಿನಿಂದ ತುಂಬಿದವು ದುಷ್ಟವಾದವು ಯಾಕಂದರೆ ವೇದಾದಿ ಪ್ರಮಾಣಗಳಿಗೆ ವಿರುದ್ಧವಾದ ಕಾರಣ ಅವುಗಳನೆಲ್ಲ ಬಿಟ್ಟು, ತಾನೆ ಸ್ವತಹ ವೇದಾದಿಗಳಿಂದ ಸರಿಯಾಗಿ ಪ್ರಮಾಣವಾಗಿರುವ, ವೇದಗಳಿಂದ ನಿತ್ಯ ಹೊಗಳಿಸಿಕೊಳ್ಳ ತಕ್ಕ ಮತ್ತೂ ಜ್ಞಾನಾನಂದಾದಿ ಗುಣಪರಿಪೂರ್ಣನೂ ಕ್ರೀಡಾದಿಗುಣವಿಶಿಷ್ಟನೂ ಸರ್ವತ್ರ ದಲ್ಲಿ ವ್ಯಾಪ್ತನಾದ ಶ್ರೀ ವಿಷ್ಣುವಾದ ನಾರಾಯಣನು, ಆಯುಷ್ಮಿಕಂ= ಮೋಕ್ಷವನ್ನು ಕೊಡುವನೆಂದು ನಿಜವಾಗಿ ತಿಳಿದು ಅಂಗೀಕರಿಸಿದರೆ, ಸಮುಸ್ತ ಮೋಕ್ಷಾದಿ ಪ್ರಮೇಯಗಳೆಲ್ಲವೂ ನಿಶ್ಚಯವಾಗಿ ಮಂಗಳಪ್ರದವಾಗುವವು. ಇದರಲ್ಲಿ ಯಾವ ವಿರೋಧವು (ಅನಿಷ್ಟ) ಹಾನಿಯೂ ಇಲ್ಲ.

**ಶ್ಲೋಕ || ಇತ್ಯಾದೀನ್ ದರ್ಶಯಂತ್ಯರ್ಥಾನ್ ।**
**ವ್ಯಾಖ್ಯೋಪನ್ಯಾಸ ಸಂಯುತಾ ||**
**ತ್ರಿವಿಕ್ರಮಾರ್ಯೇಣ ತದಾ ।**
**ವಿಶ್ವಾಭಿಜ್ಞಸ್ಯ ಶುಶ್ರುವೇ || ೬೪ ||**

ಭಾಮಿನಿ || ಏವಮಾದಿ ಪ್ರಮೇಯ ಬಹುವಿಧ |
ಕೇವಲಂ ಸವಿಶೇಷ ಸಾಧಿಪ |
ಆವ ವಿಶ್ವಾಭಿಜ್ಞಪೂರ್ಣರ ಮುಖಕಮಲದಿಂದ ||

ಭಾವಶಾಸ್ತ್ರವಬೋಧ ಪ್ರವಚನ |
ಗೈವ ಕಾಲದಲೊಂದು ಬಿಡದಲೆ |
ಯಾವ ವಿಕ್ರಮ ಪಂಡಿತರು ಕೇಳಿದರು ಮನಮುಟ್ಟಿ ||
|| ೬೪ || ೮೭೩ ||

ಶ್ರೀ ಸರ್ವಜ್ಞರು, 'ತದಾತದಾನಾನಾಂಭೋಜ' ಈ ಶ್ಲೋಕವನ್ನಾರಂಭಿಸಿ ೬೩ ಶ್ಲೋಕ ಪರಿಯಂತರ ಉಪನ್ಯಾಸಭಾರತಿಯನ್ನು ಮುಗಿಸಿ 'ತ್ರಿವಿಕ್ರಮಾರ್ಯಸ್ಸೋಪಶ್ಯನ್' ಇದನೆಲ್ಲಾ ತ್ರಿವಿಕ್ರಮಾರ್ಯರು ನೋಡಿ ಕೇಳಿ ಮುಂದೇನು ಮಾಡಿದರೆಂಬ ಪ್ರಕೃತ ವಿಷಯವನ್ನು ಹೇಳುತ್ತಾರೆ.

ಭಾವಾರ್ಥ:— ಇವೆ ಮೊದಲಾಗಿ ಪೂರ್ವೋಕ್ತವಾದ ಬಹು ವಿಶೇಷ ಪ್ರಮೇಯಗಳನ್ನು ಪ್ರತಿಪಾದಿಸುತ್ತ ಶ್ರೀಹರಿಯು ಅನಂತಗುಣಪೂರ್ಣನೆಂದು ಸಾಧನೆ ಮಾಡಿದ ಯಾವ 'ವಿಶ್ವಾಭಿಜ್ಞ= ವಿಶ್ವಂ ಅಭಿತಃ ಸಮ್ಯಕ್ ಜಾನಾತೀತಿ ವಿಶ್ವಾಭಿಜ್ಞ ಸಕಲವನ್ನು ಚನ್ನಾಗಿ ತಿಳಿದ ಶ್ರೀ ಪೂರ್ಣಪ್ರಜ್ಞಾಚಾರ್ಯರ ಮುಖಕಮಲದಿಂದ ಹೊರಟ ಉಪನ್ಯಾಸ ಭಾರತಿಯ ಭಾವ= ಮರ್ಮ ಶಾಸ್ತ್ರವ ಬೋಧ ಪ್ರವಚನ = ವಿಶೇಷ ಅರ್ಥಗರ್ಭಿತವಾದ ಸಕಲ ಶಾಸ್ತ್ರಮರ್ಮವನ್ನು ತಿಳಿಸುವ ಯಾವ ವ್ಯಾಖ್ಯಾನವನ್ನು ಗೈವ= ಹೇಳುವ ಕಾಲದಲ್ಲಿ, ಒಂದೂ ಬಿಡದೆ ತ್ರಿವಿಕ್ರಮಾಚಾರ್ಯರು ಮನಮುಟ್ಟಿ ಸ್ವಸ್ಥಚಿತ್ತದಿಂದ ಕೇಳಿದರು.

**ಶ್ಲೋಕ || ಅಥ ಪ್ರಾಯುಙ್ಕ್ತ ವಿವಿಧಾನ್ |**
**ಬೋಧ ಚಾಪಗುಣೇರಿತಾನ್ ||**
**ವಿಪಕ್ಷಯುಕ್ತಾನ್ ವೀರ್ಯೇಣ |**
**ತೀಕ್ಷ್ಣಾಂಸ್ತರ್ಕಶರಾನಸೌ || ೬೫ ||**

ಭಾಮಿನಿ || ಸರಸ ಮಧ್ವರ ವ್ಯಾಖ್ಯ ಮುಗಿಯಲು |
ವರ ತ್ರಿವಿಕ್ರಮರಾರ್ಯ ವಿಧ ವಿಧ |
ತರಕ ಯುಕ್ತಿಯ ಶರಗಳಂ ಜ್ಞಾನದ ಧನುಗುಣದಿ ||

ಭರಿತ ಮಧ್ವ ವಿರುದ್ಧ ಯುಕ್ತಿಲಿ ।
ನಿರುತ ಪ್ರತಿಭಟನಿಂಗೆ ವೀರ್ಯದಿ ।
ಶರಗಳೆಚೆಯೆ ವಿಪಕ್ಷ ಸಾಯಕವಂ ಪ್ರಯೋಗಿಸಿದರ್ ॥
॥ ೬೫ ॥ ೭೬೪ ॥

ಭಾವಾರ್ಥ:— ಸರಸ ಯಾವ ಪ್ರಮೇಯ ಪ್ರಮಾಣಗಳಿಗೂ ವಿರುದ್ಧವಿಲ್ಲದೇ, ನಡುವೆ ನಿಲ್ಲದೇ ಒಂದೇ ರೀತಿಯಾಗಿ ಪೇಳುವ ಶ್ರೀ ಪೂರ್ಣಪ್ರಜ್ಞರ ರಸಭರಿತವಾದ ವ್ಯಾಖ್ಯಾನ ಮುಗಿದನಂತರದಲ್ಲಿ, ವರಬುದ್ಧಿ ಬಲದಿಂದ, ಶ್ರೀಷ್ಮರಾದ ಆತ್ರಿವಿಕ್ರಮ ಪಂಡಿತರು ಅನೇಕ ವಿಧವಾದ ತರತರದ ಯುಕ್ತಿಗಳೆಂಬ ಬಾಣಗಳನ್ನು ಬುದ್ಧಿ ಬಲವೆಂಬ ಜ್ಞಾನರೂಪವಾದ ಧನುಸ್ಸಿನ ಗುಣ= ಹಗ್ಗದಿಂದ ಶ್ರೀ ಪೂರ್ಣಪ್ರಜ್ಞರ ದ್ವೈತ ಸಿದ್ಧಾಂತಕ್ಕೆ ಪೂರ್ಣ ವಿರೋಧಪಕ್ಷದಿಂದ ಕೂಡಿದ ಯುಕ್ತಿಗಳನ್ನು ಪ್ರಯೋಗಿಸಿದರು. ಹೇಗೆಂದರೆ ಯುದ್ಧದಲ್ಲಿ ವೀರನು ತನ್ನೆದುರಿಗೆ ನಿಂತು ತನ್ನೊಡನೆ ಯುದ್ಧ ಮಾಡುವ ವೈರಿಗೆ ಬಾಹುಬಲದಿಂದ ಹದನವಾದ ಸಾಯಕ ಅಸ್ತ್ರಗಳನ್ನು ಎಚೆಯೆ= ಬಿಡುವಂತೆ ಶ್ರೀ ಸರ್ವಜ್ಞರು ಹೇಳಿದ ವಿಷಯಗಳಲ್ಲಿ ಅನೇಕ ಪೂರ್ವಪಕ್ಷರೂಪ ಯುಕ್ತಿಗಳೆಂಬ ಬಾಣಗಳನ್ನು ಪ್ರಯೋಗಿಸಿದರು. ತರ್ಕಶಾಸ್ತ್ರ ನಿಪುಣರಾದ ತ್ರಿವಿಕ್ರಮರು ಮಧ್ವರ ಮೇಲೆ ಅನೇಕ ಕೋಟಿ ಕ್ರಮಗಳನ್ನು ಹೇಳಿದರು.

**ಶ್ಲೋಕ ॥ ಚಿಚ್ಛೇದಾ ತುಚ್ಛಧಿಷಣಸ್ತಾಂ ।**
**ಸ್ತದಾ ತರ್ಕ ಸಾಯಕೈಃ ॥**
**ಪ್ರಯುಕ್ತಮಾತ್ರಾನ್ ಪ್ರಹಸನ್ ।**
**ಲೀಲಯಾತಿಶಯಾಲುಭಿಃ ॥ ೬೬ ॥**

ಭಾಮಿನಿ ॥ ಇನಿತು ವಿಕ್ರಮ ವಾವಿಸಿದೊಡಂ ।
ಮನದನಲ್ಪರು ಮಧ್ವನಗುತಲಿ ।
ಘನ ಯುಕುತಿ ಬಾಣಗಳ ಮೀರುವ ಪ್ರಬಲತರವಾದ ॥

ಸನುಮತದ ತರ್ಕಗಳ ಬಾಣಗಳ ।
ಳನು ಪ್ರಯೋಗಿಸಿ ಲೀಲೆಯುಲಿ ತ ।
ಕ್ಷಣ ನಿರಾಕರಿಸಿದರು ವೀರನು ವೈರಿ ಖಂಡಿಸಿ·
ದೋಲ್ ॥ ೬೬ ॥ ೭೬೫ ॥

ಭಾವಾರ್ಥ:— ಈ ಪ್ರಕಾರವಾಗಿ ತ್ರಿವಿಕ್ರಮ ಪಂಡಿತರು ಅನೇಕ ಯುಕ್ತಿಗಳಿಂ ಕೂಡಿದ ಪೂರ್ವಪಕ್ಷವನ್ನು ಹೇಳಿ ವಾದ ಮಾಡಿದ ಕೂಡಲೇ ಮನದನಲ್ಪರು=ಅಲ್ಪ ಮನಸ್ಸಾಗದೇ ಇರುವ ಮಹಾಮುನರಾದ ಶ್ರೀ ಪೂರ್ಣ ಪ್ರಜ್ಞರು ಯಾವ ವಿಚಾ ಮಾಡದೇ ಅನಾಯಾಸದಿಂದಲೇ ನಗುತ್ತ ಆತ್ರಿವಿಕ್ರಮರ ಯುಕ್ತಿಗಳನ್ನು ಮೀರುವ ಮಹ ತ್ತಾಗಿ ಪ್ರಬಲತರವಾದುವು, ಸನುಮತ=ಶಾಸ್ತ್ರಸಮ್ಮತವಾದ ಅನೇಕ ಯುಕ್ತಿಗಳೆಂಬ ಬಾಣಗಳನ್ನು ಪ್ರಯೋಗಿಸುತ್ತ ಮಹಾ ಸಮರ್ಥನಾದಂಥಾ ವೀರನು ತನ್ನ ಶತ್ರುವಿ ಬಾಣಗಳನ್ನು ಪ್ರತಿಬಾಣಗಳಿಂದ ಖಂಡಿಸಿದಂತೆ ತ್ರಿವಿಕ್ರಮರ ಯುಕ್ತಿಗಳನ್ನು ಪ್ರಬಲತ ವಾದ ಯುಕ್ತಿಗಳಿಂದ ಖಂಡಿಸಿದರು.

ವಿಚಾರ ಮಾಡದೇ ತಕ್ಷಣ ನಿರಾಕರಿಸಿದ್ದು ಶ್ರೀ ಸರ್ವಜ್ಞರ ಪ್ರತಿಭಾಶಕ್ತಿಯೂ ಮತ್ತು ಹಸನ್ಮುಖರಾಗಿ ನಗುತ್ತ ವಾದಿಯ ಶಕ್ತಿಯನ್ನು ಖಂಡಿಸಿದ್ದು ವಾದ ಮಾಡುವಾಗ್ಗ ವಾದಿಗಳ ಎದುರಿನಲ್ಲಿ ಕೋಪ ಭಯಕಂಪನಾದಿ ದೋಷಗಳು ಅಲ್ಪರಂತೇ ಶ್ರೀ ಸರ್ವಜ್ಞ ರಲ್ಲಿರಲಿಲ್ಲವೆಂದು ತೋರಿದರು. ಇದು ಪೂರ್ಣ ಪಾಂಡಿತ್ಯ ಲಕ್ಷಣವು. ಅನಲ್ಪರು= ಪೂರ್ಣ ಮನವುಳ್ಳವರು.

**ಶ್ಲೋಕ ॥ ಅಥಾಯರ್ೂಣೇತರಜನ್ಯೈ ।**
**ರನಿ ವರ್ತ್ಯಾನಿ (ನಾಯರ್ೂಣಿ) ಪೂರುಷೈಃ ॥**
**ವಿಜಿಗೀಷುರ್ದ್ವಿಜ ಶ್ರೇಷ್ಠೋ ।**
**ವೇದಾಸ್ತ್ರಾಣಿ ಪ್ರಯುಕ್ತವಾನ್ ॥ ೬೭ ॥**

ಭಾಮಿನಿ । ಜಯಿಸಲಿಚ್ಛಿಪ ಬ್ರಾಹ್ಮಣೋತ್ತಮ ।
ಸ್ವಯಮೆ ಸೋಲ್ದಾ ಕ್ಷಾತ್ರವರತಾ ।
ಭಯರಹಿತ ಅಸ್ತ್ರ ಬಿಡೊ ತೆರ ವೇದವಾಕ್ಯಗಳ ॥

ನಿಯಮದಿಂ ತ್ರೈವರ್ಣ ದಿತರರು ।
ನಯದಿ ಕೇಳೆಲ್ಪರು ಅಧಾರ್ಯದ ।
ಜಯ ಶ್ರುತಿ ಪ್ರತೀತಾರ್ಥ ಪ್ರತ್ಯಸ್ತ್ರಗಳ
ಬಿಡಲಾಗ ॥ ೬೭ ॥ ೮೭೬ ॥

ಭಾವಾರ್ಥ:- ಶ್ರೀಮಧ್ವರನ್ನು ಜಯಿಸಬೇಕೆಂಬ ಆಶೆಯುಳ್ಳ ಬ್ರಾಹ್ಮಣ ಶ್ರೇಷ್ಠ ರಾದಂಥ ಆ ತ್ರಿವಿಕ್ರಮಪಂಡಿತರು, ಯುದ್ಧದಲ್ಲಿ ವೀರನು ತನ್ನ ಅಸ್ತ್ರಗಳನ್ನು ಪ್ರತಿವೀರನು ಖಂಡಿಸಲಾಗಿ ಬಾಣಯುದ್ಧದಲ್ಲಿ ಪರಾಜಿತನಾದ ಕ್ಷತ್ರಿಯನು ಅಂಜದಲೇ ವೈರಿಯನ್ನು

ಖಂಡಿಸಲಿಕ್ಕೆ ಅಸಾಧ್ಯವಾದ ಎರಡನೇ ಅಸ್ತ್ರಗಳನ್ನು ಶತ್ರುವಿನ ಮೇಲೆ ಬಿಡುವಂತೆ, ಶ್ರೀ ಪೂರ್ಣಪ್ರಜ್ಞರು ತ್ರಿವಿಕ್ರಮರ ಯುಕ್ತಿಗಳನ್ನು ಪ್ರಬಲತರವಾದ ಯುಕ್ತಿಗಳಿಂದ ಖಂಡಿಸಲಾಗಿ ಪುನಹ ಧೈರ್ಯದಿಂದ ತ್ರಿವಿಕ್ರಮರು ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರುಗಳಿಂದ ಇತರರಾದ ಬೇರೆ ಜನರು ವೇದಗಳನ್ನು ಕೇಳಲು ಅಧಿಕಾರವಿಲ್ಲದ ಶೂದ್ರರಿಂದಲೂ ಮತ್ತು ಅಲ್ಪರು ಅಥಾರ್ಯದ= ಕೇಳಿದ್ದನ್ನು ಧಾರಣ ಮಾಡುವ ಶಕ್ತಿ ಇರದಿದ್ದ ಅಲ್ಪಜ್ಞರಾದ ಬ್ರಾಹ್ಮಣರೂ ಸಹ ತಿಳಿಯಲಿಕ್ಕೆ ಅಶಕ್ಯವಾದವೂ ಇತರರಿಂದ ಪ್ರತೀತಾರ್ಥ=ನಿವಾರಿಸಲು ಅಶಕ್ಯವಾದ, ವೇದ ವಾಕ್ಯಗಳ ಸಮೂಹವೆಂಬ ಪ್ರತ್ಯಸ್ತ್ರಗಳನ್ನು ಬಿಟ್ಟರು.

ಅಂದರೆ ತ್ರಿವಿಕ್ರಮರ ಯುಕ್ತಿಗಳನ್ನು ಶ್ರೀಮದಾಚಾರ್ಯರು ಖಂಡಿಸಲಾಗಿ ತಿವಿಕ್ರಮರು ವೇದ ವಾಕ್ಯವನ್ನು ಪುನಃ ಹೇಳಿ ಸಾವಕಾಶ ವೇದವಾಕ್ಯದ ಪೂರ್ವಪಕ್ಷವನ್ನು ಮಾಡಿದರು.

**ಶ್ಲೋಕ ॥ ವಾಕ್ಯೈರತಿ ಬಲಿಯೋಭಿಃ ।**
**ಪ್ರತ್ಯಸ್ತ್ರೈರಿವ ವೈದಿಕ್ಯೈಃ ॥**
**ಅರ್ಥಾಂತರಂ ಪ್ರಕಟಯಂಸ್ತಾ ।**
**ನ್ಯಸೌ ಸನ್ಯವರ್ತಯತ್ ॥ ೬೮ ॥**

ಭಾಮಿನಿ ॥ ಬಲಿದ ಮಧ್ವರು ವಾದಿ ಪೇಳಿದ ।
ಸುಲಭದಿಂ ಆ ವೇದ ದರ್ಥವ ।
ಸಲೆ ನಿರಾಕರಿಸಿದರು ಅತಿ ಬಲನಿರವಕಾಶ ಶ್ರುತೀ ॥

ಗಳನೆ ಪೇಳುತ ವೇದ ವಾಕ್ಯಕೆ ।
ಹಲವು ಅರ್ಥಾಂತರ ನಿರೂಪಿಸಿ ।
ಗೆಲಿಯೆ ವೀರನು ವೈರಿಯಸ್ತ್ರವ ಖಂಡಿಸಿದ ತೆರದಿ ॥ ೬೮ ॥ ೮೭೭ ॥

ಭಾವಾರ್ಥ:- ಆಗ್ಗೆ ಬಲಪೂರ್ಣರು ಜ್ಞಾನಪೂರ್ಣರಾದ ಶ್ರೀ ಸರ್ವಜ್ಞರು ಪ್ರತಿವಾದಿಗಳಾದ ತ್ರಿವಿಕ್ರಮರು ಹೇಳುವ ಸಾವಕಾಶ ವೇದ ವಾಕ್ಯಗಳಿಗೆ ಅವರು ಹೇಳಿದ ಅರ್ಥ ಸರಿಯಲ್ಲವೆಂದು ಅತಿ ಬಲಿಷ್ಠವಾದ ನಿರವಕಾಶ ಶ್ರುತಿಗಳನ್ನು ಹೇಳುತ್ತ ಅದಕ್ಕೆ ಸರಿಯಾಗಿರುವ ಬೇರೆ ಅರ್ಥವನ್ನು ಹೇಳಿ ವೀರನು ವೈರಿಗಳನ್ನು ಗೆಲ್ಲಲು ಅವರ ಬಾಣಗಳನ್ನು ಖಂಡಿಸುವಂತೆ, ತ್ರಿವಿಕ್ರಮರು ಪೇಳಿದ ಸಾವಕಾಶ ವೇದವಾಕ್ಯಗಳ ಅರ್ಥ ಹೇಳಿದ್ದು ನಿನ್ನಗೆ ಅನುಕೂಲವಾದ ಅರ್ಥ ಹೇಳುವದಿಲ್ಲವೆಂದು ಖಂಡಿಸಿ; ತಾವು ತ್ರಿವಿಕ್ರಮರಿಂದ ಖಂಡಿಸಲಸಾಧ್ಯವಾದ ಆ ವೇದ ವಾಕ್ಯಗಳಿಗೆ ಅರ್ಥಾಂತರವನ್ನು ಸಾಧಿಸಿದರು.

**ಶ್ಲೋಕ ॥ ಸಪ್ತಾಷ್ಟಾನಿ ದಿನಾನ್ಯೇವಂ ।**
**ವಾದಂ ಕೃತ್ವಾ ಸಹಾಮುನಾ ॥**
**ನಿರುತ್ತರಂ ತಂನಿಶ್ಚೋದ್ಯಂ ।**
**ಚಕ್ರೇ ಚಕ್ರಾಯುಧ ಪ್ರಿಯಃ ॥ ೬೯ ॥**

ಭಾಮಿನಿ ॥ ಅತ್ಯಧಿಕ ಪ್ರಿಯ ಚಕ್ರಧರನಿಗೆ ।
ಸ್ತುತ್ಯ ಮಧ್ವರು ಇನಿತು ಕ್ರಮದಿಂ ।
ನಿತ್ಯದಿ ವಿರಾಮಿರದೆ ವಿಕ್ರಮರೊಡನೆ ವಾದವನು ॥
ಹತ್ತು ಮೇಲಾದೈದು ದಿನದಿ ನಿ ।
ರುತ್ತರರ ನಿಶ್ಚೋದ್ಯ ಮಾಡಿದ ।
ಕೃತ್ಯಕಾವಾಗಲೆ ತ್ರಿವಿಕ್ರಮ ಮಧ್ವರಿಗೆ ತಾವು ॥ ೬೯ ॥ ೨೭೮ ॥

ಭಾವಾರ್ಥ:— ಚಕ್ರಾಯುಧವನ್ನು ಧರಿಸಿದ ಶ್ರೀಮನ್ನಾರಾಯಣನಿಗೆ ಅತ್ಯಂತ ಪ್ರಿಯ ಅಚ್ಛಿನ್ನ ಭಕ್ತರಾದ ಸ್ತುತ್ಯ=ರುದ್ರಾದಿ ಇತರರಿಂದ ಸ್ತೋತ್ರ ಮಾಡಿಸಿಕೊಳ್ಳುವ ಮಧ್ವರು ಈ ಪ್ರಕಾರವಾಗಿ ವಿರಾಮವಿಲ್ಲದೆ (೭+೮=೧೫) ಸಪ್ತಾಷ್ಟ=ಹದಿನೈದು ದಿನಗಳ ವರೆಗೆ ಅಂದರೆ ಪ್ರತಿಪದೆಯಾರಂಭಿಸಿ ಪೌರ್ಣಿಮೆಯುವರೆಗೆ ಎಡಬಿಡದೆ ವಾದವನ್ನು ಮಾಡಿ ಆ ತ್ರಿವಿಕ್ರಮರನ್ನು ಪ್ರತ್ಯುತ್ತರವಿಲ್ಲದವರಂತೆ, ಮತ್ತು ನಿಶ್ಚೋದ್ಯ=ಪ್ರಶ್ನವೂ ಇಲ್ಲದವರನ್ನಾಗಿ ಮಾಡಿದರು.

**ಶ್ಲೋಕ ॥ ಪ್ರಣಮ್ಯಾಚಷ್ಟ ಶಿಷ್ಯೋಽಸೌ ।**
**ಕ್ಷಮ್ಯತಾಂ ನಾಥ ಚಾಪಲಮ್ ॥**
**ಪದಪದ್ಮ ರಜೋ ದಾಸ್ಯಂ ।**
**ಧ್ರುವಂ ಮೇದೀಯತಾಮಿತಿ ॥ ೭೦ ॥**

ಭಾಮಿನಿ ॥ ಬೇಡಿಕೊಂಡರು ಶಿಷ್ಯ ವಿಕ್ರಮ ।
ಮಾಡಿ ನಮನವ ನಾಥ ಮಧ್ವರೆ ।
ಮೂಢ ತವಮ್ಮೊಡ ವಾದಿಸಿದ ಚಾಪಲ್ಯವಂ ಕ್ಷಮಿಸೈ ॥
ಪ್ರೌಢ ಶಾಶ್ವಿತ ತವಪದುಮ ಪದ ।
ಗಾಢ ಧೂಳಿಯ ನೈಜ ದಾಸ್ಯವ ।
ನೀಡಿ ರೆನ್ನಗೆ ನೀವೆನುತ ತಾಂ ಜೋಡಿಸಿದ ಕೈಯ್ಯಾ ॥೭೦॥೨೭೯॥

ಭಾವಾರ್ಥ:— ಈ ಪ್ರಕಾರವಾಗಿ ಶ್ರೀಮಧ್ವರು ತ್ರಿವಿಕ್ರಮ ಪಂಡಿತರನ್ನು ಸೋಲಿಸಿದ್ದಕ್ಕಾಗಿ ಆ ಕ್ಷಣವೇ ಶಿಷ್ಟ= ಸಜ್ಜನ ಉತ್ತಮ ಜೀವಿಯಾದ ತ್ರಿವಿಕ್ರಮಾಚಾರ್ಯರು ಶ್ರೀ ಸರ್ವಜ್ಞರಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ, ಹೇನಾಥ= ಒಡೆಯ ಸ್ವಾಮಿಯಾದ ಮಧ್ವರೆ ನಾನು ಮೂಢನು ಮಂದಮತಿಯು, ತಿಳಿಯದೇ ಮಹತ್ಮರಾದ ತಮ್ಮ ಕೂಡ ವಾದ ಮಾಡಿದ, ಚಾಪಲ್ಯ= (ಬಾಲಬುದ್ಧಿ) ಹುಡುಗ ಬುದ್ಧಿಯ ತಪ್ಪನ್ನು ಕ್ಷಮಿಸಿರಿ. ಪ್ರೌಢ= ಮಹಾ ಪಂಡಿತರಾದ ಮಧ್ವಾಚಾರ್ಯರೇ ಅತ್ಯಂತ ಶಾಶ್ವತವಾದ ಎಂದೆಂದಿಗೂ ಅಗಲದೇ ಇದ್ದ ಶೀತವಾದ ತಮ್ಮ ಪಾದ ಪದ್ಮಗಳ ಗಾಢ=ಅತಿಶಯವಾದ ಧೂಳಿಯ ದಾಸವೃತ್ತಿಯಾದ ಸೇವೆಯನ್ನು ಎನಗೆ ನೀಡಿರಿ= ಕೊಡಿರೆಂದು ಬಹು ದೈನ್ಯದಿಂದ ಕೈಜೋಡಿಸುತ್ತ ಪ್ರಾರ್ಥಿಸಿದರು.

**ಶ್ಲೋಕ॥ ವ್ಯಾಖ್ಯಾಂ ಭಾಷ್ಯಸ್ಯ ಭೂಯೋಧೀಃ ।**
**ಶ್ರವಣಂ ಸೂರಿ ನಂದನಃ ॥**
**ಸಂತಃ ಪ್ರೀತಿಮಸಂತೋಽಸ್ಯಾಂ ।**
**ಸಮವಾರೇಭಿರೇ ತತಃ ॥ ೭೧ ॥**

ಭಾಮಿನಿ ॥ ಇನಿತವರ ಪ್ರಾರ್ಥನೆಯ ಮನ್ನಿಸಿ ।
ಘನದ ಪೂರ್ಣಧಿ ಗ್ರಹಿಸಿ ಶಿಷ್ಯರ ।
ಸನು ಮತದ ಸೂತ್ರಾರ್ಥ ಭಾಷ್ಯುಪ ದೇಶ ಉಪಕ್ರಮಿಸೆ ॥

ಮನದಿ ಕೇಳಲು ಸೂರಿನಂದನ ।
ಗನುಸರಿಸಿ ಸಜ್ಜನರು ಪ್ರೀತಿಯ ।
ಕುನರುಗಳು ಮಹದ್ವೇಷವಾರಂಭಿಸಿದ ರ್‍ಯಗ
ಪದದಿ ॥ ೭೧ ॥ ೩೩೦ ॥

ಭಾವಾರ್ಥ:— ಈ ಪ್ರಕಾರವಾಗಿ ತ್ರಿವಿಕ್ರಮಾಚಾರ್ಯರ ಪ್ರಾರ್ಥನೆ= ಬೇಡಿಕೊಂಡಿದ್ದನ್ನು ಮನ್ನಿಸುವರಾಗಿ, ಘನದ ಪೂರ್ಣಧಿ= ಮಹತ್ಮರಾದ ಪೂರ್ಣ ಮತಿಗಳು ತಮ್ಮ ನಿಜ ಶಿಷ್ಯರನ್ನು ಮಾಡಿಕೊಂಡು ನೀತವಾದ ದಾಸ್ಯತ್ವವನ್ನು ಪಾಲಿಸಿ ಸನುಮತದ= ಸರ್ವರಿಂದ ಮಾನ್ಯವಾದ ಬ್ರಹ್ಮಸೂತ್ರಗಳಿಗೆ ತಾವು ರಚಿಸಿದ ಭಾಷ್ಯಾರ್ಥವನ್ನು ಉಪದೇಶ ಮಾಡಲಾರಂಭಿಸಿದರು. ಸೂರಿನಂದನ =ಪಂಡಿತರ ಪುತ್ರರಾದ ತ್ರಿವಿಕ್ರಮಾಚಾರ್ಯರು, ಶ್ರೀಮಧ್ವಭಾಷ್ಯ ಮತ್ತು ಭಾಷ್ಯಾರ್ಥವನ್ನು ಶ್ರವಣ ಮಾಡುತ್ತ ಮನಸಿನಿಂದ

ಕೇಳಲಾರಂಭಿಸಿದರು. ಇಂತು ತ್ರಿವಿಕ್ರಮಾರ್ಯರಿಗೆ ಶ್ರೀ ಸರ್ವಜ್ಞರು ಉಪದೇಶಿಸುವದಕ್ಕೂ, ತ್ರಿವಿಕ್ರಮಾರ್ಯರು ಕೇಳುವದಕ್ಕೂ, ಆರಂಭಿಸಿದ್ದನ್ನು ನೋಡಿ ಅವರಿಗೆ ಅನುಸಾರಿಯಾದ ಸಜ್ಜನರು ಸಂತೋಷ ಪಡಲಿಕ್ಕೂ, ಈ ವಿಷ್ಣು ಭಕ್ತರಾದ ಉಭಯರಲ್ಲಿ ದ್ವೇಷ ಮಾಡತಕ್ಕ ದುರ್ಜನರು, ದ್ವೇಷರೂಪವಾದ ಅಸಂತೋಷವನ್ನು ಹೊಂದಲಿಕ್ಕೂ ಏಕ ಕಾಲದಲ್ಲಿ ಆರಂಭಿಸಿದರು. ತ್ರಿವಿಕ್ರಮರು ಯಾವಾಗ್ಗೆ ವಾದದಲ್ಲಿ ಪರಾಜಿತರಾಗಿ ಸೋತು ಶ್ರೀಮದಾಚಾರ್ಯರ ಶಿಷ್ಯರಾಗಿ ಅವರಿಂದ ದ್ವೈತ ಭಾಷ್ಯ ವ್ಯಾಖ್ಯಾನವನ್ನು ಕೇಳಲಿಕ್ಕಾರಂಭಿಸಲು ಯುಗಪದಿ= ಆ ಒಂದೇ ಕಾಲದಲ್ಲಿ ಸಜ್ಜನರು ಸಂತೋಷ ಹೊಂದಿದರು. ಮಾಯಾವಾದಿಗಳಾದ ಅದ್ವೈತರು ಅಯ್ಯೋ, ನಮ್ಮ ಅದ್ವೈತ ಮತ ಮುಖ್ಯ ಪಂಡಿತರೇ ಸೋತು ಶ್ರೀ ಮಧ್ವರಿಗೆ ಶಿಷ್ಯರಾದರು ಇನ್ನೇನು ಗತಿಯೆಂದು ದುಃಖವನ್ನು ಹೊಂದಿದರು.

**ಶ್ಲೋಕ ॥ ಗುರ್ವಾಜ್ಞಾ ಗೌರವಾಟ್ಟೀಕಾಂ ।**
**ಕುರ್ವನ್ ಭಾಷ್ಯಸ್ಯ ದುಷ್ಕರಾಮ್ ॥**
**ಷಡರ್ಧ ವಿಕ್ರಮಾರ್ಯೋsಸೌ ।**
**ಮಹಾಚಾರ್ಯ ಮಪೋಚತ ॥ ೭೨**

ಭಾಮಿನಿ ॥ ಗಡ ಷಡರ್ಧ ವಿಕ್ರಮರು ಗುರುಗಳ ।
ಧೃಡತರಾಜ್ಞೆಯ ಗೌರವದಲಿ ।
ಕಡುಗುರು ಪ್ರಸಾದಿಲ್ಲದಲೆ ಮಾಡಲು ಅಸಾಧ್ಯಾದ ॥

ಒಡೆಯ ಮಧ್ವರ ಸೂತ್ರ ಭಾಷ್ಯಕೆ ।
ಒಡನೆ ತತ್ವಪ್ರದೀಪ ಟೀಕೆಯ ।
ಸಡಗರದಿ ಮಾಡುತ ಮಹಾಚಾರ್ಯರ
ಕುರಿತು ನುಡಿದರ್ ॥ ೭೨ ॥ ೮೮೧ ॥

ಭಾವಾರ್ಥ :— ಗಡ= ತ್ವರತದಿಂದ, ಷಡರ್ಧ= ಆರರ್ಧ ಮೂರು= ತ್ರಿವಿಕ್ರಮ ಪಂಡಿತಾಚಾರ್ಯರು, ಧೃಢತರಾಜ್ಞೆಯ ಗೌರವದಲಿಂ= ಗುರುಗಳ ವಚನವೆಂಬ ಗುರುವಾಜ್ಞೆಯ ಮೇಲಿನ ಬಹು ಮರ್ಯಾದಾಯುಕ್ತ ಒಳ್ಳೇ ನಿಶ್ಚಯವಾದ ನಂಬಿಕೆಯಿಂದ ಚನ್ನಾಗಿ ಗುರುಗಳ ಅನುಗ್ರಹರೂಪ, ಪ್ರಸಾದವಿಲ್ಲದಲೇ ಮಾಡಲಿಕ್ಕೆ ಅಸಾಧ್ಯವಾದ, ಸ್ವಾಮಿಯಾದ ಶ್ರೀ ಮಧ್ವಾಚಾರ್ಯರು ರಚಿಸಿದ ಬ್ರಹ್ಮಸೂತ್ರ ಭಾಷ್ಯಕ್ಕೆ ಒಡನೆ= ಆಗಲೇ ಆ ಭಾಷ್ಯಾರ್ಥ ಕೇಳಿದಾಕ್ಷಣವೇ 'ತತ್ವ ಪ್ರದೀಪವೆಂಬುವ' ಹೆಸರುಳ್ಳ ಟೀಕಾ ಗ್ರಂಥವನ್ನು ಸಡಗರದಿ=ಬಹು ಉತ್ಸಾಹದಿಂದ ಮಾಡುತ್ತ ಮಹಾಚಾರ್ಯರ= ಶ್ರುತ್ಯಾದಿ

ಗಳಿಗೆ ಮುಖ್ಯ ವ್ಯಾಖ್ಯಾನ ಕರ್ತೃಗಳಾದ ಶ್ರೀಮದಾಚಾರ್ಯರನ್ನು ಕುರಿತು ಈ ಪ್ರಕಾರ ವಾಗಿ ನುಡಿದರು.

**ಶ್ಲೋಕ ॥ ಕವೀಂದ್ರೈರ್ನ ಸಮಾಪ್ಯಂತೇ ।**
**ಸಂಗ್ರಹ್ಯಾಪಿ ಯತೋಽನಿಶಮ್ ॥**
**ನ್ಯಾಯರತ್ನಾನಿ ಭಾಷ್ಯಾಬ್ಧೇ ।**
**ರಸ್ಯ ಗಾಂಭೀರ್ಯಮದ್ಭುತಮ್ ॥ ೭೩ ॥**

ಭಾಮಿನಿ ॥ ಯಾವ ಭಾಷ್ಯಮಹೋದಧಿಯಲಿಂ ।
ದ್ಯಾವ ನ್ಯಾಯಾಖ್ಯಾ ರತುನಗಳ ।
ತಾವನಿಶ ಸಂಗ್ರಹಿಸಿದರು ಸಹ ಬುಧವರಾಗ್ರಣಿಯಿಂ ॥

ಭಾವ ಸಂಪೂರ್ಣದಿ ಗೊಳಿಸದ್ಯೆ ।
ಆವ ಶ್ರುತಿ ಸುವಿಚಾರ್ಯ ಉಪಕ್ರಮು ।
ಮೇವ ಪ್ರಬಲ ಪ್ರಮಾಣ ಭಾಷ್ಯಗಭೀರ
ಮದ್ಭುತವೊ ॥ ೭೩ ॥ ೮೮೨ ॥

ಭಾವಾರ್ಥ:— ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀ ಮಧ್ವಾಚಾರ್ಯ ಕೃತ ಭಾಷ್ಯಾದಿ ಗ್ರಂಥಗಳ ವರ್ಣನೆ ಮಾಡಿದ್ದು.

## ಶ್ರೀ ಬ್ರಹ್ಮಸೂತ್ರ ಭಾಷ್ಯಮಹಿಮೆ

ಯಾವ ಕಾರಣದಿಂದ ಶ್ರೀ ಬ್ರಹ್ಮಸೂತ್ರ ಭಾಷ್ಯವೆಂಬ ಸಮುದ್ರದಿಂದ ಆವನ್ಯಾಯಾಖ್ಯ ತರ್ಕ ಯುಕ್ತಿಗಳೆಂಬ ರತ್ನಗಳನ್ನು ಪಂಡಿತ ಶ್ರೇಷ್ಠರಿಂದ ನಿತ್ಯದಲ್ಲಿಯೂ ಸಂಗ್ರಹ ಮಾಡಿದರೂ ಕೂಡ ಅವುಗಳನ್ನು ಸಂಪೂರ್ಣಗೊಳಿಸಲು ಅಸಾಧ್ಯವಾದದ್ದು ಮತ್ತು ಭಾಷ್ಯದಲ್ಲಿ ಅವುಗಳ ಭಾವಕ್ಕೆ ತಕ್ಕಂಥಾ ನ್ಯಾಯ ( ಯುಕ್ತಿ ) ಗಳು ಅನಂತ ವಾದವು. ಹೇಗೆ ಸಮುದ್ರದಿಂದ ಹಗಲಿರಳು ರತ್ನಗಳು ತೆಗೆದು ಸಂಗ್ರಹಿಸಿದರೂ, ಸಮಾಪ್ತಿಯಾಗಲಾರವೊ ಅದರಂತೆಯೇ, ಈ ಬ್ರಹ್ಮಸೂತ್ರ ಭಾಷ್ಯ ಸಮುದ್ರದಿಂದಲೂ, ಸಹಿತವಾಗಿ ಪಂಡಿತರು ಸಂಪೂರ್ಣಗೊಳಿಸಲಾರರು.

ಇಲ್ಲಿ ನ್ಯಾಯ ಶಬ್ದಾರ್ಥವೇನಂದರೆ, ಯಾವ ಶ್ರುತಿ ವಿಚಾರಕ್ಕೆ ಕಾರಣವಾದ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ ಫಲಾರ್ಥವಾದವು, ಮತ್ತು ಶ್ರುತಿ ಲಿಂಗ ಸಮಾಖ್ಯ ಪ್ರಕರಣ ಸ್ಥಾನಗಳು ಮತ್ತು ಪ್ರಮಾಣಗಳ ಪ್ರಾಬಲ್ಯ ದೌರ್ಬಲ್ಯ ವೆಂಬ, ವಿಚಾರಾಂಗಭೂತವಾದ ನಿರವಕಾಶ, ಸಾವಕಾಶ, ಉಪಜೀವಕತ್ವ, ಬಹುತ್ವ

ಅಲ್ಪತ್ವ, ನೀಚತ್ವ, ಉಚ್ಚತ್ವ ಇಂಥ ಬಹು ನ್ಯಾಯಗಳು ಈ ಭಾಷ್ಯದಲ್ಲಿ ಅನಂತವಾಗಿ ಉತ್ಪಾದನವಾಗುತ್ತವೆ, ಕಾರಣ ಈ ಬ್ರಹ್ಮಸೂತ್ರ ಭಾಷ್ಯದ ಗಾಂಭೀರ್ಯವು ಸಮುದ್ರದಂತೆ ಬಹು ಆಶ್ಚರ್ಯಕರವಾದುದು.

ಶ್ಲೋಕ ॥ ದಶೋಪನಿಷದೋದೇವಿ ।
ರ್ದೇವಾ ಇವ ಸವಿೂಪ್ಸಿತಾಃ ॥
ಯುಕ್ತಾಃ ಪ್ರಸಾದ ಯಂತ್ಯರ್ಥಾ ।
ಏಷಾ ಭಾಷ್ಯಾಲಯೇಷ್ವಲಮ್ ॥ ೭೪ ॥

ಭಾಮಿನಿ ॥ ಆ ಉಪನಿಷದ್ಭಾಷ್ಯನಿಲಯದಿ ।
ಭಾವ ಯುಕ್ತಾದಿಷ್ಟದರ್ಥವ ।
ತಾವತು ದಶೋಪನಿಷತುಗಳಂ ಮನಕೆಯಿಷ್ಟಾದ ॥

ದೇವತೆಗಳಂ ತಮ್ಮ ಗ್ರಹದಲಿ ।
ಭಾವಕಿಯರಂ ಪ್ರೀತಿ ವಚನದಿ ।
ತಾವು ಆನಂದವಗೊಳಿಪ ತೆರ ಸುಪ್ರಸಾದಯತೀ ॥ ೭೪ ॥ ೮೮೩ ॥

ಇನ್ನು ದಶೋಪನಿಷತಗಳ ಭಾಷ್ಯಮಹಿಮೆ ವರ್ಣಿಸುತ್ತಾರೆ.

ಭಾವಾರ್ಥ:— ಯಾವ ಉಪನಿಷತ್ ಭಾಷ್ಯಗಳೆಂಬ ಮನೆಗಳಲ್ಲಿ ಭಾವ= ಆ ಉಪನಿಷತಾರ್ಥಗಳನ್ನು ಚನ್ನಾಗಿ ಅವುಗಳ ಇಂಗಿತಾರ್ಥದಿಂದ ಕೂಡಿದ ಇಷ್ಟವಾದ ಅರ್ಥಗಳು, ತಾವತು =ಅಷ್ಟೇ ಹತ್ತು ಉಪನಿಷದ ಅರ್ಥಗಳು, ಮನಸ್ಸಿಗೆ ಇಷ್ಟವಾದ ದೇವತೆಗಳು ಯಾವ ತಮ್ಮಯ ಮನೆಗಳಲ್ಲಿ ಬಾವುಕಿಯರಿಂ= ಭಕ್ತಿಯುತರಾದ ದೇವ ಸ್ತ್ರೀಯರನ್ನು, ಒಳ್ಳೇ ಪ್ರೀತಿಯ ಮಾತುಗಳಿಂದ, ಸಂತೋಷಗೊಳಿಸುವಂತೆ, ಸುಪ್ರಸನ್ನತೆಯನ್ನುಂಟುಮಾಡುತ್ತವೆ.

ಹೇಗೆ ದೇವಸ್ತ್ರೀಯರುಗಳಿಗೆ ತಮ್ಮ ಮಂದಿರಗಳಲ್ಲಿ, ತಮ್ಮ ಪತಿಗಳ ಯೋಗ= ಕೂಡುವಿಕೆಯಿಂದ ಬಹು ಸಂತೋಷಯುಕ್ತಮನರಾಗುವರು ಇದು ಸುಪ್ರಸಿದ್ಧವು ಹಾಗೆಯೇ ಉಪನಿಷದರ್ಥಗಳು, ಸುಪ್ರಸಾದಯತೀ=ಪ್ರಸಾದಗುಣಗಳನ್ನು ಮಾಡುತ್ತವೆ ಅಂದರೆ, ಶಬ್ದಕ್ಕೆ ಯುಕ್ತವಾಗಿಯೂ, ಮನಸ್ಸಿಗೆ ಸುಖವಾಗಿಯೂ, ತಿಳಿಯುವ ಅರ್ಥ ಬೋಧಿಸುತ್ತವೆ.

**ಶ್ಲೋಕ ॥ ಗೀತಾ ತಾತ್ಪರ್ಯ ಭಾಷ್ಯಾಭ್ಯಾ ।**
**ಮಾಭ್ಯಾಂ ವಿಶ್ವಂ ಪ್ರಕಾಶ್ಯತೇ ॥**
**ಗೋಗಣೈರ ಪ್ರತೀಕಾರ್ಯೈ ।**
**ರರ್ಕೇಂದುಭ್ಯಾಮಿವಾಧಿಕಮ್ ॥ ೭೫ ॥**

ಭಾಮಿನಿ ॥ ಗೀತೆ ತಾತ್ಪರ್ಯವು ಸುಭಾಷ್ಯರ ।
ಡೀತೆರದಿ ಪರತಡೆಯೆ ಶಕ್ಯವು ।
ದ್ಯೋತ ಗೋಗಣ ವಚನ ಗಡಣವು ಸರ್ವ ಸುಪ್ರಮೇಯ ॥

ಜಾತವಧಿಕ ಪ್ರಕಾಶಗೊಳಿಪ ಖ ।
ದ್ಯೋತ ಚಂದ್ರಮ ರೀರ್ವ ನಿತ್ಯ ಪ್ರ ।
ಖ್ಯಾತ ಕಿರಣಗಳಿಂ ಸಕಲಜಗ ಸುಪ್ರಕಾಶಿಸಿ
ದೋಲ್ ॥ ೭೫ ॥ ೮೪೪ ॥

ಭಾವಾರ್ಥ:— ಗೀತಾ ಭಾಷ್ಯ ಮತ್ತು ಗೀತಾ ತಾತ್ಪರ್ಯವೆರಡೂ ಗ್ರಂಥಗಳ ಮಹಿಮೆ. ಗೀತೆ= ಭಗವದ್ಗೀತೆಯ ತಾತ್ಪರ್ಯ ಮತ್ತು ಭಾಷ್ಯಗಳೆರಡೂ ಗ್ರಂಥಗಳು ಈ ಪ್ರಕಾರವಾಗಿ ಇತರರಿಂದ ತಡೆಯಲು ಅಸಾಧ್ಯವಾದ, ದ್ಯೋತ ಗೋಗಣ= ಸುಪ್ರ ಕಾಶಿಸುವ ವಚನಗಳ ಸಮೂಹದಿಂದ ಕೂಡಿದ ಸರ್ವ ಪ್ರಮೇಯ ವಿಷಯುಗಳನ್ನು, ಹೆಚ್ಚಾಗಿ ಪ್ರಕಾಶಗೊಳಿಸುತ್ತಿರುವ, ಖದ್ಯೋತ= ಸೂರ್ಯ ಚಂದ್ರರುಭಯುದು ನಿತ್ಯದಲ್ಲಿ ಹಗಲು ರಾತ್ರಿ ತಮ್ಮ ಪ್ರಖ್ಯಾತವಾದ ಕಿರಣಗಳಿಂದ ಸಕಲ ಜಗತ್ತನ್ನು ಪ್ರಕಾಶಗೊಳಿಸಿ ದಂತೆ, ಪ್ರಕಾಶಿಸುತ್ತಲಿವೆ. ಇವೆರಡು ಗ್ರಂಥಗಳಲ್ಲಿ ಸಕಲ ಪ್ರಮೇಯುಸಾರ ಸಂಗ್ರಹಿ ಸಿರುವರು.

**ಶ್ಲೋಕ ॥ ಇತಿಹಾಸ ಪುರಾಣಾಬ್ಧೇ ।**
**ರ್ಭವ ಚಿತ್ತಾದ್ರಿ ಲೋಡಿತಾತ್ ॥**
**ಜಾತಾಂ ಭಾರತ ತಾತ್ಪರ್ಯ ।**
**ಸುಧಾಂ ಃ ಸನ್ನ ಸೇವತೇ ॥ ೭೬ ॥**

ಭಾಮಿನಿ ॥ ಶ್ರೀಮದಾಚಾರ್ಯರೆ ತವ ಮನೆಂ ।
ಬಾ ಮಹಾ ಮಂದರ ಪರುವತದಿ ।
ತಾಂ ಮಥಿಸೆ ಇತಿಹಾಸ ಭಾರತ ಪಂಚರಾತ್ರಾದಿ ॥

ರಾಮಯಣ ಸುಪುರಾಣ ಭಾಗವ ।
ತೀ ಮಹಾಕ್ಷೀರಾಬ್ಧಿಭವ ಸುಧೆ ।
ಪ್ರೇಮ ಭಾರತನಿರ್ಣಯಾವನು ಸುಜನ ಸೇವಿಸನು ॥೭೬॥ ೧೮೫॥

ಭಾವಾರ್ಥ:— ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥಮಹಿಮೆ ವರ್ಣನೆ.

ಅಹೋ ಶ್ರೀಮದಾಚಾರ್ಯರೆ=ಸಂಪದ್ಯುಕ್ತ ಮಂಗಳಕರವಾದ ವೇದವ್ಯಾಖ್ಯಾನ ಕರ್ತೃಶ್ರೀಪ್ಮರೇ, ತಮ್ಮ ಮನಸ್ಸೆಂಬ ದೊಡ್ಡ ಮಂದರ ಪರ್ವತವೆಂಬ ಕಡಗೋಲಿನಿಂದ, ಇತಿಹಾಸವೆಂಬ ಶ್ರೀ ಮಹಾಭಾರತ, ಮೂಲರಾಮಾಯಣ ಪಂಚರಾತ್ರಾಗಮಗಳು, ಭಾಗವತಾದಿ, ಸು=ಸಾತ್ವೀಕ ಪುರಾಣಗಳೆಂಬ ಈ ಕ್ಷೀರಸಮುದ್ರದಲ್ಲಿ ತಾಂ ಮಥಿಸಲು= ತಾವು ಚನ್ನಾಗಿ ಕಡೆಯಲು, ಈ ಕ್ಷೀರ ಸಮುದ್ರದಿಂದ ಪುಟ್ಟಿದ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯವೆಂಬ, ಅಮೃತ ಸುಧೆಯನ್ನು ಯಾವ ಸಜ್ಜನರು ಸೇವಿಸಲಿಕ್ಕಿಲ್ಲ? ಅಮೃತ ದೊರೆತರೆ ಆರಾದರು ಬಿಡುವರುಂಟೆ? ಸರ್ವ ಸಜ್ಜನರು ಅಮೃತವನ್ನು ಸೇವಿಸುವಂತೆ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯಾಖ್ಯ, ಗ್ರಂಥಾಮೃತವನ್ನು ಸರ್ವ ಸಜ್ಜನರೂ ಬಿಡದೇ ಸೇವಿಸುವರು.

ಶ್ರೀ ಮಹಾಭಾರತ ತಾತ್ಪರ್ಯವೊಂದೇ ಅಲ್ಲದೆ ಮೂಲ ರಾಮಾಯಣ ಪಂಚರಾತ್ರಾಗಮ, ಭಾಗವತಾದಿ ಸಕಲ ಪುರಾಣಗಳ ಸಾರವು ಈ ಗ್ರಂಥದಲ್ಲಿರುವದೆಂದು ಸೂಚಿತವಾದಿತು.

**ಶ್ಲೋಕ ॥ ಪುರಾಣಸ್ಥಾನಪಾಂಥಾನಾ ।**
**ಮ ಭಾಷಾ ತ್ರಯವೇದಿನಾಮ್ ॥**
**ಭವತಾ ಸುಸಖಾ ಚಕ್ರೇ ।**
**ಶ್ರೀಭಾಗವತ ನಿರ್ಣಯಃ ॥ ೭೭ ॥**

ಭಾಮಿನಿ ॥ ಧೀರ ನೀಂ ಭಾಗವತ ನಿರ್ಣಯ ।
ಸಾರ ಮಾಡ್ದಿರಿ ಗುಹ್ಯ ದರ್ಶನ ।
ಮೂರು ಭಾಷೆ ಸಮಾಧಿಯರಿಯದ ಪಥಿಕ ಪೌರಾಣಂ ॥

ದಾರಿಗರಿಗೆ ಸುಗೆಳೆಯನಂದದಿ ।
ಸಾರೆ ಉಪಕಾರವನು ಮಾಡುತ ।
ಚಾರು ಸುಜ್ಞಾನಕ್ಕೆ ಸಾಧನವಾಗಿ ಸುಖವಾಯ್ತು ॥ ೭೭ ॥೧೮೬॥

ಭಾವಾರ್ಥ:- ಭಾಗವತ ತಾತ್ಪರ್ಯ ಗ್ರಂಥಮುಹಿಮಾ, ಹೇಳುತ್ತಾರೆ. ಧೀರ=ಜ್ಞಾನಿಗಳ ಬುದ್ಧಿಗಳಲ್ಲಿ ರಮಿಸಿ ಅವರಿಗೆ ಹೆಚ್ಚಿನ ಸುಜ್ಞಾನಪ್ರದ ರೂಪರಾದ ಸರ್ವಜ್ಞರೇ ತಾವು ಗುಹ್ಯ ದರ್ಶನ ಸಮಾಧಿಗಳೆಂಬ, ಮೂರು ಭಾಷೆಗಳನ್ನು ತಿಳಿಯದೇಯಿರುವ. ಪುರಾಣಗಳೆಂಬ ದಾರಿಯಲ್ಲಿ ನಡೆಯುವರಾದ ಪೌರಾಣಿಕರಿಗೆ, ಒಳ್ಳೇ ಗೆಳೆಯನಂತಿರುವ, ಶ್ರೀ ಭಾಗವತ ತಾತ್ಪರ್ಯ ನಿರ್ಣಯವೆಂಬ ಗ್ರಂಥವನ್ನು ಮಾಡಿದಿರಿ.

ದಾರಿ ನಡೆಯುವರಿಗೆ ಮಾರ್ಗದಲ್ಲಿ ಗೆಳೆಯನು ದೊರೆತು ಒಳ್ಳೇ ಮಾತುಗಳನ್ನಾಡುತ್ತಾ ದಾರಿ ಸಾಗಿಸಿದ ಉಪಕಾರದಂತೆ; ಪುರಾಣಾರ್ಥಗಳನ್ನು ವಿಚಾರ ಮಾಡತಕ್ಕವರಿಗೆ ಈ ಗ್ರಂಥವು ಮಿತ್ರನಂದದಿ ಮಹದುಪಕಾರವನ್ನು ಮಾಡುತ್ತ ಒಳ್ಳೇ ಸಮೀಚೀನವಾದ ಜ್ಞಾನ ಸಂಪಾದನೆ ಮಾಡಲು, ಸುಖಕರವಾಗಿಪ್ಪುದು.

**ಶ್ಲೋಕ ॥ ಕಸ್ತಂತ್ರಸಾರಂ ಸಂಪ್ರಾಪ್ಯ ।**
**ನ ಸ್ಯಾತ್ ಪರ್ಯಾಪ್ತವಾಂಛಿತಃ ॥**
**ಅಮರ್ತ್ಯೈರಾಶ್ರಿತಚ್ಛಾಯಂ ।**
**ಕಲ್ಪದ್ರುಮಮಿವೋತ್ತಮಮ್ ॥ ೭೮ ॥**

ಭಾಮಿನಿ || ಉತ್ತಮಾರ್ಥೋಪೇತವಾದುದು ।
ಮತ್ತೆ ಸುರರಾಶ್ರಯಿಪ ಛಾಯದ ।
ಉತ್ತಮಂ ಸುರಕಲ್ಪತರುವೋಲಿರುವ ಗ್ರಂಥವ ತಾ ||

ಬಿತ್ತರಿಪದೀ ತಂತ್ರಸಾರವ ।
ಸ್ತುತ್ಯ ದೇವತೆ ಮಾನ್ಯ ಸಿದ್ಧಾಂ ।
ತತ್ಯಧಿಕ ಪಠಿಸುತಲಿ ತನ್ನಿಷ್ಟಾರ್ಥ ಪೂರೈಸ ? || ೭೮ || ೮೮೭ ||

ತಂತ್ರಸಾರ ಗ್ರಂಥವರ್ಣನೆ (ನಿತ್ಯಾನ್ಹೀಕ ಮಂತ್ರಾದಿಗಳು. ಪೂಜಾ ಪ್ರಕ್ರೀಯ)

ಭಾವಾರ್ಥ:- ಉತ್ತಮಾರ್ಥೋಪೇತ =ಉತ್ತಮವಾದ ಒಳ್ಳೇ ಅರ್ಥಗಳುಳ್ಳದ್ದು. ಅಥವಾ ಉತ್ತಮವಾದ ಮೋಕ್ಷಾದಿ ಪುರುಷಾರ್ಥವನ್ನು ಕೊಡುವದು. ಮತ್ತು ದೇವತೆಗಳು ಆಶ್ರಯಮಾಡತಕ್ಕಂಥಾ, ದಟ್ಟವಾದ ನೆರಳುಳ್ಳ ಶ್ರೇಷ್ಠವಾದ ಕಲ್ಪವೃಕ್ಷದಂತೆ ಇರುವದು. ದೇವತೆಗಳು ಸಹಿತ ಒಪ್ಪಿಕೊಂಡು ಬಹುಮಾನ್ಯ ಮಾಡುವ ಸಿದ್ಧಾಂತಗಳಿಂದ ಕೂಡಿದ ವಿಸ್ತಾರವಾಗಿರುವ ತಂತ್ರಸಾರ ಗ್ರಂಥವನ್ನು ಹೊಂದಿ ಬಹುಭಕ್ತಿಯಿಂದ ಪಠನೆ ಮಾಡುತ್ತ ಯಾವನು ತನ್ನ ಮನಸ್ಸಿನ ಬಯಕೆ ಪೂರೈಸಲಾರನು ?

ಕಲ್ಪವೃಕ್ಷ ಆಶ್ರಯ ಮಾಡಿದವರಿಗೆ ಬೇಡಿದಿಷ್ಟಾರ್ಥಗಳನ್ನು ಕೊಡುವಂತೆ, ತಂತ್ರ ಸಾರವೆಂಬ ಗ್ರಂಥವು ಅವರವರ ಮನೋಬಯಕೆಗಳನ್ನು ಪೂರೈಸುವದು.

**ಶ್ಲೋಕ ॥ ಲೋಕಾನಾಮವ ಲೋಕಾಯ ।**
**ಮಾರ್ಗಸ್ಯಾಸ್ಯ ವ್ಯಥಾಧ್ವನಾನ್ ॥**
**ಕರುಣಾಕರ ನೇತ್ರಾಭೇ ।**
**ವಾದ ಸನ್ಮಾನ ಲಕ್ಷಣೇ ॥ ೭೯ ॥**

ಭಾಮಿನಿ ॥ ಹೇ ದಯಾಕರ ಮಧ್ವ ಭಗವಾನ್ ।
ಮೋದ ಸಜ್ಜನಕಂ ಪ್ರಮಾಣದ ।
ಹಾದಿ ತೋರುತವರ್ಗೆ ನೋಡಲು ನೇತ್ರ ದ್ವಯದಂತೆ ॥

ವಾದ ಸನ್ಮಾನಾಖ್ಯ ಲಕ್ಷಣ ।
ವಾದ ವೆರಡಂ ಗ್ರಂಥ ರಚಿಸಿದೆ ।
ವಾದಿಗಳ ಹೆದರಿಸುತ ಬುಧರಿಗೆ ಜ್ಞಾನವಿತ್ತೆಗುರೊ ॥ ೭೮ ॥೮೮೮॥

( ಕಥಾಲಕ್ಷಣ ಮತ್ತು ಪ್ರಮಾಣಲಕ್ಷಣ ಗ್ರಂಥಗಳ ಸ್ತುತಿ )

ಭಾವಾರ್ಥ:— ಹೇ ಕರುಣಾಸಮುದ್ರರಾದ, ಮೋದ =ಆನಂದಪ್ರದರಾದ ಮಧ್ವ ಗುರುಗಳೆ, ಸಜ್ಜನರುಗಳಿಗೆ ಪ್ರಮಾಣವೆಂಬ ಹಾದಿಯನ್ನು ತೋರುತ್ತಾ ಅವರಿಗೆ ಆ ಪ್ರಮಾಣ ಮಾರ್ಗವನ್ನು ನೋಡುವದಕ್ಕೆ ಎರಡು ಕಣ್ಣುಗಳಂತೆ, ವಾದ =ವಾದಿಗಳ ಸಂಗಡ ವಾದವಿವಾದ ಮಾಡಲಿಕ್ಕೆ ಹಾದಿಯಾದ ಕಥಾಲಕ್ಷಣ ಮತ್ತು ಸನ್ಮಾನಾಖ್ಯ ಲಕ್ಷಣ =ಸದ್ಯುಕ್ತಿಗಳೆಂಬ ಪ್ರಮಾಣ ಲಕ್ಷಣವೆಂಬ ಎರಡು ಗ್ರಂಥಗಳನ್ನು ರಚಿಸಿದಿರಿ

ವಾದಿಗಳಿಂದ ಜಲ್ಪ, ವಿತಂಡಾಖ್ಯ ಕಥಾಪ್ರಕಾರವು ಕಥಾಲಕ್ಷಣ ಗ್ರಂಥದಲ್ಲಿ ಪ್ರಮಾಣ ಲಕ್ಷಣ = ಶಾಸ್ತ್ರಸಮ್ಮತವಾಗಿ ಶಾಸ್ತ್ರ ಮರ್ಯಾದಾ ಮೀರದಂತೆ ಶಾಸ್ತ್ರ ಶಬ್ದಪ್ರಯೋಗರೂಪವಾದ ಪ್ರಮಾಣಲಕ್ಷಣವೆಂಬ ಎರಡು ಗ್ರಂಥಗಳನ್ನು ಮಾಡಿ ವಾದಿಗಳನ್ನು ಹೆದರಿಸಿ, ಪಂಡಿತರಾದ ಸಜ್ಜನರಿಗೆ ಇಂಥ ಜ್ಞಾನವನ್ನು ಕೊಟ್ಟಿರಿ.

**ಶ್ಲೋಕ ॥ ಏಕಾಕೀ ಕಿಲ ಯಶ್ಚಕ್ರೇ ।**
**ಪದಂ ಮೌಲಿಷು ವಿದ್ವಿಷಾಮ್ ॥**
**ತತ್ವ ನಿರ್ಣಯ ಪಾಥೋಽಯಂ ।**
**ಕೇನ ನಾಮ ನಪೂಜ್ಯತೇ ॥ ೮೦ ॥**

ಭಾಮಿನಿ ॥ ನೋಡೆ ವೀರಾರ್ಜುನನು ಒಬ್ಬನೆ ।
ಖೋಡಿ ಶತ್ರುನಿವಾತ ಕವಚರು ।
ಕೇಡಿಗರ ತಲೆಬೋಡಿ ಮೆಟ್ಟಿದು ಸುಪ್ರಸಿದ್ಧವಿದು ॥

ಮಾಡೆ ವಿಷ್ಣು ಸು ತತ್ವ ನಿರ್ಣಯ ।
ಮೂಢ ಮಾಯ್ಗಳ ಗೆಲಲಿದೊಂದಿಯೆ ।
ನಾಡೆ ಪಾರ್ಥೆಂಬಿದನು ಅವನು ಪೂಜಿಸದೆ ಯಿರನು ॥೮೦॥೮೪॥

ಭಾವಾರ್ಥ:— (ವಿಷ್ಣು ತತ್ವ ನಿರ್ಣಯ ಗ್ರಂಥ ಮಹಿಮೆ) ಈ ವಿಷ್ಣು ತತ್ವ ನಿರ್ಣಯ ಗ್ರಂಥವೆಂಬ, ವೀರನೂ ಶೂರನಾದ ಅರ್ಜುನನು, ತಾನೊಬ್ಬನೇ ಖೋಡಿ= ಕೆಟ್ಟ ನಿವಾತಕವಚರಾದ ಶತ್ರುಗಳಿಂದ ಯುದ್ಧದಲ್ಲಿ ಕಾದಿ=ಅವರೊಡನೆ ಯುದ್ಧವನ್ನು ಮಾಡಿ ಆ ಕೆಟ್ಟ ಜನರನ್ನು ಸೋಲಿಸಿ ಅವರ ತಲೆಬೋಡಿಗಳನ್ನು ತುಳಿದು ಹೇಗೆ ಅವರ ಶಿರದಲ್ಲಿ ಪಾದಗಳನ್ನಿಟ್ಟನೊ? ಅದರಂತೆಯೆ ವಿಷ್ಣು ತತ್ವನಿರ್ಣಯವೆಂಬ ಗ್ರಂಥ ರಚಿಸಿರಲು, ಮಂದಬುದ್ಧಿಗಳಾದ ಮಾಯಾವಾದಿಗಳನ್ನು ಗೆಲಿಯಲಿಕ್ಕೆ ಸಮರ್ಥವಾದ ಈ ಗ್ರಂಥವನ್ನು ಯಾರು ಪೂಜಿಸದೇ ಇರುವರು. ಸರ್ವರೂ ಪೂಜಿಸುವರು.

ಪಾಂಡವರು, ವಿರಾಟನಗರದಲ್ಲಿರುವಾಗ್ಗೆ ಉತ್ತರ ಗೋಗ್ರಹಣಕಾಲದಲ್ಲಿ ನಿವಾತ ಕವಚರೆಂಬ ಅಸುರರನ್ನು ನಿಗ್ರಹಿಸಲು ಅರ್ಜುನನೊಬ್ಬನೇ ಆ ಶತ್ರುಗಳನ್ನು ನಿಗ್ರಹಿಸಿ ಪರಾಜಯಹೊಂದಿಸಿದನೊ, ಅದರಂತೆಯೆ ದುರ್ವಾದಿಗಳ ನಿರಾಕರಣ ಮಾಡಲು, ಪಾರ್ಥನೆಂಬ ಈ ವಿಷ್ಣು ತತ್ವನಿರ್ಣಯ ಒಂದೇ ಗ್ರಂಥವು ಸಮರ್ಥವಾಗಿರುವದು. (ಛಲಾರಿ ಟಿಪ್ಪಣಿ)

**ಶ್ಲೋಕ ॥ ವಾದಾದಯಃ ಪ್ರಕರ್ಣಾ ಸ್ಫು ।**
**ಲಿಂಗಾಸ್ತು ನವೋ ಪಲ್ಯವಮ್ ॥**
**ವಿಪಕ್ಷ ಕಕ್ಷಂ ಕ್ಷಿಣ್ವಂತಿ ।**
**ಮಾರುತೇನ ತ್ವಯೇರಿತಾ ॥ ೮೧ ॥**

ಭಾಮಿನಿ ॥ ವಾಯುನೋದ್ಧಿತ ಅಗ್ನಿ ಕಣಗಳು ।
ಸಾಯ ಒಣಗಿದ ಕಾಡು ಸುಡುವೋಲ್ ।
ವಾಯು ಅವತಾರಿಗಳೆ ಮಧ್ವರೆ ಪ್ರೋಕ್ತ ತಮ್ಮಿಂದ ॥

ಭೂಯ ತತ್ವೋದ್ಯೋತ ಮೊದಲೆನೆ ।
ನ್ಯಾಯ ಪ್ರಕರಣ ವಿಸ್ಫು ಲಿಂಗವು ।
ಕಾಯ ಸೂಕ್ಷ್ಮ ವಿಪಕ್ಷ ಕಕ್ಷಂ ನಾಶ ಗೈವುದಲಂ ॥೮೧॥೮೫॥

ತತ್ತ್ವೋದ್ಯೋತಾದಿ ಪ್ರಕರಣ ಗ್ರಂಥಗಳನ್ನು ವರ್ಣಿಸುತ್ತಾರೆ.

**ಭಾವಾರ್ಥ:—** ವಾಯುನೋದ್ಧತ=ಗಾಳಿಯಿಂದ ಹೊರಡಲ್ಪಟ್ಟ ಬೆಂಕಿಯ **ಕಿಡಿ** ಗಳು **ಒಣಗಿದ ಕಾಡು** =ಅರಣ್ಯದಲ್ಲಿ ಬಿದ್ದು, ಉಪಾಯದಿಂ ಆ ಗಾಳಿಯ ಸಹಾಯ **ದಿಂದಲೇ ಹೆಚ್ಚಾಗುತ್ತ** ಆ ಮಹತ್ತರವಾದ ಅರಣ್ಯವನ್ನೆ **ಹೇಗೆ** ಸುಡುತ್ತವೆಯೋ, ಅದ ರಂತೆಯೇ, ಸಾಕ್ಷಾತ್ ಮೂಲವಾಯು ದೇವರ ಅವತಾರಿಗಳಾದ ಮಧ್ವಾಚಾರ್ಯರಿ, ತಮ್ಮಿಂದ **ಪ್ರೋಕ್ತ** = **ಹೇಳಲ್ಪಟ್ಟ** ಅಥವಾ ರಚಿಸಿದ, ಬಹಳವಾದ ತತ್ತ್ವೋದ್ಯೋತ ಮೊದಲಾದ ನ್ಯಾಯಪ್ರಕರಣ ಗ್ರಂಥಗಳೆಂಬ ಅಗ್ನಿಯ ಕಣಗಳು ಅವು ನೋಡಲು (ಶರೀರ ದಿಂದ) ಬಹು **ಸೂಕ್ಷ್ಮವಿದ್ದಾಗ್ಯೂ** ವಿರುದ್ಧ ಸಿದ್ಧಾಂತವೆಂಬ ಒಣಗಿದ ಮಹಾ ಅಡವಿ ಯನ್ನು ಚನ್ನಾಗಿ ನಾಶಗೈಸುವವು.

ಕಾಯ=ಶರೀರ, ದೇಹ, ವಿಪಕ್ಷ=ವಿರುದ್ಧ ಸಿದ್ಧಾಂತವೆಂಬ, ಕಕ್ಷಂ =ಶುಷ್ಕವನ, ಒಣಗಿದ ಕಾಡು

**ಶ್ಲೋಕ ॥ ಅನಂತೋರ್ಥಃ ಪ್ರಕಟಿತ ।**
**ಸ್ತ್ವಯಾಣೌ ಭಾಷ್ಯಸಂಗ್ರಹೇ ॥**
**ಅಹೋ ಆತ್ಮ ಪರಿಜ್ಞಪ್ತ್ಯೈ ।**
**ಕೃಷ್ಣೇನೇವಾನನಾಂತರೇ** **॥ ೮೨ ॥**

ಭಾಮಿನಿ ॥ ದೇವ ಕೃಷ್ಣ ಯಶೋದೆ ನಂದನ ।
ಯಾವ ದಾತ್ಮದ ಪರಿಚಯಕೆ ತಾಂ ।
ಆವ ತನ್ನಣು ವದನದಲಿ ಬ್ರಹ್ಮಾಂಡ ತೋರ್ದಂತೆ ॥
ತಾವು ತಮ ಸಾಮರ್ಥ್ಯ ಪ್ರಕಟಿಸ ।
ಲಾವ ಅಣು ಭಾಷ್ಯದಲಿ ಸಂಗ್ರಹಿ ।
ಸ್ಯಾವ ಅಪರಿಮಿತಾರ್ಥ ಪ್ರಮೆಯವ ಪ್ರಕಟಿಸಿದಿರಿ-
ಅಹೋ ? ॥ ೮೨ ॥ ೮೯೧ ॥

ಅಣುಭಾಷ್ಯ ಗ್ರಂಥದ ಮಹಾಮಹಿಮೆ ವರ್ಣನೆ.

ಭಾವಾರ್ಥ:-- ಪೂರ್ವ, ಕೃಷ್ಣಾವತಾರಕಾಲದಲ್ಲಿ ದೇವ= ಕ್ರೀಡಾದಿಗುಣ ವಿಶಿಷ್ಟನಾದ ಯಶೋದಾಪುತ್ರ ಶ್ರೀ ಕೃಷ್ಣ ಭಗವಾನನು ತಾನು ಯಾರೆಂಬುದನ್ನು ತಿಳಿಸ ಲಿಕ್ಕೆ ಎರೆಮಣ್ಣು ತಿಂದ ನೆವದಿ ತನ್ನ ಸಣ್ಣ ಬಾಯಿಯನ್ನು ತೆರೆದು, ತನ್ನ ಸಾಮರ್ಥ್ಯ ದಿಂದ ಮಹತ್ತರವಾದ ಬ್ರಹ್ಮಾಂಡವನ್ನೇ ತಾಯಿಗೆ ತೋರಿಸಿದಂತೆ, ಶ್ರೀಕೃಷ್ಣ ಭಕ್ತರಾದ

ಮಧ್ವಾಚಾರ್ಯರೇ ತಾವು ತಮ್ಮ ಮಹಾಜ್ಞಾನ ಸಾಮರ್ಥ್ಯವನ್ನು ತೋರಿಸಲು ಸಂಕೋಚದಿಂದ ಬ್ರಹ್ಮಸೂತ್ರ ಭಾಷ್ಯಾರ್ಥವನ್ನೇ ಸಂಗ್ರಹಿಸಿ ಅಣುಭಾಷ್ಯವೆಂಬ ಗ್ರಂಥ ರಚನೆ ಮಾಡಿ, ಶ್ರೀ ಹರಿಯ ಜ್ಞಾನಗೋಸುಗ ಈ ಚಿಕ್ಕ ಗ್ರಂಥದಲ್ಲಿ ಅಪರಿಮಿತಾರ್ಥ ಪ್ರಕಟಿಸಿದ್ದು, ಆಶ್ಚರ್ಯಕರವಲ್ಲವೆ ?

**ಶ್ಲೋಕ ॥ ಭಗವಂಶ್ಚಿತ್ರ ಕವಿತಾಂ ।**
**ಲೌಕಿಕೀಂ ದರ್ಶಯನ್ ಕಿಲ ॥**
**ಗೋಪ್ಯಂ ಭಾರತ ಸಂಕ್ಷೇಪ ।**
**ಮಕೃಥಾ ವಿಶ್ವ ವಿಸ್ಮಯಮ್ ॥ ೭೩ ॥**

ಭಾಮಿನಿ ॥ ಅನಿಲನಂತಧಿ ಮಧ್ವ ಭಗವಾನ್ ।
ವಿನುತ ಲೌಕಿಕ ಚಿತ್ರ ಕವಿತೆಯ ।
ಇನಿತು ನಾನಾವಿಧದೆಮಕಲಂಕೃತೆಯ ಸಾಮರ್ಥ್ಯ ॥
ತನಗಿದೆನುತಲಿ ತೋರೆ ಗೌಪ್ಯವು ।
ಘನಸು ಭಾರತ ಕಥೆಯ ಸಂಗ್ರಹಿ ।
ಸೆನಿತು ಭಾರತ ಯಮಕ·ರಚಿಸಿದೆ ವಿಶ್ವ ವಿಸ್ಮಯವು ॥೭೩॥೮೯೨॥

ಯಮುಕಭಾರತ ಗ್ರಂಥಮಹಿಮಾ

ಭಾವಾರ್ಥ:— ಅನಿಲನಂತಧಿ = ಅನಂತ ಮತಿಗಳಾದ ವಾಯ್ವಂಶ ಸಂಭೂತರಾದ ಪೂಜ್ಯರಾದ ಮಧ್ವಾಚಾರ್ಯರೇ ಲೋಕದಲ್ಲಿ ಪ್ರಸಿದ್ಧವಿರುವ ವಿಚಿತ್ರತರವಾದ ಲಕ್ಷಣಗಳಿಂದ ಕೂಡಿದ, ನಾನಾವಿಧವಾದ ಶಬ್ದಾಲಂಕಾರ ಅರ್ಥಾಲಂಕಾರ ಮೊದಲಾದ ಸಂದಸ್ಸಿನಿಂದ ಕೂಡಿದ, ಯಮುಕ =ಕವಿತೆಯೊಳಗೆ ಪ್ರಾಸು ಕೂಡಿಸಿದ ಅಲಂಕಾರ ಇಂಥ ಯಮುಕರೂಪವಾದ ಕವಿತೆಯ ಮಾಡುವಂಥ ಸಾಮರ್ಥ್ಯವು ತಮಗೆ ಇರುವದೆಂದು ತೋರಲು ಅತಿ ರಹಸ್ಯವಾದ ಘನ =ವಿಸ್ತಾರವಾದ ಮಹಾಭಾರತ ಕಥೆಯನ್ನು ಸಂಕ್ಷೇಪದಿಂದ ಸಂಗ್ರಹಮಾಡಿ, ಅನಿತು = ಅಷ್ಟು ಮಹಾಭಾರತ ವಿಸ್ತಾರವಾದ ರಹಸ್ಯಗಳನೆಲ್ಲಾ ಅಡಗಿಸಿ, ಬಹು ಚಿಕ್ಕದಾದ ಮತ್ತು ನಾನಾ ಛಂದೋಬದ್ಧ ಅಲಂಕಾರದಿಂದ ಯುಕ್ತವಾದ 'ಯಮುಕಭಾರತ'' ವೆಂಬ ಗ್ರಂಥವನ್ನು ರಚಿಸಿದ್ದು ಲೋಕಕ್ಕೆ ಆಶ್ಚರ್ಯಕರವು. ಅಥವಾ ಲೋಕಾಶ್ಚರ್ಯಕರವಾದ ಯಮುಕ ಭಾರತವನ್ನು ಮಾಡಿದಿರಿ.

ಶಬ್ದಶಾಸ್ತ್ರಾಲಂಕಾರ ಪ್ರವರ್ತಕರಾದ ಈ ವಾಯು ದೇವರಲ್ಲಿ ಇಂಥ ಕವಿತೆಯ ಚಮತ್ಕೃತಿಯು ಏನಾಶ್ಚರ್ಯ ?

**ಶ್ಲೋಕ॥ ನಾನಾ ಸುಭಾಷಿತ ಸ್ತೋತ್ರ |**
**ಗಾಥಾದಿ ಕೃತಿಸತ್ಪ ತೀ ॥**
**ತ್ವಯಿರತ್ನಾಕರೇ ರತ್ನ |**
**ಶ್ರೇಣೀರ್ನಾ ಗಣಯಂತಿ ಕೇ ॥ ೬೪ ॥**

ಭಾಮಿನಿ ॥ ನಿಮಗಳಿಂ ರಚಿತಾದ ನಾನಾ |
ಕ್ರಮ ಸುಭಾಷಿತ ಸ್ತೋತ್ರ ಗಾಥೆಗ |
ಳಮಿತ ಕಲ್ಪಜಯಂತಿ ಸುಸದಾಚಾರ ಸ್ಮೃತಿರೂಪ ||

ಅಮಮ ಸತ್ಕೃತಿ ಗ್ರಂಥ ಭಾವವ |
( ಉಮೆಯರಸ ಗಣಸಲು ಅಶಕ್ಯನು )
ಅಥವಾ
ಪ್ರಮುಖ ಯಾವನು ಗಣಿಸೆ ಶಕ್ಯನು |
ವಿಮಲ ರತ್ನಾಕರದಪರಿಮಿತ ರತ್ನಶ್ರೇಣಿಯ
ವೋಲ್ || ೬೪ || ೬೯೩ ||

ಸದಾಚಾರ ಸ್ಮೃತಿ, ಜಯಂತೀ ನಿರ್ಣಯ, ದ್ವಾದಶ ಸ್ತೋತ್ರಾದಿ ಗ್ರಂಥಗಳ ಮಹಾಮಹಿಮೆ ಬಣ್ಣನೆ.

ಭಾವಾರ್ಥ:— ಶ್ರೀ ಸರ್ವಜ್ಞರೇ ತಮ್ಮಿಂದ ಕ್ರಮವಾಗಿ ಮಾಡಲ್ಪಟ್ಟ ನಾನಾ ಸುಭಾಷಿತಗಳೂ ಸ್ತೋತ್ರಗಳೂ ಗಾಥಾಗಳು ಬಹಳವಾಗಿರುವವು. ಸದಾಚಾರ ಸ್ಮೃತಿ ಜಯಂತಿಕಲ್ಪ, ಅಮಮ =ಅಹೋ ಆಶ್ಚರ್ಯಕರವಿದು. ತಮ್ಮಿಂದ ರಚಿಸಿದ, ಸತ್ಕೃತಿ= ಸಮೀಚೀನ ಗ್ರಂಥಗಳ ಭಾವವನ್ನು ಉಮಾಪತಿಯಾದ ರುದ್ರದೇವರೇ ಮೊದಲಾದ ಪ್ರಮುಖರು ತಿಳಿಯಲು ಶಕ್ತರಲ್ಲ, ಅಂದಮೇಲೆ ಇತರರಾದವರು ಯಾರು ಎಣಿಕೆ ಮಾಡಲು ಸಮರ್ಥರಾದಾರು ? ಯಾರೂ ಸಮರ್ಥರಲ್ಲ.

ಹೇಗೆಂದರೆ ರತ್ನಗಳಿಗೆ ಖಣಿಯಾದ ಸಮುದ್ರದಲ್ಲಿರುವ ರತ್ನಗಳನ್ನು ಯಾರು ಲೆಕ್ಕ ಮಾಡ್ಯಾರು ?

ಸಮುದ್ರದ ಅಪರಿಮಿತ ರತ್ನಗಳಂತೆ ರತ್ನ ಸದೃಶವಾದ ಅನೇಕ ಗ್ರಂಥಗಳನ್ನು ಮಾಡಿದಿರಿ. ಆ ರತ್ನರೂಪ ಗ್ರಂಥಗಳ ಭಾವವನ್ನು ಯಾರೂ ತಿಳಿಯಲಾರರು.

**ಶ್ಲೋಕ ॥ ಏಷು ದಭ್ರಮತೀನ್ ದಭ್ರಾನ್ ।**
**ಹಸತ್ಯುಚ್ಚೈಃ ಸತಾಂ ಸಭಾ ॥**
**ಚಿಂತಾಮಣೀಂಶ್ಚಿಂತಯಂತೀ ।**
**ವಿತಾನಸ್ಯಮಿತಾರ್ಥದಾನ್** ॥ ೮೫ ॥

ಭಾಮಿನಿ ॥ ಸ್ವಲ್ಪ ಶಬ್ದವಪರಿಮಿತಾರ್ಥಂ ।
ಬಲ್ಪ ತ್ವಾಂ ರಚಿಸಿರ್ಪ ಗ್ರಂಥಗಳ್ ।
ಕಲ್ಪ ಚಿಂತಾಮಣಿಗಳೆಂಬಾಲೋಚ್ಯ ಸುಜನ ಸಭೆ ॥

ಸ್ವಲ್ಪ ಶಬ್ದೆನೊ ಮಂದ ಮತಿಗಳೆ ।
ಅಲ್ಪ ವಾದರನಂತ ಭೀಷ್ಟದು ।
ಕಲ್ಪಿತವು ನೀಂ ಪೇಳ್ದೆನುತ ಅಪಹಾಸ್ಯ
ಮಾಡಿತದು ॥ ೮೫ ॥ ೮೯೪ ॥

ಮೇಲೆ ವಿವರಿಸಿದ ಸಕಲ ಗ್ರಂಥಗಳ ಮಹಾ ಮಹಿಮೆಯನ್ನು ಸಂಕ್ಷೇಪದಿಂದ ಹೇಳುತ್ತಾರೆ.

ಭಾವಾರ್ಥ:— ಶ್ರೀ ಸರ್ವಜ್ಞರೇ ಈ ಗ್ರಂಥಗಳಲ್ಲಿ ಶಬ್ದಗಳು ಸ್ವಲ್ಪವಾಗಿದ್ದರೂ ಅಪರಿಮಿತಾರ್ಥಂ =ಬಹಳವಾದ ಅರ್ಥವನ್ನು ಬೋಧಿಸುವ ಬಲ್ಪ = ಬಹು ಮಹತ್ತರ ವಾದ ಗ್ರಂಥಗಳು, ಚಿಂತಾಮಣಿ ರತ್ನಕ್ಕೆ ಕಲ್ಪ = ಸಮಾನವಾದವೆಂದು ಆಲೋಚನೆಯ ಮಾಡುವ ಸಜ್ಜನರ ಸಭೆಯು, ಈ ಗ್ರಂಥಗಳು ಕಡಿಮೆ ಶಬ್ದವುಳ್ಳವುಗಳೆ ಎಂಬ ಮೂಢರೆ ಇವು ಅಲ್ಪ = ಸಣ್ಣವಾದರೂ ಅನೇಕ ಇಷ್ಟಾರ್ಥಗಳನ್ನು ಕೊಡುತ್ತವೆ. ಮಂದಮತಿ ಗಳಾದ ನೀವು ನಿಮ್ಮ ಮನಸ್ಸಿಗೆ ಬಂದಂತೆ ಕಲ್ಪಿಸಿ ಹೇಳಿದಿರೆನುತ್ತ ಇವರನ್ನು ಅಪಹಾಸ ಮಾಡಿತು

ದೇವಲೋಕದಲ್ಲಿದ್ದ ಚಿಂತಾಮಣಿ ರತ್ನವು ಬಹು ಸಣ್ಣದಿದ್ದರೂ, ಬಯಸಿದ ಅನೇಕ ಅಭೀಷ್ಟೆಯನ್ನು ಕೊಡುವಂತೆ, ತಮ್ಮ ಗ್ರಂಥಗಳು ಸಣ್ಣವಿದ್ದರೂ, ಅನೇಕಾರ್ಥಗಳನ್ನು ಬೋಧಿಸತಕ್ಕವಿರುವವು.

ಅವು ಅಲ್ಪಗಳೆಂದು ತಿಳಿಯುವರು ಮೂಢರೆಂದು ಸಜ್ಜನ ಸಭೆಯ ಜನರು ಹಾಸ್ಯ ಮಾಡುತ್ತಾರೆ

**ಶ್ಲೋಕ ॥ ಅಪರೋಕ್ಷೇಷ್ವತ್ಯೇಸ್ಮಾಭಿ ।**
**ಗ್ರಂಥೇಷ್ವೇತೇಷು ಸತ್ಸ್ವಪಿ ॥**
**ಸತ್ಸ್ವಪೀಂದ್ರಾದಿಷು ಪುರಾ ।**
**ತಾರಕಾರಿರಿವಾಮರೈಃ ॥ ೮೬ ॥**

ಭಾಮಿನಿ ॥ ಮಧ್ವ ರಚಿಸಿದವಿನಿತು ಗ್ರಂಥಗ ।
ಳಿದ್ದರೆಯು ಪೂರ್ವದಲಿ ಇಂದ್ರಾ ।
ದಿದ್ದೊಡೆಯು ಸುರ ತಾರಕಾಸುರವೈರಿ ಗುಹನನ್ನು ॥
ಹೃದ್ಯ ಇಚ್ಚಿಸಿದಂತೆ ನಾವುಗಳ್ ।
ಸದ್ಯವಾಪೇಕ್ಷಿಪೆವು ಮಧ್ವರೆ ।
ಸದ್ವಿಮಲ ಮತ್ತೊಂದು ಗ್ರಂಥವು ಎನುತ
ಪ್ರಾರ್ಥಿಸಿದರ್ ॥ ೮೬ ॥ ೮೯೫ ॥

ಶ್ರೀಮದಾಚಾರ್ಯರನ್ನು ಕುರಿತು, ಬೇರೆ ಮತ್ತೊಂದು ಗ್ರಂಥ ರಚಿಸಲು ತ್ರಿವಿಕ್ರಮರ ಪ್ರಾರ್ಥನೆ.

ಶ್ರೀ ಸರ್ವಜ್ಞರು ರಚಿಸಿದ ಇಷ್ಟು ಗ್ರಂಥಗಳಿದ್ದರೂ, ಪೂರ್ವದಲ್ಲಿ ಇಂದ್ರಾದಿ ದೇವತೆಗಳಿದ್ದರೂ, ದೇವತೆಗಳು ತಾರಕಾಸುರನ ಶತ್ರುವಾದ, ಹೃದ್ಯ = ಮನೋಹರನಾದ ಷಣ್ಮುಖನನ್ನು ಬಯಸಿದಂತೆ, ಸಧ್ಯದಲ್ಲಿ ನಾವುಗಳು, ಸದ್ವಿಮಲ=ಸಮೀಚೀನವಾಗಿ ಸ್ಪಷ್ಟವಾಗಿ ಅರ್ಥಬೋಧಕವಾದ, ಮತ್ತೊಂದು ಗ್ರಂಥವು ಬೇಕೆಂದು ಅಪೇಕ್ಷಿಸುವೆವು. ಹೀಗೆ ಶ್ರೀ ಮಧ್ವಾಚಾರ್ಯರನ್ನು ಕುರಿತು ತ್ರಿವಿಕ್ರಮ ಪಂಡಿತಾಚಾರ್ಯರು ಪ್ರಾರ್ಥಿಸಿದರು.

**ಶ್ಲೋಕ ॥ ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ।**
**ಯುಕ್ತಯೋನೋ ದುರುದ್ಧರಾಃ ॥**
**ಮನೋ ಮೋಂದ್ಯಾತ್ಯತೋ ಗ್ರಂಥಂ ।**
**ವ್ಯಕ್ತತರ್ಕತತಿಂ ಕುರು ॥ ೮೭ ॥**

ಭಾಮಿನಿ ॥ ಮಹಮಹಿಮ ತಮ್ಮಿಂದ ಕೃತವಾ ।
ಮಹಿತ ಗ್ರಂಥದಿ ತಮಗೆ ಸಮ್ಮತ ।
ಮಹಯುಕುತಿಗಳನೇಕ ಗೂಢಾರ್ಥಗಳ ಪೇಳ್ವುದಕೆ ॥
ಮಹ ಗಭೀರವು ಅಲ್ಪಮತಿ ನಾಂ ।
ಗ್ರಹಿಸಲಾರೆವು ಎಮಗೆ ತಿಳಿಯಲು ।
ಸಹಿತ ವ್ಯಕ್ತದಿ ತರ್ಕಗಡಣಗಳೊಂದೆಡೆಗೆ ರಚಿಸೈ ॥ ೮೭ ॥೮೯೬॥

ಇನ್ನೊಂದು ಗ್ರಂಥವು ರಚಿಸುವದು ಹೇಗಿರಬೇಕೆಂದು ವಿವರಿಸುತ್ತಾರೆ.

ಭಾವಾರ್ಥ:— ಬಹು ಮಹಿಮಾವುಳ್ಳ ಮಧ್ವಾಚಾರ್ಯರೇ ಮಹಿತ = ಪೂಜ್ಯವಾದ ತಾವು ರಚಿಸಿದ ಗ್ರಂಥಗಳಲ್ಲಿ ತಮಗೆ ಬೇಕಾದ ಮಹತ್ತರವಾದ ಬಹುತರ್ಕ ಅನುಮಾನ ಗಳನ್ನು ಮತ್ತು ರಹಸ್ಯವಾದ ಅರ್ಥಗಳನ್ನು ಪೇಳಿದಕಾರಣ, ಬಹುಗಾಂಭೀರ್ಯವಾದವು. ಅವುಗಳ ಭಾವವನ್ನು ತಿಳಿಯಲು, ಮಂದಮತಿಗಳಾದ ನಾವು ಗ್ರಹಿಸಿ ತಿಳಿಯಲಿಕ್ಕೆ ಅಸಾಧ್ಯವಾದುವು. ಕಾರಣ ನಮ್ಮ ಬುದ್ಧಿಗೆ ತೋರಿ ಸ್ಪಷ್ಟವಾಗಿ ತಿಳಿಯುವ, ಸ್ಪಷ್ಟ ವಾಗಿರುವ ಯುಕ್ತಿಗಳ ಸಮೂಹವನ್ನು ಒಂದೇಕಡೆಗೆ ಸೇರಿಸಿ ಗ್ರಂಥರಚನೆ ಮಾಡಿರೆಂದು ಪ್ರಾರ್ಥಿಸಿದರು.

**ಶ್ಲೋಕ ॥ ಇತ್ಯರ್ಥಿತೋ ವ್ಯಧಾನ್ಮಧ್ವಃ ।**
**ಸೋऽನುವ್ಯಾಖ್ಯಾಂ ಸತಾಂ ಸುಧಾಮ್ ॥**
**ದುರ್ವಾದಿಗರ್ವಾದ್ರಿಪವಿಂ ।**
**ಮಾಯಿಧ್ವಾಂತರವಿದ್ಯುತಿಮ್ ॥ ೮೮ ॥**

ಭಾಮಿನಿ ॥ ಇನಿತು ವಿಕ್ರಮರಾರ್ಯ ಪ್ರಾರ್ಥಿತ ।
ಪ್ರಣಮಿತಾ ಮಧ್ವಾರ್ಯ ಸುಜನಕೆ ।
ಘನ ಅಮೃತದೋಲ್ ಸುಖಕರೀಂ ದುರ್ವಾದಿಗಿರಿ ಗರ್ವ ॥
ಹಣಿಯೆ ವಜ್ರಾಯುಧವು ಮಾಯಾ ।
ವಿನ ಮತದ ಅಂಧಃ ತಿಮಿರಹರ ।
ಇನಪ್ರಭಾ ಸದೃಶೀಂ ಸು ಅನುವ್ಯಾಖ್ಯಾನ
ರಚಿಸಿದರು ॥ ೮೮ ॥ ೮೯೭ ॥

ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ಪ್ರಾರ್ಥನೆಯಂತೆ ಶ್ರೀ ಮಧ್ವಾಚಾರ್ಯರು ಅನುವ್ಯಾಖ್ಯಾನವೆಂಬ ಗ್ರಂಥ ರಚಿಸಿದ್ದು.

ಭಾವಾರ್ಥ:— ಈ ಪ್ರಕಾರವಾಗಿ ತ್ರಿವಿಕ್ರಮ ಪಂಡಿತಾಚಾರ್ಯರಿಂದ ಪ್ರಣ ಮಿತಾ=ನಮಸ್ಕಾರ ಮಾಡಿಸಿಕೊಂಡ ಶ್ರೀ ಮಧ್ವಾಚಾರ್ಯರು ಸಜ್ಜನರಿಗೆ, ಘನಅಮೃತ= ಮಹಾಮಹಿಮೆಯುಳ್ಳ ಅಮೃತದಂತೆ, ಸುಖಕರೀಂ =ಸುಖವನ್ನು ಕೊಡತಕ್ಕದ್ದು ಮತ್ತು ದುರ್ವಾದಿಗಳ, ಗರ್ವ=ಅಹಂಕಾರವೆಂಬ, ಗಿರಿ=ಪರ್ವತವನ್ನು ಹಣಿಯಲು, ಇಂದ್ರ ದೇವರ ವಜ್ರಾಯುಧದಂತಿರುವುದು ಮತ್ತು ಮಾಯಾವಾದಿಗಳಾದ ಅದ್ವೈತ ಮತದ, ಅಂಧಃತಿಮಿರ ಅತಿಶಯವಾದ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡಲು, ಇನ ಪ್ರಭಾಸದೃಶೀಂ =ಸೂರ್ಯನಂತೆ ಪ್ರಕಾಶವುಳ್ಳ ಬ್ರಹ್ಮಸೂತ್ರಗಳ ಅರ್ಥಬೋಧಕವಾದ ಅನುವ್ಯಾಖ್ಯಾನವೆಂಬ ಗ್ರಂಥವನ್ನು ರಚಿಸಿದರು.

೧. ಈ ಗ್ರಂಥಕ್ಕೆ ಮೂರು ವಿಶೇಷಣಗಳನ್ನು ಕೊಟ್ಟಿರುವರು. ಇದನ್ನು ಸೇವಿಸುವ ಸುಜನಕೆ ಇದು ಅಮೃತವು=ಮೋಕ್ಷಪದವಿ ಕೊಡುವದು. ೨. ಪಂಡಿತ ಮನ್ಯಮಾನರಾದ ದುರ್ವಾದಿಗಳ ಅಹಂಕಾರವೆಂಬ ಗಿರಿಯನ್ನು ವಜ್ರಾಯುಧದಂತೆ, ದುರ್ವಾದಿಗಳ ಯುಕ್ತಿಗಳನ್ನು ಛೇದಿಸಲು, ಅಬಾಧಿತವಾದ ಧೃಡತರ ತರ್ಕಸಮೂಹಗಳುಳ್ಳದ್ದು. ೩. ಅದ್ವೈತ ಮತವೆಂಬ ಅಜ್ಞಾನರೂಪ ಕತ್ತಲೆ ಹರಣಮಾಡಲು, ಸೂರ್ಯನಂತೆ ಇರುವ ಅನುವ್ಯಾಖ್ಯಾನವೆಂದು ಹೇಳಿದ್ದು ಸರಿಯಾದದ್ದು. ಸೂಜ್ಞರು ಇನ್ನು ಹೆಚ್ಚು ಆಲೋಚಿಸಬಹುದಾದುದು.

**ಶ್ಲೋಕ ॥ ಯುಗಪದ್ರಚಯನ್ನೇನಾಂ ।**
**ಕದಾಚಿತ್ಸ ನಿರಂತರಮ್ ॥**
**ಚತುರಶ್ಚತುರಃ ಶಿಷ್ಯಾಂ ।**
**ಲ್ಲೀಲಯಾ ಲೇಖಯತ್ ಖಲು ॥ ೮೯ ॥**

ಭಾಮಿನಿ ॥ ಇದೆ ಕದಾಚಿದ್ರಚಿಪ ಸಮಯದಿ ।
ಚದುರ ಮಧ್ವರು ಏಕ ಕಾಲದಿ ।
ಮುದದಿ ಚತುರಾಧ್ಯಾಯ ಮಾಡುತ ನಾಲ್ಕು ಶಿಷ್ಯರಿಗೆ ॥
ಪದೊಪದಿಗೆ ಅವಕಾಶವೀಯದೆ ।
ಬುಧರನಾಯಾಸದಲಿ ಒಂದೊಂ ।
ದದರ ಅಧ್ಯಾಯಗಳ ಬರೆಸಿದರಿದೆ ಋಜುಸ್ಫೂರ್ತಿ
(ಜ್ಞಾನ) ॥ ೮೯ ॥ ೮೯೮ ॥

ಶ್ರೀಮದಾಚಾರ್ಯರು ಅನುವ್ಯಾಖ್ಯಾನ ಗ್ರಂಥ ರಚಿಸುತ್ತ ಹೇಗೆ ಬರಸಿದರೆಂದು ಅವರ ಮಹಿಮೆ ಹೇಳುತ್ತಾರೆ.

ಭಾವಾರ್ಥ:— ಚದುರ =ಜಾಣರಾದ ಶ್ರೀ ಮಧ್ವಾಚಾರ್ಯರು, ಕದಾಚಿತ = ಒಂದಾನೊಂದು ಕಾಲದಲ್ಲಿ ಅಂದರೆ ಈ ಅನುವ್ಯಾಖ್ಯಾನ ಗ್ರಂಥರಚನಾ ಮಾಡುವ ಕಾಲದಲ್ಲಿ ಯುಗಪದ=ಏಕಕಾಲದಲ್ಲಿ, ಒಮ್ಮೇಲೆ, ಮುದದಿ = ಆನಂದದಿಂದ ಯಾವತರದ ವಿಚಾರವಿಲ್ಲದೆ, ನಾಲ್ಕು ಅಧ್ಯಾಯಗಳನ್ನು ರಚಿಸುತ್ತ ನಾಲ್ಕು ಜನ ಶಿಷ್ಯರಿಗೆ ನಿರಂತರ ಅವಕಾಶ ಕೊಡದೇ ಯುಗಪತ್=ಏಕವಾರ ಉಚ್ಚಾರ ಮಾತ್ರದಿಂದ ಶಿಷ್ಯರಿಗೆ ಒಂದಾವರ್ತಿ ಹೇಳುವದರಿಂದ ಅವರ ಅನುಗ್ರಹದಿಂದಲೇ, ಆ ಆ ಶಿಷ್ಯರಿಗೆ ಆ ಆ ಅಧ್ಯಾಯಗಳ ಪ್ರತಿಭಾತ ಅನುಗ್ರಹ ಮತ್ತು ತಾವು ಋಜುಶ್ರೇಷ್ಠರೆಂಬ ಜ್ಞಾನಸ್ಫೂರ್ತಿಯನ್ನು ತೋರುತ್ತ, ಅನಾಯಾಸದಿಂದಲೇ ಒಬ್ಬೊಬ್ಬ ಶಿಷ್ಯರಿಂದ ಒಂದೊಂದು ಅಧ್ಯಾಯನ್ನು ಒಂದೇ ಕಾಲದಲ್ಲಿ ಬರೆಸಿದರು.

ಇದು ಋಜುಗಳ ಸ್ಫೂರ್ತಿ ಜ್ಞಾನವೆಂದು ದಾಸಾರ್ಯರು ಹೇಳಿರುವರು. ಭಾವಪ್ರಕಾಶಕಾರರಾದ ಈ ಗ್ರಂಥ ಕರ್ತೃಗಳು ಭಾವಪ್ರಕಾಶಿಕೆಯಲ್ಲಿ " ನಿರಂತರ ಮಲೇಖ

ಯತ್'' ಒಬ್ಬರಿಗೂ ಅವಕಾಶ ಕೊಡದೆ ನಿರಂತರ ಬರೆಸಿದರೆಂದು ಹೇಳಿದ್ದಾರೆ. ಇದು ಹೀಗೆ ಬರೆಸಿದರೆಂದು ಸಾಮಾನ್ಯ ಮಾನವ ಬುದ್ಧಿಯಿಂದ ಊಹಿಸತಕ್ಕದ್ದಲ್ಲ. ಋಜುಗಳ ಜ್ಞಾನ ಅವರ ಸ್ಫೂರ್ತಿ ಅಲ್ಪಮತಿಗಳಾದ ನಮ್ಮಿಂದ ತಿಳಿಯಲು ಶಕ್ಯವಿಲ್ಲ. ಈ ಮಹತ್ತರ ಗೌಪ್ಯ ವಿಷಯವನ್ನು ಸದ್ಗುರುಗಳ ದ್ವಾರಾ ಸಪ್ರಮಾಣ ಗ್ರಂಥಗಳಿಂದ ತಿಳಿಯುವದು.

ಇಲ್ಲಿ ಕೆಲವರ ಊಹೆ ಏನಂದರೆ, ನಾಲ್ಕು ಅಧ್ಯಾಯದ ಒಂದೊಂದು ಶ್ಲೋಕಗಳನ್ನು ಕ್ರಮವಾಗಿ ಒಬ್ಬರಿಗೊಂದು ಹೇಳಿ. ಆ ಶಿಷ್ಯರು ಮೊದಲನೇ ಅಧ್ಯಾಯ, ಶ್ಲೋಕ ಬರೆಯುವದರೊಳಗಾಗಿಯೇ ಎರಡನೇದವರಿಗೆ ಎರಡನೇ ಅಧ್ಯಾಯ, ಮೂರನೇದವರಿಗೆ ಮೂರನೇ ಅಧ್ಯಾಯ, ಶ್ಲೋಕ ನಾಲ್ಕನೇಯವರಿಗೆ ನಾಲ್ಕನೇ ಅಧ್ಯಾಯ, ಶ್ಲೋಕ ಹೀಗೆ ಕ್ರಮವಾಗಿ ಹೇಳಿ ಬರೆಸಿರುವರೆಂದು ಶ್ರೀಮದಾಚಾರ್ಯರ (ಸರ್ವಜ್ಞರ) ಜ್ಞಾನಪ್ರಭಾವವೆಂದು ಹೇಳುವದು ನಿಜ

**ಶ್ಲೋಕ ॥ ಯುಕ್ತಾಯಾ ಯುಕ್ತಿಮಾಲಾಯಾಃ ।**
**ಪ್ರೋಕ್ತಾಯಾಸ್ತತ್ರ ಚಾತ್ಮನಾ ॥**
**ವ್ಯಕ್ತಂ ಚಕ್ರೇ ವಿವರಣಂ ।**
**ಕವೀಂದ್ರೈರೇಷ ದುಷ್ಕರಮ್ ॥ ೯೦ ॥**

ಭಾಮಿನಿ ॥ ಪೂರ್ಣರನು ವ್ಯಾಖ್ಯಾನ ಗ್ರಂಥದಿ ।
ಪೂರ್ಣನ್ಯಾಯ ಸಮೂಹಗಳ ತಾ ।
ತೂರ್ಣ ಪೇಳಿದ ಯೋಗ್ಯ ಯುಕುತಿಗಳ್ ಮಾಲಿಕೆಗೆ ಮುದದಿ ॥
ಧಾರ್ಣಗೈಯ್ಯಲು ಬುಧರ ಸಾಧ್ಯವು ।
ಪೂರ್ವಪಕ್ಷ ಸಿದ್ಧಾಂತರೂಪದ ।
ಕಾರ್ಣ ವ್ಯಕ್ತಂ ನ್ಯಾಯವಿವರಣಗ್ರಂಥ ಮಾಡ್ದೆ
ಪ್ರಭೋ ॥ ೯೦ ॥ ೮೯೯ ॥

ಭಾವಾರ್ಥ:— ಪ್ರಭೋ = ಸಮರ್ಥರಾದ ಪೂರ್ಣ ಪ್ರಜ್ಞಾಚಾರ್ಯರೇ ಈ ಅನುವ್ಯಾಖ್ಯಾನ ಗ್ರಂಥದಲ್ಲಿ ತಾವು ಬಹು ತ್ವರದಿಂದ ಹೇಳಿದ ಪೂರ್ಣವಾದ ತರ್ಕ ನ್ಯಾಯಗಳ ಯೋಗ್ಯವಾದ, ಮಾಲಿಕೆಗೆ=ಸಮೂಹಗಳಿಗೆ, ಪಂಡಿತ ಶ್ರೇಷ್ಠರಿಂದ ಮಾಡಲಿಕ್ಕೂ ಮತ್ತು ಅದರ ಭಾವವನ್ನು ಧಾರ್ಣ =ದಾರ್ಢ್ಯದಿಂದ ತಿಳಿಯಲಸಾಧ್ಯವಾದದ್ದು. ಈ ಅನುವ್ಯಾಖ್ಯಾನದಲ್ಲಿ ಹೇಳಿದ ಪೂರ್ವಪಕ್ಷ ಮತ್ತು ಸಿದ್ಧಾಂತರೂಪವಾದ, ಸ್ಪಷ್ಟವಾದ ಯುಕ್ತಿಗಳಿಂದ ಸಹಿತವಾದ ನ್ಯಾಯವಿವರಣವೆಂಬ. ಇನ್ನೊಂದು ಗ್ರಂಥವು ಅನ್ಯರಿಂದ ಮಾಡಲು ಸಾಧ್ಯವಾಗದಿದ್ದ ಈ ಗ್ರಂಥವನ್ನು ತಾವೇ ಮಾಡಿದಿರಿ. **ಮುಂದೆ ಶ್ರೀ ಸರ್ವಜ್ಞರ ತಮ್ಮಂದಿರು, ಶ್ರೀ ವಿಷ್ಣುತೀರ್ಥರ ಮಹಿಮೆಯನ್ನು ಹೇಳುತ್ತಾರೆ.**

# ಒ ಪ್ಪೋ ಲೆ

| ಪುಟ | ಪಂಙ್ತಿ | ಪದ್ಯ | ತಪ್ಪು | ಒಪ್ಪು |
|---|---|---|---|---|
| | | | **೧೪ನೇ ಸರ್ಗದಲ್ಲಿ** | |
| ೬೨೦ | ೧೩ | ೧ | ತುಂಬಿರತಿ | ತುಂಬಿದತಿ |
| ೬೨೧ | ೧೫ | ಶ್ಲೋ. ೨ | ಭೂಪ್ಯೈ, | ಭೂಷ್ಯೈ. |
| ೬೨೩ | ೫ | ಪ. ೪ | ಹೇಸಃಖ | ಹೇಸುಮುಖ |
| ೬೨೩ | ೨೯ | ಶ್ಲೋ. ೫ | ಸೋಯಂ | ಸೋಽಯಂ |
| ೬೨೭ | ೧೫ | ಶ್ಲೋ. ೯ | ಪ್ಯರ್ಥ | ಪ್ವಾರ್ಥ |
| ೬೨೮ | ೧೦ | ಶ್ಲೋ. ೧೦ | ಹೇತೊ | ಹೇತೋಃ |
| ೬೨೯ | ೪ | ಶ್ಲೋ. ೧೧ | ಗುರು ಜಲ | ಗುರುಷು ಜಲ |
| ೬೩೦ | ೧ | ಪ. ೧೨ | ವಾದಿಗಳನು | ——— |
| ೬೩೩ | ೨೬ | ಶ್ಲೋ. ೧೬ | ದಿಕ್ಷುರಂಧ್ರೀಃ | ದಿಕ್ಪುರಂಧ್ರೀಃ |
| ೬೩೩ | ೨೭ | ಪ ೧೬ | ನಿರ್ವಲಾಂಬರವು | ನಿರ್ಮಲಾಂಬರವು |
| ೬೩೪ | ೨೭ | ಶ್ಲೋ. ೧೭ | ಕೇತೋ | ಕೇತೋಃ |
| ೬೪೦ | ೪ | ಶ್ಲೋ. ೨೩ | ಪ್ರಣಾತಿ | ಪ್ರಣೌತಿ |
| ೬೪೧ | ೧೧ | ಪ. ೨೪ | ಓೀದುತಿರೆ | ಓದುತಿರೆ |
| ೬೪೫ | ೨೭ | ಶ್ಲೋ. ೨೯ | ದನ್ಯಮಾನ್ಯಾ | ದ್ಧನ್ಯಮಾನ್ಯಾ |
| ೬೫೧ | ೧೦ | ಪ. ೩೩ | ತಾಕ್ಷನೆಂಬೋ | ತಾಕ್ಷ್ವದೆಂಬೊ |
| ೬೫೨ | ೮ | ಶ್ಲೋ. ೩೪ | ಶ್ರೀಪ್ರಕಷಂ | ಶ್ರೀಪ್ರಕರ್ಷಂ |
| ೬೫೩ | ೨೬ | ಪ ೩೫ | ವಲ್ಲಿವೀರೂಧಜ | ವಲ್ಲಿಜ ವಿರೂಧಜಂ |
| ೬೫೩ | ೨೭ | ಪ. ೩೫ | ತರುಜಜಾತಿಮಾಲತಿ | ತರುಜಾತಿಮಾಲತಿಯು |
| ೬೫೪ | ೧೯ | ಶ್ಲೋ. ೩೬ | ಗುಣಮುಜ್ಜೈಃ | ಗುಣಮುಚ್ಚೈಃ |
| ೬೫೬ | ೮ | ಪ. ೩೭ | ಕ್ಪಮೆಯ | ಕ್ಷಮೆಯ |
| ೬೬೦ | ೨೧ | ಶ್ಲೋ ೩೮ | ಕೃಶಪರಮ | ಕೃತಪರಮ |
| ೬೬೩ | ೨ | ಶ್ಲೋ ೪೦ | ನವಿತನರುಹ | ನವಿ ತನುರುಹ |
| ೬೬೩ | ೫ | ಪ. ೪೦ | ಪರಿಕ್ಷ ಪುತ | ಪರಿಕ್ಲ ಪುತ |
| ೬೬೩ | ೧೦ | ಪ. ೪೦ | ನಾನಾ ಹೃದ್ಯ | ನಾನಾ ಹೃದ್ಯ |
| ೬೬೪ | ೨೭ | ಶ್ಲೋ ೪೨ | ಅಹುವಹ | ಅಹಮುಹ |
| ೬೬೬ | ೪ | ಪ. ೪೩ | ಸನ್ಯಾಸಿಸಿದರು | ಸನ್ಮಾನಿಸಿದರು |
| ೬೬೬ | ೨೧ | ಪ. ೪೪ | ಪರಿಯಾ | ಪರಿಚಯಾ |

| | | | | | |
|---|---|---|---|---|---|
| ೬೬೭ | ೧೭ | ಪ. | ೪೫ | ಮಾಧ್ವಾರ್ಯರ್ಗಂ | ಮಾಧ್ವಾರ್ಯರ್ಗರಂ |
| ೬೬೮ | ೧೧ | ಪ. | ೪೬ | ನಕ್ಷ್ತಗಂರರಂ | ನಸ್ತ್ರಂಗತಂ |
| ೬೭೧ | ೧೨ | ಶ್ಲೋ | ೪೯ | ಪರಿಹೃಷ್ವ | ಪರಿಹೃಷ್ಟ |
| ೬೭೧ | ೨೧ | ಪ. | ೪೯ | ನಕ್ಪತ್ರ | ನಕ್ಷತ್ರ |
| ೬೭೨ | ೧೮ | ಪ. | ೫೦ | ವಿಧಿಯಲಿ | ಧಿಯಲಿ |
| ೬೭೪ | ೧೮ | ಪ. | ೫೨ | ಬಿಸಜ | ಬಿಸಿಜ |
| ೬೭೫ | ೧೪ | ಶ್ಲೋ | ೫೩ | ದ್ವಿ-ಜಾವಲಿ, | ದ್ವಿ ಜಾವಲಿ |
| ೬೭೫ | ೨೩ | ಪ. | ೫೩ | ಮಾತಾರ್ಯರ್ಗರ್ | ಮಾಚಾರ್ಯರ್ಗ್ |
| ೬೭೬ | ೨೪ | ಪ. | ೫೪ | ಸುಂದಲಾಚಾರ್ಯರ್ಗಂದು | ಸುಂದರಾಚಾರ್ಯರ್ಗಂದು |

## ೧೫ನೇ ಸರ್ಗದಲ್ಲಿ

| | | | | | |
|---|---|---|---|---|---|
| ೭೧೬ | ೮ | ಶ್ಲೋ | ೧ | ಭಯೋಬೋಧ | ಭೂಯೋಬೋಧ |
| ೭೨೫ | ೧೧ | ಪ. | ೮ | ಚ್ಞಾನ | ಜ್ಞಾನ |
| ೭೩೬ | ೧ | ಶ್ಲೋ. | ೧೪ | ವರಿಣಾಮಿ | ಪರಿಣಾಮಿ |
| ೭೪೩ | ೧೫ | ಪ. | ೧೯ | ಪಮಾತ್ಮನಿಗೆ | ಪರಮಾತ್ಮನಿಗೆ |
| ೭೫೨ | ೧ | ಶ್ಲೋ | ೨೪ | ಮೇವ್ಯಾನ್ಯೆ | ಮೇವಾನ್ಯೆ |

೧೪ನೇ ಸರ್ಗವರೆಗೆ ಪ್ರೂಫ ತಿದ್ದಲಿಕ್ಕೆ ಎರಡನೇ ವೈಷ್ಣವ ಬಂಧುಗಳಿಗೆ ಗೊತ್ತು ಮಾಡಿತ್ತು ಅವರು ಸರಿಯಾಗಿ ತಿದ್ದದಿದ್ದಕಾರಣ, ೧೪ನೇ ಸರ್ಗ ಪದ್ಯ ಶ್ಲೋಕದಲ್ಲಿ, ಇಷ್ಟು ತಪ್ಪುಗಳಿರುವವು, ಅಲ್ಲದೇ ಭಾವಾರ್ಥದಲ್ಲಿ ಇನ್ನೂ ಅನೇಕ ತಪ್ಪುಗಳಿರುವವು. ತಾವು ಸ್ವಲ್ಪು ಶ್ರಮಪಟ್ಟು ತಿದ್ದಿಕೊಂಡು ಓದುವಿರೆಂದು ವಿನಂತಿ.

ಇಷ್ಟು ತಪ್ಪುಗಳಿರಬಾರದು ರೊಕ್ಕ ಕೊಟ್ಟು ಪರರಿಗೆ ಒಪ್ಪಿಸಿದ ಈ ಮಹದಪರಾಧ ವನ್ನು ಕ್ಷಮಿಸುವಿರೆಂದು ಕೋರುತ್ತೇ.

ಹನುಮಂತ

ಗೊರಬಾಳ

## ವಿನಂತಿ

ಶಕೆ ೧೮೬೪ ರಿಂದ ವಿಶ್ವ ಪ್ರಯತ್ನ ಮಾಡಿದರೆ ಈ ವರ್ಷ ೨೦೦ ಪುಟವಾಗುವಷ್ಟು ಕಾಗದ ದೊರೆತಕಾರಣ ೫ನೇ ಭಾಗ ಅಚ್ಚಾಗಿದೆ. ೬ನೇ ಪ್ರಕಟನೆಯಂತೆ ಈಗ (೨೧೬) ಪುಟ ಪ್ರಕಟಿಸಿದೆ. ಕಾಗದ ದೊರೆಯದಿದ್ದ ಅನಿವಾರ್ಯ ಕಾರಣದಿಂದ, ೬ನೇ ಭಾಗಕ್ಕೆ ಗ್ರಂಥ ಉಳಿಯಿತು. ಈ ಸಾರೆ, ಶ್ರೀ ಮಧ್ವ ನವಮಿಗೆ ಶ್ರೀ ಹರಿ ವಾಯುಗಳು ಗ್ರಂಥ ಪೂರೈಸಲೆಂದು ಪ್ರಾರ್ಥನೆ.